# ತಾರೆಗಳ ತೋಟದಿಂದ ಚಂದಿರ ಬಂದ

ಮಕ್ಕಳಿಗೆ ತಿನ್ನಲವನು ಪಾರ್ಲೆ ಗ್ಲುಕೋ ತಂದ

ಪುಟ್ಟ ಮಕ್ಕಳಿಗೆ ಬಲು ಇಷ್ಟ

## ಅಪೂರ್ವವಾದ ರುಚಿ ತುಂಬಿ ತುಳುಕುವ ಶಕ್ತಿ




ಪಾರ್ಲೆ ಗ್ಲುಕೋ ಬಿಸ್ಕಿಟ್‌ಗಳು ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ ಹಿತಕಾರಿ ಸತ್ವಗಳಿಂದ ಸಮೃದ್ಧವಾಗಿವೆ.



ವರ್ಲ್ಡ್ ಸಿಲೆಕ್ಷನ್ ಅವಾರ್ಡ್‌ನ ವಿಜಯಿ

**ಪಾರ್ಲೆ**

**ಗ್ಲುಕೋ – ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್**

ಕಸ್ತೂರಿ



ವ್ಯವಸ್ಥಾಪಕ-ಸಂಪಾದಕ :
ರಂಗನಾಥ ದಿವಾಕರ

ಪ್ರಧಾನ ಸಂಪಾದಕ :
ಖಾದ್ರಿ ಶಾಮಣ್ಣ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ:
ವ್ಯಾಘ್ರ
ಸದಾನಂದ

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟಣೆಗಾಗಿ ಕಳುಹಿಸುವ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದಿರಬೇಕು. ಲೇಖಕರ ಹೆಸರು ವಿಳಾಸ ಸ್ಪಷ್ಟವಿರಬೇಕು. ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಮೂಲ ಲೇಖಕರ ಮತ್ತು ಪ್ರಕಾಶಕರ ಹೆಸರು ವಿಳಾಸಗಳಿರಬೇಕು. ಇಂಥ ಲೇಖನಗಳಿಗೆ ಪೂರ್ವಾನುಮತಿ ದೊರಕಿಸಿಕೊಂಡರೆ ಉತ್ತಮ. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ, ಜೊತೆಗೆ ಸಾಕಷ್ಟು ಅಂಚೆ ಚೀಟಿಗಳನ್ನು ಇರಿಸಿ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗೆ ಇದೆ.

## ಚಂದಾದಾರರಿಗೆ ಸೂಚನೆ

ಕಸ್ತೂರಿ ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲುಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

**ಚಂದಾ ದರ**

| | | |
|---|---|---|
| ೩ ವರ್ಷ (ಅಂಚೆ ಸೇರಿ) | | ರೂ. ೩೫-೦೦ |
| ೨ ವರ್ಷ | ,, | ರೂ. ೨೫-೦೦ |
| ೧ ವರ್ಷ | ,, | ರೂ. ೧೪-೦೦ |
| ಅರ್ಧ ವರ್ಷ | ,, | ರೂ. ೭-೫೦ |

KASTURI July 1977

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ




**ಚೆನ್ನಾಗಿದೆ**

ಜೂನ್ ೭೭ರ 'ಕಸ್ತೂರಿ' ಸಂಚಿಕೆಯಲ್ಲಿ ಪ್ರಕಟವಾದ 'ಬಂದನಿಕೆ' ಮತ್ತು 'ಮೂರು ಗಾಲಿಗಳು' ಈ ಎರಡು ಕಥೆಗಳು ತುಂಬಾ ಸ್ವಾರಸ್ಯದಿಂದ ಕೂಡಿರುತ್ತವೆ. ಕೆ. ಚಂದ್ರಮೌಳಿಯವರ 'ಪೇಚಿನ ಪ್ರಸಂಗಗಳು' ಸೊಗಸಾಗಿ ಬಂದಿದೆ. ಈ ತಿಂಗಳ 'ಇದುವೆ ಜೀವ ಇದು ಜೀವನ' ಮತ್ತು 'ನಗೆಮಲ್ಲಿಗೆ' ವಿಭಾಗಗಳೂ ಚೆನ್ನಾಗಿವೆ.

ಕೊಲ್ಲಾಪುರ —ಟಿ. ಸಿ. ಗುರುಸ್ವಾಮಿ
(ಚಿತ್ರದುರ್ಗ ಜಿಲ್ಲೆ)

**ಬಂದನಿಕೆ**

ಕಸ್ತೂರಿ ಜೂನ್ ೧೯೭೭ರ ಸಂಚಿಕೆಯಲ್ಲಿನ 'ಬಂದನಿಕೆ' ಕಥೆಯಲ್ಲಿ, "ಹಲೋ, ನಾನು ಬಾಲಸುಬ್ರಮಣ್ಯಮ್... ಇಂದು ಸಂಜೆ ೫ ಕ್ಕೆ ಬರುತ್ತೇನೆ," ಎಂದು ಡಾಕ್ಟರಿಗೆ, ಬಾಲಸುಬ್ರಮಣ್ಯಮ್ ಅವರು ಫೋನ್ ಮಾಡಿದ ಅಂಶ ೭೫ನೇ ಪುಟದ ೩ನೇ ಪ್ಯಾರಾದಲ್ಲಿದೆ. ಆದರೆ ೭೮ ನೇ ಪುಟದ ೩ನೇ ಪ್ಯಾರಾದಲ್ಲಿ ಕಥೆಗಾರರು ಬಾಲಸುಬ್ರಮಣ್ಯಮ್ ಅವರು ಡಾಕ್ಟರ್‌ನನ್ನು ಕಾಣುವ ಮೊದಲೆಂದೂ ಫೋನ್ ಮಾಡಿದವರಲ್ಲ ಎಂದು ಬರೆದಿದ್ದಾರೆ. ಏನಿದರ ಅರ್ಥ?

ಕಾಸರಗೋಡು — ವಿ. ಗೋಪಾಲ

**ಅಶ್ವತ್ಥ ವೃಕ್ಷ**

ಜೂನ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ಬಿ. ಆರ್. ವಾಡಪ್ಪಿಯವರ ಕವನ 'ಅಶ್ವತ್ಥ ವೃಕ್ಷ'ವನ್ನು ಕುರಿತು ಈ ಪ್ರತಿಕ್ರಿಯೆ. ಇಂದಿನ ವೈಜ್ಞಾನಿಕ ಯುಗದಲ್ಲಿಯೂ, ಮೂಢ ನಂಬಿಕೆಗಳಿಗೆ ಮರುಳಾಗಿಯೋ ಸಾಂಪ್ರದಾಯಿಕವಾಗಿ ನಡೆದು ಬಂದಿದೆ ಎಂತಲೋ ಮರಕ್ಕೆ ಪ್ರದಕ್ಷಿಣೆ ಹಾಕಿ, ಮಕ್ಕಳ ಫಲ ಬೇಡುವವರು ಇನ್ನೂ ಇದ್ದಾರಲ್ಲ ಎಂಬುದೇ ಕೊರಗು.

ಮೈಸೂರು —ಆರ್. ಜಿ. ಹಳ್ಳಿನಾಗರಾಜ್

**ಕೆರಳಿದ ಚಿರತೆ**

ಜೂನ್ 'ಕಸ್ತೂರಿ'ಯಲ್ಲಿ 'ಕೇಶಿ' ಅವರು ಬರೆದ 'ಕೆರಳಿದ ಚಿರತೆ' ತುಂಬಾ ಸ್ವಾರಸ್ಯಕರವೂ ಕುತೂಹಲವನ್ನು ಕೆರಳಿಸುವಂಥದೂ ಆಗಿತ್ತು. ಇನ್ನು ಮುಂದೆ ಸಹ ತಾವು ಇಂಥ ಸಾಹಸದ ಅನುಭವ ಕಥನಗಳನ್ನು ಪ್ರಕಟಿಸುವಿರೆಂದು ಆಶಿಸುವೆ.

ವಾಡಿ -ವಿ. ಕೆ. ದೇಶಪಾಂಡೆ

**ಇನ್ನೂ ಬೇಕು**

'ಕಸ್ತೂರಿ'ಯ ಮೇ ಸಂಚಿಕೆಯನ್ನು ಓದಿದೆನು. ಈ ತಿಂಗಳ ಸಂಚಿಕೆ ಅಷ್ಟೇನೂ ಉತ್ತಮವಿದ್ದಂತೆ ಕಾಣಿಸುವುದಿಲ್ಲ.

ಈ ಸಂಚಿಕೆಯ 'ನಾಯಿಯ ಬಾಲ,' 'ಬಂದನಿಕೆ,' 'ಔದಾರ್ಯವೋ ಆತ್ಮ ವಂಚನೆಯೋ?' 'ಪ್ರೊಫೆಸರ್ ಕೋಸಾಂಬಿ' ಲೇಖನಗಳು ಸಾಮಾನ್ಯ ಮಟ್ಟಕ್ಕಿಂತ ಉತ್ತಮವಿದ್ದರೂ 'ಪತಿಯಾಳಾದ ಕುದುರೆ ರೈಲು,' 'ನಗೆಮಲ್ಲಿಗೆ' ಗಳು ಉತ್ತಮವಿರಲಿಲ್ಲ. 'ಯಕ್ಷಗಾನದ ಹೆಗಡೆಯವರು' ಲೇಖನವನ್ನು ಇನ್ನೂ ಹೆಚ್ಚು ವಿಸ್ತರಿಸಬೇಕಿತ್ತು.

ಮಾರ್ಚ್‌ನಲ್ಲಿ ಜರುಗಿದ ಲೋಕಸಭಾ ಚುನಾವಣೆಯಲ್ಲಿ ಉಂಟಾದ ಶೀತಲ ಕ್ರಾಂತಿಯನ್ನು ಸ್ವಾಗತಿಸಿದ ಇನ್ನೂ ಹೆಚ್ಚು ಲೇಖನಗಳನ್ನು 'ಕಸ್ತೂರಿ'ಯಲ್ಲಿ ನಿರೀಕ್ಷಿಸಿದ್ದೆ, ಆದರೆ ಬರಲೇ ಇಲ್ಲ. ಭಾರತದ ಪ್ರಜಾಪ್ರಭುತ್ವವನ್ನು ಉಳಿಸಿದ ಜನತೆಯ ನಾಯಕ ಶ್ರೀ ಜಯಪ್ರಕಾಶ ನಾರಾಯಣರ ಬಗ್ಗೆ ಲೇಖನಗಳನ್ನು ಪ್ರಕಟಿಸಬೇಕಾಗಿ ವಿನಂತಿ. ಅಲ್ಲದೆ ಶ್ರೀ ಜೆ. ಪಿ. ಯವರ 'ಸೆರೆಮನೆಯ ದಿನಚರಿ'ಯನ್ನು 'ಕಸ್ತೂರಿ'ಯ ಪುಸ್ತಕ ವಿಭಾಗದಲ್ಲಿ ಸಂಗ್ರಹಿಸಿ ಪ್ರಕಟಿಸಬೇಕು.

ಹೊನ್ನೇಸರ -ಮಂಜುನಾಥ ತಿಮ್ಮಪ್ಪ ಹೆಗಡೆ

**ಉತ್ತಮ ಲೇಖನ**

ಮೇ ಹಾಗೂ ಜೂನ್ ೧೯೭೭ರ ಸಂಚಿಕೆಗಳಲ್ಲಿ ತಾವು ಪ್ರಕಟಿಸಿರುವ ಶ್ರೀ ಜೆ. ಆರ್. ಲಕ್ಷ್ಮಣರಾಯರ 'ಅನುವಂಶಿಕ ಸಂಕೇತ ಭಾಷೆ' ಎಂಬ ಲೇಖನ ಅತ್ಯುತ್ತಮವಾಗಿದೆ. ಬಹು ಕ್ಲಿಷ್ಟವಾದ ವಿಷಯವನ್ನು ಸಾಮಾನ್ಯ ಓದುಗರೂ ಬಹು ಬೇಗ ಗ್ರಹಿಸುವಂತೆ, ಅತ್ಯಂತ

ಸುಂದರ ಹಾಗೂ ಸರಳ ಶೈಲಿಯಲ್ಲಿ ನೀಡಿದ್ದಾರೆ, ಲೇಖಕರು.

ಈ ಮಟ್ಟದ ಲೇಖನಗಳು 'ಕಸ್ತೂರಿ'ಯಲ್ಲಿ ಇನ್ನೂ ಬರಲಿ.

ಭೋಪಾಳ -ಬಿ.ಎನ್. ರಾವ್

**ಯಕ್ಷಗಾನದ ಹೆಗಡೆಯವರು**

ನಿಮ್ಮ ಜೂನ್ ಸಂಚಿಕೆಯಲ್ಲಿ ಉತ್ತರ ಕನ್ನಡದ ಯಕ್ಷಗಾನ ಕಲಾವಿದ ಶ್ರೀ ಚಿಟ್ಟಾಣಿ ರಾಮಚಂದ್ರ ಹೆಗಡೆಯವರ ಕುರಿತ ಲೇಖನ ಓದಿ ಸಂತೋಷವಾಯಿತು.

ಚಿಟ್ಟಾಣಿ ಹೆಗಡೆಯವರು ಅಭಿಜಾತ ಕಲಾವಿದರೆನ್ನುವುದರಲ್ಲಿ ಸಂಶಯವಿಲ್ಲ. ಆದರೆ ಇಡೀ ಲೇಖನದಲ್ಲಿ ರಾಷ್ಟ್ರಪ್ರಶಸ್ತಿ ವಿಜೇತ ಯಕ್ಷಗಾನ ಕಲಾವಿದ ಕೆರೆಮನೆ ಶಿವರಾಮ ಹೆಗಡೆಯವರಲ್ಲದೆ ಕೆರೆಮನೆ ಮಹಾಬಲ ಹೆಗಡೆ ಮತ್ತು ಇಡಗುಂಜಿ ಮೇಳದ ಸಂಚಾಲಕ ಶಂಭು ಹೆಗಡೆಯವರಂಥ ಸಮರ್ಥ ಕಲಾವಿದರ ಹಾಗು ಚಿಟ್ಟಾಣಿಯವರ ಮೇಲೆ ಮೇಲಿನಿಬ್ಬರೂ ಪ್ರಭಾವ ಬೀರಿರುವ ಪ್ರಸ್ತಾಪ ಬಾರದಿರುವುದು ಮಾತ್ರ ನನ್ನ ದೃಷ್ಟಿಯಲ್ಲಿ ಆಕ್ಷೇಪಾರ್ಹ. 'ಉದಯವಾಣಿ'ಯಲ್ಲಿ ಬಂದ ಒಂದು ಸಂದರ್ಶನದ ಲೇಖನದಲ್ಲಿ, ಉತ್ತರ ಕನ್ನಡದಲ್ಲಿ ಕೆರೆಮನೆ ಮಹಾಬಲ ಹೆಗಡೆಯವರೇ ತಮಗಿಂತ ಸಮರ್ಥ ಕಲಾವಿದರೆಂದು ಚಿಟ್ಟಾಣಿಯವರೇ ಹೇಳಿದರೆಂದು ಪ್ರಕಟವಾಗಿದೆ.

ವಸ್ತುಸ್ಥಿತಿ ಹೀಗಿರುವಾಗ ಉತ್ತರ ಕನ್ನಡದಲ್ಲಿ ಚಿಟ್ಟಾಣಿಯವರ ಮಟ್ಟಕ್ಕೆ ಬರುವಂಥ ನಟರೇ ಇಲ್ಲವೆಂಬ ಅರ್ಥ ಲೇಖನದುದ್ದದ್ದಕ್ಕೂ ವ್ಯಕ್ತವಾದುದು ಸರಿಯಲ್ಲ.

ವ್ಯಕ್ತಿ ಪರಿಚಯ ಮಾಡುವಾಗ ಆ ವ್ಯಕ್ತಿಯ ಯೋಗ್ಯತೆಯಂತೆಯೆ ಕುಂದುಕೊರತೆಗಳನ್ನೂ ವಿಶ್ಲೇಷಿಸಿದರೆ ಅಪಚಾರವಾಗುತ್ತದೆಯೆ? ಉದಾಹರಣೆಗೆಂದು ಹೇಳುವುದಾದರೆ ಚಿಟ್ಟಾಣಿಯವರು ಗದಾಪರ್ವದಲ್ಲಿ ಕೌರವನ ಪಾತ್ರವನ್ನು ಅತಿಯಾದ ಕುಣಿತ, ಅನುಚಿತ ಅಭಿನಯ ಹಾಗೂ ಅಪ್ರಾಸಂಗಿಕ ಮಾತುಗಾರಿಕೆಯಿಂದ ಕೆಡಿಸುತ್ತಾರೆ. ಆದರೆ ಅದೇ ಭಸ್ಮಾಸುರ, ಕೀಚಕ, ಸುಧನ್ವ, ರುದ್ರಕೋಪ ಇವೆಲ್ಲ ಅವರಿಗಾಗಿಯೇ ಇದ್ದಂಥ ಪಾತ್ರಗಳು.

ಲೇಖಕರೇ ಹೇಳುವಂತೆ ಅವರ ಹಿನ್ನೆಲೆ ನೋಡಿದಾಗ ಚಿಟ್ಟಾಣಿಯವರ ಈ ಸಾಧನೆ ವಿಸ್ಮಯಕರ. ನೋಡಿ ಕಲಿಯುವ ಹುಮ್ಮಸ್ಸು ಲವಲವಿಕೆ ತೀರ ಅಪರೂಪದ ಗುಣಗಳು.

ಬೈಂದೂರು —ಎಸ್. ಎಸ್. ಹೆಗಡೆ

[ಶ್ರೀ ಚಿಟ್ಟಾಣಿ ರಾಮಚಂದ್ರ ಹೆಗಡೆಯವರ ಪರಿಚಯ ಮಾಡಿಕೊಡುವಾಗ ಲೇಖಕರು ಜಿಲ್ಲೆಯ ಇತರ ಹಿರಿಯ ಕಲಾವಿದರ ಪ್ರಭಾವ ಇವರ ಮೇಲೆ ಎಷ್ಟಾಗಿದೆಯೆಂಬುದನ್ನು ಹೇಳದಿರುವುದು ಆಕ್ಷೇಪಾರ್ಹವೆನ್ನುತ್ತೀರಿ. ಒಂದೇ ಮಾತಿನಲ್ಲಿ ಹೇಳುವುದಾದರೆ ಜಗತ್ತಿನಲ್ಲಿ ಯಾವ ವ್ಯಕ್ತಿಯೂ ಇತರರ ಪ್ರಭಾವವಿಲ್ಲದೇ ಬೆಳೆಯುವುದು ಅಸಾಧ್ಯ. ಆದರೆ ಇಂಥವರ ಪ್ರಭಾವ ಇಂಥವರ ಮೇಲೆ ಈ ರೀತಿಯಾಗಿದೆ ಎಂದು ಹೇಳುವುದು ಅವರವರ ಅಭಿಪ್ರಾಯಕ್ಕೆ ಸೇರಿದ ವಿಷಯ.

ಲೇಖನದಲ್ಲಿ ಚಿಟ್ಟಾಣಿಯವರನ್ನು ಸರಿಗಟ್ಟುವಂಥ ನಟರೇ ಉತ್ತರ ಕನ್ನಡದಲ್ಲಿಲ್ಲವೆನ್ನುವಂಥ ಒಂದು ವಾಕ್ಯವೂ ಇಲ್ಲ. ಅಲ್ಲದೆ ಯಕ್ಷಗಾನದ "ಉಚ್ಛ್ರಾಯಕ್ಕಾಗಿ ಅಹರ್ನಿಶಿ ಪ್ರಯತ್ನಿಸುತ್ತಿರುವವರಲ್ಲಿ ಹೊನ್ನಾವರ ತಾಲೂಕಿನ ಚಿಟ್ಟಾಣಿ ರಾಮಚಂದ್ರ ಹೆಗಡೆಯವರೂ ಒಬ್ಬರು" ಎಂದು ಪ್ರಾರಂಭದಲ್ಲೇ ಹೇಳಿದ್ದಾರೆ. ಮುಂದೆ ಸಹ ಔಚಿತ್ಯ ಮೀರಿ ಲೇಖಕರು ಹೊಗಳಿದ್ದಾರೆಂದು ನಮಗಂತೂ ಅನಿಸುವುದಿಲ್ಲ.

ಪರಿಚಯ ಮಾಡಲೆಳೆಸುವ ವ್ಯಕ್ತಿಯ ಗುಣದೋಷಗಳೆರಡನ್ನೂ ಸಮರ್ಥವಾಗಿ ತೂಗಿ ನೋಡಿ ಬರೆಯಬಲ್ಲವರು ತೀರ ವಿರಳ. ಬರೆಯುವ ಯೋಗ್ಯತೆಯಿದ್ದರೂ ಬರೆಯದಿರುವವರೂ ನೋಡಸಿಕ್ಕುತ್ತಾರೆ. ಇದು ಒಟ್ಟಾರೆ ಭಾರತೀಯರ ದುರ್ದೈವ. ಸಮಯ ಹೋದಂತೆ ಪರಿಸ್ಥಿತಿ ಬದಲಾಗಬಹುದು.

—ಸಂ.]


ಕಸ್ತೂರಿ

ಸಂಚಿಕೆ : ೧೧ ಕಸ್ತೂರಿ, ಜುಲೈ ೧೯೭೭ ವರ್ಷ : ೨೧

# ಪರೋಪಕಾರಾರ್ಥಮಿದಂ ಶರೀರಂ

ಕೆ. ಸಿ. ಕುಲಕರ್ಣಿ

ದಾನ, ದಯೆ, ಕ್ಷಮೆಗಳಿಗೆ ರಂತಿದೇವ ಇನ್ನೊಂದು ಹೆಸರು. ಶಾಲೀನತೆ, ಸೌಜನ್ಯಗಳು, ಅವನಲ್ಲಿ ಮನೆಮಾಡಿದ್ದವು. ಅವನ ಮುಂದೆ ದೇಹಿ ಎಂದವರು ಬರಿಗ್ಯೆಯಿಂದ ಎಂದೂ ಹೋಗುತ್ತಿರಲಿಲ್ಲ. ರಂತಿದೇವನ ನಾಡಿನ ನದಿ ಬತ್ತಿ ಹೋಯಿತೆ ವಿನಾ ಕೊಡುವ ಅವನ ಕೈ ಎಂದೂ ಬತ್ತಲಿಲ್ಲ.

ಅವನ ರಾಜ್ಯದಲ್ಲಿ ಒಮ್ಮೆ ಬರಗಾಲ ಬಿತ್ತು. ಮಳೆ ಕಾಣದೆ ಭೂಮಿ ಬಿರಿಯಿತು. ಎಲ್ಲೆಲ್ಲೂ ಹಾಹಾಕಾರವೆದ್ದಿತು. ಆದರೂ ಬಂದವರಿಗೆ ಇಲ್ಲವೆನ್ನದೆ ಇದ್ದುದನ್ನೆಲ್ಲ ರಂತಿದೇವ ನೀಡು ತ್ತಲೇ ಇದ್ದ. ದಿನದಿನಕ್ಕೆ ಸ್ಥಿತಿ ಕ್ಷೋಭೆಗೊಳ್ಳು-ತ್ತಲೇ ನಡೆಯಿತು. ರಂತಿದೇವನ ಮನೆಯೂ ಸುದಾಮನ ಮನೆಯಂತೆಯೆ ಆಯಿತು. ಮಕ್ಕಳು ಮಡದಿ ಉಪವಾಸ, ಬಿದ್ದರು. ನಲವತ್ತಾರು ದಿನವಾದರೂ ಅವರಿಗೆ ಅನ್ನ ದೊರೆಯಲಿಲ್ಲ. ಕುಟುಂಬವೆಲ್ಲ ಸಾವಿನ ಉಡಿ-ಯಲ್ಲಿರುವಾಗ ರಂತಿದೇವನಿಗೆ ಎದ್ದು ನಿಲ್ಲಲೂ ಶಕ್ತಿ ಇರಲಿಲ್ಲ. ಒಮ್ಮೆ ಸ್ವಲ್ಪ ತೃಣಧಾನ್ಯಗಳು ಸಿಕ್ಕಿದಾಗ ರಂತಿದೇವ ಅದರಿಂದ ಪಾಯಸ ಮಾಡಿ ಹೆಂಡತಿ-ಮಕ್ಕಳ ಬಾಯಲ್ಲಿ ಹಾಕಲು ನಡೆದ. ಅಷ್ಟರಲ್ಲಿ, "ಸ್ವಾಮಿ, ಹಸಿವೆ," ಎಂದು ಯಾರೋ ಕೂಗಿದರು. ಮಾಡಿದ ಪಾಯಸದಲ್ಲಿ ಅರ್ಧ-ದಷ್ಟನ್ನು ಆತ ಯಾಚಕನಿಗೆ ನೀಡಿ ಒಳಬಂದ; ಇನ್ನೇನು, ಮಕ್ಕಳಿಗೆ ನೀಡಬೇಕು ಎನ್ನುವಷ್ಟ-ರಲ್ಲೇ ಬೇಡನೊಬ್ಬ ಬಂದು, "ಸ್ವಾಮಿ, ಹಸಿವೆ," ಎಂದ. ಉಳಿದ ಸ್ವಲ್ಪ ಪಾಯಸವೂ ಬೇಡನಿ-ಗಾಯಿತು.

ಒಳಗೆ ಮಕ್ಕಳು, ಹೆಂಡತಿ ಎಚ್ಚರದಪ್ಪಿ ಬಿದ್ದಿದ್ದರು. ಆದರೆ ರಂತಿದೇವನ ಮುಖದಲ್ಲಿ ಸಂತೃಪ್ತಿಯ ಕಳೆ ರಾರಾಜಿಸುತ್ತಿತ್ತು. ಸತ್ಕಾರ್ಯ-ಕ್ಕಾಗಿ ಜೀವಗಳನ್ನೇ ಅರ್ಪಿಸುತ್ತಿರುವ ಮಕ್ಕಳು, ಹೆಂಡತಿಯನ್ನು ನೋಡಿ ರಂತಿದೇವ ಸಾರ್ಥಕ್ಯದ ಉಸಿರು ಬಿಟ್ಟ, ದುಃಖದಲ್ಲಿ ಸುಖದ ಸ್ವರ್ಗ ಕಂಡ. ✡

# ಲಾರೆನ್ಸ್ ಮತ್ತು ಅವನ ಶಿಲ್ಪ

ಆಧುನಿಕ ಶಿಲ್ಪ ಗ್ರೀಕ್ ಮಾದರಿಯ ವಾಸ್ತವವಾದಿ ಮಾರ್ಗದಿಂದ ಭಿನ್ನವಾಗಿ ಹಲವಾರು ರೂಪ ತಳೆದು ಬೆಳೆದಿದೆ. ಆಕೃತಿಗಳನ್ನು (ಅವು ನಿಸರ್ಗದಲ್ಲಿ ತೋರುವ ತೆರದಲ್ಲೇ ಪ್ರತಿ ಮಾಡುವುದರಿಂದ ಕಲಾತ್ಮಕ ತೃಪ್ತಿಯನ್ನು ಕಾಣದ ಮನುಷ್ಯ ತನ್ನ ಅನಿಸಿಕೆಗಳನ್ನು, ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಈ ಮಾಧ್ಯಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ಕಂಡುಕೊಂಡ ಮಾರ್ಗಗಳಲ್ಲಿ ಕ್ಯೂಬಿಸಂ (ಘನಾಕೃತಿ ಕಲೆ) ಒಂದು. ಕಳೆದ ಶತಮಾನದಲ್ಲಿ ಮತ್ತು ಈ ಶತಮಾನದ ಪೂರ್ವಾರ್ಧದಲ್ಲಿ ಯುರೋಪಿನಲ್ಲಿ ಪ್ರಚಲಿತವಿದ್ದ ಕ್ಯೂಬಿಸಂ ಅನೇಕ ಕಲಾವಿದರನ್ನು ಬೆಳಕಿಗೆ ತಂದಿದೆ. ಈ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡ ಫ್ರೆಂಚ್ ಶಿಲ್ಪಕಾರರಲ್ಲಿ ಕ್ಲಾಡ್ ಲಾರೆನ್ಸನಿಗೆ ಮಹತ್ವದ ಸ್ಥಾನವಿದೆ.

೧೮೮೫ರಲ್ಲಿ ಲಾರೆನ್ಸ್ ಸಾಮಾನ್ಯ ಕಾರ್ಮಿಕ ವರ್ಗಕ್ಕೆ ಸೇರಿದ ತಂದೆತಾಯಿಗಳ ಶಿಶುವಾಗಿ ಜನಿಸಿದ. ಶಾಲಾಭ್ಯಾಸ ಮುಗಿದ ನಂತರ ಕಟ್ಟಡಗಳಿಗೆ ಬಣ್ಣ ಹಚ್ಚುವವನೊಬ್ಬನ ಬಳಿ ಕೆಲಸಕ್ಕೆ ಸೇರುವುದರೊಂದಿಗೆಯೇ ಸಂಜೆ ಉಳಿದ ಸಮಯದಲ್ಲಿ ಚಿತ್ರಕಲೆಯ ಶಾಲೆಯೊಂದರಲ್ಲಿ ತರಬೇತಿ ಪಡೆಯತೊಡಗಿದ. ೧೯೧೧ ರಲ್ಲಿ—ಲಾರೆನ್ಸ್ ೨೬ ವರ್ಷದವನಾಗಿದ್ದಾಗ—ಹೆಸರಾಂತ ಶಿಲ್ಪಿ ಬ್ರೇಕನ ಪರಿಚಯ ಅವನ ಮೇಲೆ ಗಾಢ ಪ್ರಭಾವ ಬೀರಿತು. ಅವನು ತನ್ನ ಕಲಾಮಾಧ್ಯಮವಾಗಿ ಕ್ಯೂಬಿಸಂ ಆಯ್ದುಕೊಳ್ಳುವುದಕ್ಕೆ ಅದೇ ಕಾರಣವಾಯಿತು. ಅನಂತರ ೧೯೧೫ ರಿಂದ ೧೯೨೫ ರ ನಡುವಿನ ಅವಧಿಯಲ್ಲಿ ಅವನ ನೂರಾರು ಶಿಲ್ಪಗಳು ಹೊರಬಂದವು. ಅವುಗಳಲ್ಲಿ ಕೆಲವು ರಿಲೀಫ್(ಉಬ್ಬುಚಿತ್ರ)ಗಳಾದರೆ ಮತ್ತೆ ಹಲವು ಮೂರ್ತಿಶಿಲ್ಪಗಳು. ಅವುಗಳಿಂದಾಗಿ ಅವನ ಹೆಸರು ಯುರೋಪಿನ, ವಿಶೇಷತಃ ಫ್ರೆಂಚ್ ಕಲಾಜಗತ್ತಿನಲ್ಲಿ ಹೆಸರು ಗಳಿಸಿತು. ಆಗ ಬಂದ ಅವನ ಕೃತಿಗಳಲ್ಲಿ ಕೆಲವಾದರೂ ಆಧುನಿಕ ಕಲೆಯ ಅತಿ ಶ್ರೇಷ್ಠ ಮಾದರಿಗಳೆನಿಸುವಂಥವು ಎಂದು ಕಲಾವಿಮರ್ಶಕರು ಅಭಿಪ್ರಾಯಪಡುತ್ತಾರೆ. ಆದರೆ ೧೯೨೫ ರ ನಂತರ ಮಾತ್ರ ಅವನ ಹೆಸರು ಪ್ರಸಿದ್ಧರ ಸಾಲಿನಲ್ಲಿ ಅಷ್ಟಾಗಿ ಕೇಳಬರಲಿಲ್ಲ. ಮುಂದೆ ೧೯೫೪ ರಲ್ಲಿ ಅವನು ನಿಧನನಾದ ನಂತರ ಸಹ ಬಹಳ ಕಾಲ ಅವನ ಕೃತಿಗಳು ಹೆಚ್ಚಾಗಿ ಅನಾಮಧೇಯವಾಗಿಯೇ ಉಳಿದಿದ್ದವು. ೧೯೬೭ ರಲ್ಲಿ ಪ್ಯಾರಿಸಿನ ಗ್ರ್ಯಾಂಡ್ ಪ್ಯಾಲೇಸಿನಲ್ಲಿ ಅವನ ಒಂದು ನೂರು ಶಿಲ್ಪ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟಾಗ ಕಲಾಜಗತ್ತಿನ ಕಣ್ಣು ಮತ್ತೆ ತೆರೆಯಿತು. ಲಾರೆನ್ಸ್ ಪುನಃ ಕಲಾಭಿಮಾನಿಗಳಲ್ಲಿ ಆಸಕ್ತಿ ಕುದುರಿಸಿದ.

೧೯೨೫ರ ನಂತರ ಲಾರೆನ್ಸನ ಕೃತಿಗಳಲ್ಲಿ ಜನರ

ಆಸಕ್ತಿ ಅದೇಕೆ ಕಮರಿಹೋಯಿತು ? ಅನಂತರ ಅವನು ಸ್ವತಃ ಕಲೆಯಿಂದ ದೂರ ಉಳಿದು-ಬಿಟ್ಟನೆ? ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅಷ್ಟು ಕಠಿಣವೂ ಅಲ್ಲ, ಸುಲಭವೂ ಅಲ್ಲ. ಲಾರೆನ್ಸ್ ತನ್ನ ಕಲೆಯಲ್ಲಿ ಎಂದೂ ಆಸಕ್ತಿಯನ್ನೂ ಕಳೆದುಕೊಳ್ಳಲಿಲ್ಲ, ಅದರಿಂದ ಕೊನೆಯವರೆಗೂ ವಿಶ್ರಮಿಸಲೂ ಇಲ್ಲ. ಆದರೆ ೧೯೨೫ ರ ನಂತರ ಅವನು ಶುದ್ಧ ಕ್ಯೂಬಿಸಂಅನ್ನು ತೊರೆದು ಕೆಲ ಮಟ್ಟಿಗೆ ಅಭಿಜಾತ ಕಲೆಯತ್ತ ಒಲವು ತೋರತೊಡಗಿದ. ಅದರಿಂದಾಗಿ ಅವನ ಕೃತಿಗಳ ರೂಪ ತುಸು ಬದಲಾಗುತ್ತ ನಡೆ-ಯಿತು. ಆದರೆ ನಿಜವಾಗಿ ಇದರಿಂದಾಗಿಯೇ ಅವನ ಹೆಸರು ಹಿಂದುಳಿಯಿತೆಂದು ಹೇಳುವುದು ಮತ್ತು ಹಾಗೆಂದು ನಂಬುವುದು ಕಷ್ಟ. ಅವನ ಹೆಸರು ಮರೆಯಲ್ಲೇ ಉಳಿದುಬಿಡುವು-ದಕ್ಕ ಬಹು ಮುಖ್ಯ ಕಾರಣ ಅವನ ಸ್ವಭಾವ-ವೆಂದೇ ಹೇಳಬೇಕು. ಅವನು ಪ್ರಸಿದ್ಧಿಯ ಬೆಂಬತ್ತಿ ಹೋಗುವವನಲ್ಲವೆಂದು ಹೇಳಿದರೆ, ಅದು ಅಭಾವ ವೈರಾಗ್ಯವನ್ನು ತೋರುತ್ತ-ದೆಂದು ಯಾರಾದರೂ ಅರ್ಥವಿಸಬಹುದು. ಆದರೆ ಲಾರೆನ್ಸನಿಗೆ ತನ್ನ ಕಲೆ ಮುಖ್ಯವಾಗಿತ್ತೇ ಹೊರತು ಬೇರೆ ಯಾವುದರಲ್ಲೂ ಅವನ ಆಸಕ್ತಿ ಅಷ್ಟಾಗಿ ಕೆರಳುತ್ತಲೇ ಇರಲಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಅವನು ತೀರ ಸೀದಾ ಸಾದಾ ವ್ಯಕ್ತಿಯಾಗಿದ್ದ. ಅವನು ವಾಸಿಸುತ್ತಿದ್ದುದು ಪ್ಯಾರಿಸಿನ ದೊಡ್ಡ-ದೊಂದು ಹಳೆಯ ಸ್ಟುಡಿಯೋದಲ್ಲಿ. ಅವನ ಈ ಮನೆ– ಸ್ಟುಡಿಯೋದ ಆವಾರದಲ್ಲೆಲ್ಲ ದೊಡ್ಡ ದೊಡ್ಡ ಮರಗಳು. ಅದರಿಂದಾಗಿ ಈ ಗದ್ದಲದ ಊರಲ್ಲೂ ಅವನ ವಾಸಸ್ಥಾನ ನಿವಾಂತ ಸ್ಥಾನ-ವೆನಿಸಿತ್ತು. ಲಾರೆನ್ಸ್ ಇಲ್ಲಿ ಜಗದ ಜಂಜಡ-ದಿಂದ ದೂರವಿರಬಹುದಾಗಿತ್ತು.

ಅಲ್ಲದೆ ಲಾರೆನ್ಸ್ ಲೌಕಿಕ ದೃಷ್ಟಿಯಲ್ಲಿ ತಾನು ಯಶಸ್ಸು ಸಂಪಾದಿಸಬೇಕೆಂದು ಎಂದೂ ಪ್ರಯತ್ನಿಸಲೇಯಿಲ್ಲ. ಆದ್ದರಿಂದ ಕಲೆಯ ವಿವಿಧ ಮುಖಗಳ ಹಿಂದಣ ತಾತ್ತ್ವಿಕತೆಯ ಬಗ್ಗೆ ಅವನೆಂದೂ ತಲೆ ಕೆಡಿಸಿಕೊಳ್ಳಲಿಲ್ಲ, ... ಅವನೆಂದೂ ಇಟ್ಟುಕೊಳ್ಳಲಿಲ್ಲ. ತನ್ನ ಕೆಲಸದಲ್ಲಿ ಮೈಮರೆಯುವುದೇ ಅವನಿಗೆ ನಿಜವಾದ ಆನಂದವನ್ನು ನೀಡುತ್ತಿತ್ತು. ಅವನ ಮನಸ್ಸು, ಅಭಿರುಚಿ ಎರಡೂ ಎಷ್ಟು ತಿಳಿಯಾಗಿದ್ದುವು, ಮುಗ್ಧವಾಗಿದ್ದುವು ಎಂಬುದಕ್ಕೆ ಬೇಕಾದಷ್ಟು ನಿದರ್ಶನಗಳು ದೊರೆಯುತ್ತವೆ.

ಶಿಲ್ಪಕಲೆಯನ್ನುಳಿದು ಜೀವನದಲ್ಲಿ ಲಾರೆನ್ಸನಿ-ಗಿದ್ದ ಆಸ್ಥೆ ಬಾಕ್ಸಿಂಗ್ ಮತ್ತು ಸರ್ಕಸ್ಸುಗಳಲ್ಲಿ. ಅವನ ದೃಷ್ಟಿಯಲ್ಲಿ ಅವು 'ಅದ್ಭುತ'. ಅದಕ್ಕೆ ಕಾರಣವೆಂದರೆ ಅಲ್ಲಿ ಅವನಿಗೆ ನೋಡಸಿಕ್ಕುವ ಅಪಾರ ಆಕಾರವೈವಿಧ್ಯ, ಸಾವಿರಾರು ಭಂಗಿ-ಗಳು. ನಗರದಲ್ಲಿ ಹೊಸ ಸರ್ಕಸ್ ಬಂದಾಗಲೆಲ್ಲ ಅವನು ತಪ್ಪದೇ ಹೋಗಿ ನೋಡಿಬರುತ್ತಿದ್ದ. ಒಮ್ಮೆಯಂತೂ ಕೆಲ ಕಾಲ ಅವನು ಒಬ್ಬ ಬಾಕ್ಸಿಂಗ್ ಪಟುವನ್ನೇ ತನ್ನ ಮನೆಯಲ್ಲಿಟ್ಟು-ಕೊಂಡಿದ್ದ.

ಲಾರೆನ್ಸ್ ೧೯೨೫ ರ ನಂತರ ಕ್ಯೂಬಿಸಂ ಬಿಟ್ಟು ಅಭಿಜಾತ ಕಲೆಯತ್ತ ವಾಲತೊಡಗಿದ ಎಂದು ಆಗಲೆ ಹೇಳಿದೆಯಷ್ಟೆ. ಆದರೆ ಇದು ಪೂರ್ಣ ಸತ್ಯವೆನಿಸುವುದಿಲ್ಲ. ಕ್ಯೂಬಿಸಂನ ಪ್ರಭಾವ ಅವನ ಕಲೆಯಿಂದ ಎಂದೂ ಪೂರ್ತಿಯಾಗಿ ಅಳಿಸಿಹೋಗಲಿಲ್ಲ. ಅವನ ಶಿಲ್ಪಕೃತಿಗಳು ಕ್ಯೂಬಿಸಂನ ವೈಶಿಷ್ಟ್ಯವಾದ ಘನ ಕಾಯವನ್ನು ಎಂದೂ ಕಳೆದುಕೊಳ್ಳಲೇಯಿಲ್ಲ ಹಾಗು ಅವನ ಹೊಸ ಕೃತಿಗಳಲ್ಲಿ ನಯನಾಜೂಕುಗಳು ಪ್ರವೇಶ ಮಾಡಲಿಲ್ಲ. ಆದರೆ ತನ್ನ ಸಂತೋಷವನ್ನು ಕಲಾಕೃತಿಗಳ ಕಣಕಣಗಳಲ್ಲೂ ತುಂಬಲು ಅವನು ಯತ್ನಿಸುತ್ತಿದ್ದ. ಬಹಳ ಮಟ್ಟಿಗೆ ಯಶಸ್ವಿಯೂ ಆದ. ಇಲ್ಲಿ ಆಯ್ದುಕೊಳ್ಳಲಾದ ಅವನ ನಾಲ್ಕು ಪ್ರಾತಿನಿಧಿಕ ಶಿಲ್ಪಗಳನ್ನು ನೋಡಿದರೆ ಅವನಲ್ಲಿ ಉಂಟಾಗುತ್ತ ನಡೆದ ಬದಲಾವಣೆಯನ್ನು ಸ್ಥೂಲವಾಗಿಯಾದರೂ ಗುರುತಿಸಬಹುದು.

ಚಿತ್ರ ೧ : ಗಿಟಾರ್ ವಾದಕಿ, ೧೯೨೧ ರಲ್ಲೇ ನಿರ್ಮಿಸಲಾದ ಈ ಚಿತ್ರ. ಲಾರೆನ್ಸನ ಕ್ಯೂಬಿಸಂ ಕಾಲದ ಒಂದು ಪ್ರಾತಿನಿಧಿಕ ಕೃತಿ. ಇಲ್ಲಿ ಪ್ರೇಕ್ಷಕನ ಮನಸ್ಸಿನ ಮೇಲೆ ಪ್ರಭಾವವುಂಟಾ-ಗುವುದು ನೆಳಲು–ಬೆಳಕಿನ ಮೂಲಕ. ನೆಳಲು

ಮೂಡುತ್ತದೆ. ಗಿಟಾರ್ ವಾದಕಿಯ ತನ್ಮಯತೆಯ ಆನಂದದ ಅನುಭವ ನೋಡುಗನಿಗೂ ಉಂಟಾಗುತ್ತದೆ. ಚಿತ್ರ ೨: 'ಅಡ್ಯೂ' ಇದು ೧೯೪೧ ರಲ್ಲಿ ನಾಜಿ ಜರ್ಮನ್ ಪಡೆಗಳು ಫ್ರೆಂಚರನ್ನು ಪಾದಾಕ್ರಾಂತ ಮಾಡಿ ಮೆಟ್ಟುತ್ತಿದ್ದ ಕಾಲದಲ್ಲಿ ಹೊರಬಂದುದು. ಸೋತು ಹೋದ ಜನ ನಿರಾಶೆಯಿಂದ ಆವೃತರಾಗಿ, ಅಸಹಾಯಕತೆಯಿಂದ ತಲೆ ತಗ್ಗಿಸಿರುವುದು ಈ ಚಿತ್ರದಲ್ಲಿ ಸುಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಚಿತ್ರ ೩: 'ಭವ್ಯ ಸಂಗೀತಗಾರ' ಇದು ೧೯೩೭ರಲ್ಲಿ ಅವನು ನಿರ್ಮಿಸಿದ ಕೃತಿ. ಅದರ ಬಗ್ಗೆ ಹೇಳುವಾಗ ಲಾರೆನ್ಸ್ ಆಡಿದ ಒಂದು ಮಾತು ಗಮನಾರ್ಹ: "ನಾನು ಆಕಾರಗಳಲ್ಲಿ ಪಕ್ವತೆ ಸಾಧಿಸಲು ಹವಣಿಸುತ್ತೇನೆ. ನನ್ನ ಮೂರ್ತಿ ಶಿಲ್ಪಗಳು ಎಷ್ಟು ಮೈದುಂಬಿಕೊಂಡಿರುತ್ತವೆಯೆಂದರೆ ಅವಕ್ಕೆ ಮತ್ತೆನ್ನೇನೂ ಸೇರಿಸುವ ಅಗತ್ಯವೇ ಬೀಳುವುದಿಲ್ಲ." ಚಿತ್ರ ೪: ಲಾರೆನ್ಸ್ ೧೯೫೪ರಲ್ಲಿ ತನ್ನ ಜೀವಿತಾವಧಿಯ ಕೊನೆಕೊನೆಯಲ್ಲಿ ರಚಿಸಿದ ಶಿಲ್ಪ 'ಫೀಮೇಲ್ ಸೆಂಟಾರ್'—ಅರ್ಥಾತ್ ಅರ್ಧ ನಾರಿ, ಅರ್ಧ ಅಶ್ವ. ನರಸಿಂಹ, ಹಯವದನ ಮುಂತಾದ ಕಲ್ಪನೆಗಳು ಬರೀ ಭಾರತಕ್ಕೆ ಮಾತ್ರ ಸೀಮಿತವಾದುವಲ್ಲ, ಜಗತ್ತಿನ ಎಲ್ಲ ಸಂಸ್ಕೃತಿಗಳಲ್ಲೂ ಕಂಡುಬರುತ್ತವೆ. ಲಾರೆನ್ಸನ ಈ ಕೃತಿಯನ್ನು ೧೬ನೇ ಶತಮಾನದ ಇಟಾಲಿಯನ್ ಬುಗ್ಗೆಗಳ ಮೇಲೆ ಕಂಡುಬರುವ ಚಿತ್ರಗಳಿಗೆ ಹೋಲಿಸಲಾಗುತ್ತಿದೆ. ಆದರೆ ಈ ಚಿತ್ರದಲ್ಲಿ ವ್ಯಕ್ತವಾಗುವ ಚೈತನ್ಯ ಅದ್ಭುತವೆನಿಸುವಂತಿದೆ. ಇಲ್ಲಿ ಆಯ್ದುಕೊಳ್ಳಲಾದ ಅವನ ನಾಲ್ಕು ಕೃತಿಗಳಲ್ಲಿ ಮೂರು ಅವನ ಮೂಲ ಸತ್ತ್ವವಾದ ಆನಂದವನ್ನು ಪ್ರತಿಬಿಂಬಿಸುತ್ತವೆ.

ಕ್ಲಾಡ್ ಲಾರೆನ್ಸ್ ಎಲ್ಲೆಲ್ಲೂ ಆನಂದವನ್ನರಸುವವನಾಗಿದ್ದ. ನೋಡುವುದಕ್ಕೆ ಹೈಲವಾನ್ ನಂತೆ ಕಾಣುತ್ತಿದ್ದ ಎತ್ತರ ನಿಲುವಿನ ಲಾರೆನ್ಸ್ ಸದಾ ನಗುಮೊಗದ ವ್ಯಕ್ತಿಯೇ ಆಗಿದ್ದ. ಆದರೆ ಕೊನೆಕೊನೆಯ ವರ್ಷಗಳಲ್ಲಿ ಅವನ ಕಣ್ಣುಗಳನ್ನು ದಿಟ್ಟಿಸಿ ನೋಡಿದರೆ ಒಳಗಡೆ ಅಡಗಿದ ನೋವನ್ನು ಕ್ಷಣವಾಗಿ ಗುರುತಿಸಬಹುದಿತ್ತು. ಅವನು ಅಸ್ಥಿಕ್ಷಯರೋಗದಿಂದ ಬಳಲುತ್ತಿದ್ದ. ಅಂತೆಯೆ ಕೆಲವು ವರ್ಷಗಳ ವರೆಗೆ ಅವನು ಪ್ಲಾಸ್ಟರ್ ಕಟ್ಟಿಸಿಕೊಂಡು ಇರಬೇಕಾಯಿತು. ತನ್ನ ಈ ಕ್ಲೇಶಪೀಡಿತ ಜೀವನದ ಯೋಗಕ್ಷೇಮವನ್ನು ಲಾರೆನ್ಸ್ ತನ್ನ ಹೆಂಡತಿಗೇ ಪೂರ್ತಿ ಬಿಟ್ಟುಕೊಟ್ಟಿದ್ದ.

ಆದರೆ ಶರೀರದೊಳಗಡೆ ಇಷ್ಟೊಂದು ಬಾಧೆಯಿರುವಾಗಲೂ ತನ್ನ ಶಿಲ್ಪಕಲೆಯಲ್ಲಿ ಅವನು ಕಾಣುವ ಆನಂದ ವರ್ಧಿಸುತ್ತಲೇ ನಡೆಯಿತು. ದೇಹ ಕ್ಷಯಿಸುತ್ತಿದ್ದಂತೆಯೇ ಅವನಿಂದ ಪರಿಪೂರ್ಣತೆಗೆ ಹೆಚ್ಚುಹೆಚ್ಚು ಹತ್ತಿರವಾದ ಕೃತಿಗಳೇ ಬರತೊಡಗಿದುವು.

೧೯೫೪ ರ ಮೇ ತಿಂಗಳ ಒಂದು ಸಂಜೆ ಕ್ಲಾಡ್ ಲಾರೆನ್ಸ್ ಅಂದಿನ ಕೆಲಸವನ್ನು ಪೂರ್ತಿ ಮುಗಿಸಿ ಹವಾ ಸೇವನೆಗೆಂದು ಬೀದಿಯಲ್ಲಿ ನಡೆದಿದ್ದಾಗ ಒಮ್ಮೆಲೆ ತೀವ್ರ ಅಸ್ವಸ್ಥನಾದ. ಅಲ್ಲಿಂದ ಅವನು ಮನೆಗೆ ಮರಳಲಿಲ್ಲ. ತನ್ನ ನೆಚ್ಚಿನ ಜನಜಂಗುಳಿಯ ಮಧ್ಯದಲ್ಲೇ ಅವನು ಕೊನೆಯುಸಿರೆಳೆದಿದ್ದ. ✡



ಆನಂದಕ್ಕಿಂತ ಆಶ್ಚರ್ಯಕರ ವಸ್ತು ಇನ್ನೊಂದಿಲ್ಲ. ಖರ್ಚು ಮಾಡಿದಷ್ಟೂ

# ಒಂದು ಬಳ್ಳಿಯ ಕಥೆ

ಮಲೆನಾಡ ದಟ್ಟಡವಿ
ಯಲ್ಲಿ ಬಳ್ಳಿಗಳಿಗೆ ಲೆಕ್ಕವಿಲ್ಲ
ಎಳೆ ಬಳ್ಳಿ ಮುದಿ ಬಳ್ಳಿ
ಥಳುಕಿನ ಬಳ್ಳಿ— ಬಳುಕು
ವ ಬಳ್ಳಿ
ಮರ ತಬ್ಬಿಕೊಂಡ ಲಕ್ಕೀ
ಬಳ್ಳಿ
ನೆಲ ಕಚ್ಚಿಕೊಂಡೇ ಬದುಕು
ವ ಬಳ್ಳಿ
ಹೀಗೇ
ಒತ್ತಾಗಿ ಬೆಳೆದ ಎಷ್ಟೋ ಬಳ್ಳಿ
ಗಳ ನಡುವ ಒಂದು ಬಳ್ಳಿ
ಮುಯ್ಯೋ ಅಂತ ಅಳುತ್ತಿತ್ತು.
ಆಸರೆಗೆ
ಆದರ ಸುತ್ತ ಮರ
ಗಳಿರಲಿಲ್ಲವೆಂದಲ್ಲ
ಆದರೆ ಮರದ ಸುತ್ತ ಗುಡಾರ
ಜಿಟ್ಟ ಕಸಕಡ್ಡಿ ಕೊಳೆಹುಲ್ಲು ಅಸಂಖ್ಯ
ಗಳ ನಡುವೆ ಒಂದು ಪ್ರಶ್ನೆಯಾಗುವ
ತನ್ನ ಅಸ್ತಿತ್ವಕ್ಕೆ ಭಯ;
ನಗು ನಗು
ತ್ತಾ ತನ್ನ ಬಳ್ಳಿತನ
ವ ಗುರುತಿಸಬಲ್ಲ
ಅಭಯ ಹಸ್ತ ನೀಡಬಲ್ಲ
ಕೊಳೆ ಕಳಕೊಂಡ ಒಂದಾದರೂ ಮರ
ವಿಲ್ಲದ್ದಕ್ಕೆ ಜಿಗುಪ್ಸೆ.
Alien, the best way. ಆದರೆ ಬರ
ಬರುತ್ತಾ ಇಡೀ ದಟ್ಟಡವಿ
ತನ್ನ ನಿಂದಿಸುವ ಅಂಕುಶ
ವಾಗಿ ಕಾಡತೊಡಗಿ
ಬಳ್ಳಿ ಅಳುಕು
ತ್ತಲೇ ಶುದ್ಧ ಉಸಿರಾಟಕ್ಕೆ ನೆಲ ಹುಡುಕು
ತ್ತಿದ್ದಾಗ ಥಟ್ಟನೆ ದೂರದ ಪೂರ್ವ ಘಟ್ಟ
ದಲ್ಲೊಂದು ಸುಣುಪು ಮರ
ತೋರಿ ಬಳ್ಳಿ ಹತ್ತಿಯಾಗಿ ಓಲಾಡಿತು.
ಮೆಲ್ಲ ಮೆಲ್ಲನೆ ಗಾಳಿ
ಯ ಮೂಲಕ ಪರಿಚಯ ಬೆಳೆಸಿ ಆಳವಾಗಿ
ಬೇರು ಬಿಡುವ ಹಂಬಲ ವ್ಯಕ್ತಪಡಿಸಿ
ದಾಗ ಇದರ ವಶೀಕರಣ
ಕ್ಕೆ ಮನಸೋತು
ಒತ್ತಟ್ಟಿಗೇ ಕನಿಕರ
ಬೆರೆತು ಮರ ಅಭಯ ಹಸ್ತ ನೀಡಿತು. ಸುತ್ತ
ಲ ಪರಿಸರ ನಿನ್ನ ಸೋಂಕದಂತೆ
ನೋಡಿಕೊಳ್ಳುವೆ
ನೆಂಬ ಜವಾಬ್ದಾರಿ ಹೊತ್ತಾಗ
ಬಳ್ಳಿಗೆ
ಸ್ವರ್ಗಕ್ಕೆ ಮೂರೇ ಗೇಣು.

•

ಒಂದಿನ
ಮಲೆನಾಡ ದಟ್ಟಡವಿ
ನಿರೀಕ್ಷಿಸದ ಬಿರುಗಾಳಿ
ಬಂತು.
ದೂರದ ನುಣುಪು ಮರ
ರಭಸಕ್ಕೆ ಬಗ್ಗಿ ಬಳ್ಳಿ
ಯನ್ನೆತ್ತಿಕೊಂಡು ಹಿಂದಕ್ಕೆ ಜಗ್ಗಿ
ದಾಗ ಮೈ ತುಂಬ ಅವ್ಯಕ್ತ ಮಿಂಚಿ
ನ ಜತೆ
ಜತೆಗೇ ಪ್ರಥಮ ಚುಂಬನ
ದಲ್ಲೇ ದಂತಭಗ್ನ
ವಾಗಿ ಬಳ್ಳಿಯ ಕಣ್ಣಲ್ಲಿ ಜಲ
ಪಾತ ಧಾರೆಗಟ್ಟಿತ್ತು.
ಮರವೇನೋ ಅಪ್ಪಟ ಮರ
ವಾಗಿತ್ತು; ಆದರೆ
ಅದನೇರಬೇಕಾದ ಬಳ್ಳಿ
ಗೆ ಮರೆದ ಸುತ್ತು ಅದಕರಿಯದಂತೇ
ನೆರಳು ಪಡೆದ ದಟ್ಟ ಮುಳ್ಳು ಕಂಟ
ಗಳನ್ನೇರುವುದು ಅಸಾಧ್ಯವಾಗಿತ್ತು.

•

ಇನ್ನು ಬೇರು ಬಿಡುವುದೆಲ್ಲಿ
ಬಂತು?

ಮೀನಾಕ್ಷಿ ಹೆಂಗವಳ್ಳಿ

# ಇವರು ಆಗಲೂ ಹೀಗೇ ಇದ್ದರು...

ರಮಾರಮಣ

ಇತ್ತೀಚೆ ಕೇಂದ್ರದಲ್ಲಿ ಜನತಾ ಅಧಿಕಾರಕ್ಕೆ ಪಕ್ಷವು ಬಂದೊಡನೆಯೇ ತುರ್ತು ಪರಿಸ್ಥಿತಿಯ ೧೮ ತಿಂಗಳುಗಳಲ್ಲಿ ದೇಶದ ಎಲ್ಲೆಡೆಗಳಲ್ಲೂ ಪೋಲೀಸ್ ದೌರ್ಜನ್ಯದ ಕಥೆಗಳು ಹೊರಬರತೊಡಗಿದವು. ಸಂವಿಧಾನದಿಂದ ಮತ್ತು ಅದಕ್ಕೂ ಮುಂಚಿನಿಂದಲೂ ಬ್ರಿಟಿಶ್ ಆಡಳಿತ ಜೇರು ಬಿಟ್ಟಾಗಿನಿಂದಲೂ ಪೋಲೀಸರೇ ಆಗಲಿ, ಯಾರೇ ಆಗಲಿ, ಯಾರನ್ನೂ ಬಂಧಿಸಿ ಇಟ್ಟುಕೊಳ್ಳಕೂಡದು ಹಾಗೆ ಬಂಧಿಸಿದರೆ ಬಂಧಿತ ವ್ಯಕ್ತಿಯನ್ನು ೨೪ ಗಂಟೆಗಳೊಳಗಾಗಿ ನ್ಯಾಯಸ್ಥಾನದಲ್ಲಿ ಹಾಜರು ಪಡಿಸಬೇಕಾಗುತ್ತದೆ. ಇದರ ಹಿಂದೆ ಅಡಗಿರುವ ನ್ಯಾಯದಾನದ ಒಂದು ಮೂಲ ತತ್ತ್ವವೆಂದರೆ ಯಾವುದೇ ವ್ಯಕ್ತಿಯ ಮೇಲೆ ಏನಾದರೂ ಆರೋಪ ಹೊರಿಸಿದರೆ ಆರೋಪ ಸಿದ್ಧವಾಗುವ ವರೆಗೆ, ನ್ಯಾಯಾಲಯ ಆರೋಪವನ್ನು ಒಪ್ಪಿಕೊಳ್ಳುವವರೆಗೆ ಅವನು ನಿರಪರಾಧಿಯೇ. ಅನಂತರ ಕೂಡ ನ್ಯಾಯಾಲಯ ವಿಧಿಸುವ ಶಿಕ್ಷೆಗೆ ಮಾತ್ರ ಅವನು ಪಾತ್ರನಾಗುತ್ತಾನೆಯೇ ಹೊರತು ಪೋಲೀಸರು ಹಾಗು ಸೆರೆಮನೆಯ ಅಧಿಕಾರಿಗಳು ತಮ್ಮ ಮನಬಂದಂತೆ ಅವನನ್ನು ಶಿಕ್ಷಿಸಲಾರರು.

ಕಾನೂನು ಏನೇ ಹೇಳಿದರೂ ಪೋಲೀಸರು ತಮ್ಮದೇ ಆದ ರೀತಿಯಲ್ಲೇ ವರ್ತಿಸುತ್ತಾರೆ. ಬಂಧಿತನಿಗೆ ನಾಲ್ಕು ಒದೆಯದಿದ್ದರೆ ಅವನ ಬಾಯಿಂದ ಸತ್ಯ ಹೊರಬೀಳುವುದಿಲ್ಲವೆಂದು ಪೋಲೀಸ್ ಪೇದೆಗಳು ಮಾತ್ರವಲ್ಲ, ಹಿರಿಯ ಪೋಲೀಸ್ ಅಧಿಕಾರಿಗಳೂ ನಂಬುತ್ತಾರೆ. ಮುಂದುವರಿದ ದೇಶಗಳಲ್ಲಿ ಅಪರಾಧ ಶೋಧನವು ವಿಜ್ಞಾನದ ಒಂದು ಅಂಗವಾಗಿ ಪರಿಣಮಿಸಿದೆಯಾದ್ದರಿಂದ ಎಂಥ ಚಾಣಾಕ್ಷ ಅಪರಾಧಿಯು ಅಪರಾಧವನ್ನೂ ಸಿದ್ಧಪಡಿಸುವ ಸಾಧ್ಯತೆಯಿದೆ. ಅದೆಲ್ಲಕ್ಕಿಂತ ಹೆಚ್ಚಾಗಿ ಆಪಾದಿತನೂ ನಮ್ಮ ನಿಮ್ಮಂತೆ ಒಬ್ಬ ನಾಗರಿಕ, ಮನುಷ್ಯ ಎಂಬ ಅರಿವನ್ನು ಸಾಮಾನ್ಯ ಪೋಲೀಸನಿಗೂ ಮಾಡಿಕೊಡುವಂಥ ತರಬೇತಿಯನ್ನು ಅಲ್ಲಿ ಪ್ರಾರಂಭದಿಂದಲೇ ಕೊಡಲಾಗುತ್ತಿದೆ.

ಆದರೆ ನಮ್ಮ ದೇಶಗಳಲ್ಲಿ ಪೋಲೀಸರ ದೃಷ್ಟಿಕೋನ ಈಗಲೂ ಕೂಡ ಒಂದು ಶತಮಾನದಷ್ಟು ಹಿಂದುಳಿದಿದ್ದಾಗಿದೆ. ನಮಗೆ ರಾಜಕೀಯ ಸ್ವಾತಂತ್ರ್ಯ ಬಂದ ನಂತರ ನಾವು ಕಾನೂನನ್ನು ಸರಿಯಾಗಿಯೇ ಮಾಡಿದೆವಾದರೂ ಹೊಸ ಅವಶ್ಯಕತೆಗಳಿಗೆ ಅನುಗುಣವಾದ ಪರಿವರ್ತನೆಯನ್ನು ಪೋಲೀಸ್ ಪಡೆಗಳಲ್ಲಿ ಮಾಡಲು ಯತ್ನಿಸಲಿಲ್ಲ. ನಮ್ಮ ಪೋಲೀಸರಲ್ಲಿ ಕಂಡು

ಬರುವ ಅನೇಕ ಕೊರತೆಗಳಿಗೆ ಸಾಮಾನ್ಯವಾಗಿ ಬ್ರಿಟಿಶ್ ಆಡಳಿತವನ್ನು ದೂರುತ್ತೇವೆ. ಆದರೆ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದೆಯೆ ಕವಿ ಕಾಳಿದಾಸನ ಕಾಲದಲ್ಲೂ ನಮ್ಮ ಪೋಲೀಸರು ಹೀಗೆಯೇ ಇದ್ದರು ಎಂಬುದಕ್ಕೆ ಅವನ ಪ್ರಖ್ಯಾತ ಕೃತಿ 'ಅಭಿಜ್ಞಾನ ಶಾಕುಂತಲ'ದಲ್ಲಿ ಬರುವ ಒಂದು ದೃಶ್ಯವನ್ನು ನೋಡಬಹುದು. ಈ ನಾಟಕದ ಆರನೆಯ ಅಂಕದ ಪ್ರಾರಂಭದ ದೃಶ್ಯವನ್ನು ಅದರ ಮುಕ್ತ ಅನುವಾದದಲ್ಲಿ ನೋಡಿ.

## ಕವಿ ಕಾಳಿದಾಸನ 'ಅಭಿಜ್ಞಾನ ಶಾಕುಂತಲ'

### ಆರನೆಯ ಅಂಕ

[ನಗರದ ಕೊತವಾಲ ರಂಗ ಪ್ರವೇಶಿಸುತ್ತಾನೆ. ಅವನ ಹಿಂದಿನಿಂದ ಇಬ್ಬರು ರಕ್ಷಕರು ಕೈಗಳಿಗೆ ಕೋಳ ತೊಡಿಸಿದ ಒಬ್ಬ ಪುರುಷನನ್ನು ಎಳೆದುಕೊಂಡು ಬರುತ್ತಾರೆ.]

**ರಕ್ಷಕರು :** (ಪುರುಷನನ್ನು ಥಳಿಸುತ್ತಾ) ಆಹ್! ಎಲವೋ ಕಳ್ಳನೇ ಹೇಳು, ರಾಜಮುದ್ರೆಯುಳ್ಳ ಅಮೂಲ್ಯ ರತ್ನಖಚಿತವಾದ ಈ ಉಂಗುರವನ್ನು ನೀನೆಲ್ಲಿ ಕದ್ದೆ ಹೇಳು.

**ಪುರುಷ :** (ಭಯವನ್ನು ನಟಿಸುತ್ತ) ಮಹನೀಯರೆ, ನಾನಂಥ ಕೆಲಸವನ್ನು ಮಾಡಿಲ್ಲ.

**ಪ್ರಥಮ ರಕ್ಷಕ :** ನೀನೊಬ್ಬ ಸದ್ಬ್ರಾಹ್ಮಣನೆಂದು ಬಗೆದು ಮಹಾರಾಜರು ಇದನ್ನು ನಿನಗೆ ದಾನ ಮಾಡಿದರೊ?

**ಪುರುಷ :** ಇಲ್ಲಿ ಕೇಳಿ, ನಾನು ಶಕ್ರಾವತಾರದಲ್ಲಿ ವಾಸಿಸುವ ಒಬ್ಬ ಮೀನುಗಾರ.

**ದ್ವಿತೀಯ ರಕ್ಷಕ :** ಕಳ್ಳನೆ, ನಿನ್ನ ಜಾತಿ ಯಾವುದೆಂದು ನಾವೇನಾದರೂ ಕೇಳಿದ್ದೆವೆ?

**ಕೊತವಾಲ :** ಸೂಚಕ, ಅವನಿಗೆ ಹೇಳಬೇಕಾದ್ದನ್ನೆಲ್ಲ ಕ್ರಮವಾಗಿ ಹೇಳಲಿ ಬಿಡು. ಮಧ್ಯದಲ್ಲಿ ಅವನನ್ನು ತಡೆಯಬೇಡ.

**ಇಬ್ಬರೂ ರಕ್ಷಕರು :** ಕೊತವಾಲರ ಅಪ್ಪಣೆಯಂತೆಯೇ ಆಗಲಿ. ಹೂಂ, ಹೇಳು.

**ಪುರುಷ :** ನಾನು ಬಲೆಗಳು ಹಾಗು ಮೀನುಹಿಡಿಯುವ ಇತರ ಸಾಧನ ಸಲಕರಣೆಗಳಿಂದ ನನ್ನ ಕುಟುಂಬ ನಿರ್ವಹಣೆ ಮಾಡುತ್ತೇನೆ.

**ಕೊತವಾಲ :** (ನಗುತ್ತ) ಶುದ್ಧ ಉಪಜೀವನ ಮಾರ್ಗ!

**ಪುರುಷ :** ಹಾಗೆ ಹೇಳಬೇಡಿ ಒಡೆಯಾ, ಜನ್ಮಕ್ಕಂಟಿಕೊಂಡೇ ಬಂದಿರುವ ಈ ನಿಂದನೀಯ ವೃತ್ತಿಯನ್ನು ಬಿಡಬಾರದೆಂಬುದು ನಿಜ. ವೈದಿಕ ಕರ್ಮಗಳನ್ನು ಮಾಡುವವನು ಎಷ್ಟೇ ದಯಾಳುವಾಗಿದ್ದರೂ ಯಜ್ಞಪಶುಗಳನ್ನು ಕೊಲ್ಲುವಾಗ ಕಲ್ಲೆದೆಯವನೇ ಆಗಿರಬೇಕಾಗುತ್ತದಷ್ಟೆ.

**ಕೊತವಾಲ :** ಆದರೇನಂತೆ?

**ಪುರುಷ :** ನಾನೊಂದು ದಿನ ರೋಹಿತ ಮೀನನ್ನು ಕೊಯ್ಯುತ್ತಿದ್ದೆ. ಅದರ ಹೊಟ್ಟೆಯನ್ನು ಬಗೆದು ನೋಡುತ್ತಲೇ ಈ ಹೊಳೆ ಹೊಳೆವ ರತ್ನಖಚಿತ ಉಂಗುರ ಅಲ್ಲಿ ಕಂಡುಬಂತು. ಅನಂತರ ಇದನ್ನು ಮಾರುವುದಕ್ಕೆಂದು ನಾನು ತೋರಿಸುತ್ತಿದ್ದಂತೆಯೇ ನೀವು ಮಹನೀಯರು ನನ್ನನ್ನು ಬಂಧಿಸಿದಿರಿ. ಬೇಕಾದರೆ ನೀವು ನನ್ನನ್ನು ಕೊಲ್ಲಿರಿ ಇಲ್ಲವೆ ಕಡಿದು ತುಂಡು ತುಂಡು ಮಾಡಿರಿ; ಈ ಉಂಗುರ ನನ್ನ ಬಳಿ ಬಂದುದರ ಕಥೆ ಇಷ್ಟೆ.

**ಕೊತವಾಲ :** ಜಾನುಕ, ಮಾಂಸದ ನಾತವೇ ಬಡಿಯುತ್ತಿರುವ ಇವನು ಗೋಧಭಕ್ಷಕ ಮೀನುಗಾರನೆಂಬುದು ಖಂಡಿತ. ಈ ಉಂಗುರ ಇವನ ಬಳಿ ಹೇಗೆ ಬಂತೆಂಬುದನ್ನು ಶೋಧಿಸಲೇಬೇಕು. ನಾವೀಗ ಅರಮನೆಗೆ ಹೋಗೋಣ.

**ಇಬ್ಬರೂ ರಕ್ಷಕರು :** ತಾವಂದಂತೆಯೇ ಆಗಲಿ. ನಡೆ ನಡೆ, ಗಂಟು ಕೊಯ್ಯುವವನೆ. (ಎಲ್ಲರೂ ರಂಗದ ಪ್ರದಕ್ಷಿಣೆ ಹಾಕುವರು.)

**ಕೊತವಾಲ :** ಸೂಚಕ, ನೀವಿಬ್ಬರೂ ಇಲ್ಲಿ ಪುರದ್ವಾರದಲ್ಲಿ ಎಚ್ಚರಿಕೆಯಿಂದಿರಿ, ನಾನು ಮಹಾರಾಜರಿಗೆ ಈ ಉಂಗುರ ನಮಗೆ ದೊರೆತ ಬಗೆಯನ್ನು ಸರಿಯಾಗಿ ಅರಿಕೆ ಮಾಡಿಕೊಂಡು ಅವರ ಆಜ್ಞೆಯನ್ನು ಪಡೆದುಕೊಂಡು ಬರುವವರೆಗೆ.

**ಇಬ್ಬರೂ ರಕ್ಷಕರು :** ಕೊತವಾಲ ಮಹಾಶಯರು ಒಡೆಯರ ಆಜ್ಞೆಯನ್ನು ಪಡೆದುಕೊಂಡು ಬರಲು ಒಳಕ್ಕೆ ಹೋಗಲಿ. (ಕೊತವಾಲನು ಒಳಕ್ಕೆ ಹೋಗುತ್ತಾನೆ)

**ಸೂಚಕ :** ಜಾನುಕ, ಕೊತವಾಲರು (ಹೊರಬರಲು) ತಡಮಾಡುತ್ತಿದ್ದಾರಲ್ಲ.

**ಜಾನುಕ :** ಹೌದು, ಆದರೆ ಅರಸರನ್ನು ಅವರ ಅನುಕೂಲ ನೋಡಿಕೊಂಡು ಕಾಣಬೇಕಾಗುತ್ತದೆ.

**ಸೂಚಕ :** (ಮೀನುಗಾರನತ್ತ ಬೆರಳು ಮಾಡಿ) ಇವನನ್ನು ಕೊಲ್ಲುವ ಹಾರ (ನೇಣು) ಕಟ್ಟಲು ನನ್ನ ಕೈಗಳು ಸ್ಫುರಿಸುತ್ತಿವೆ.

**ಪುರುಷ :** ವಿನಾಕಾರಣ ಕೊಲ್ಲುವುದು ತಮಗೆ ಶೋಭಿಸುವುದಿಲ್ಲ.

**ಜಾನುಕ :** (ಪುರದ್ವಾರದೊಳಗಿಂದ ಅರಮನೆಯತ್ತ ನೋಡುತ್ತ) ಅದೋ ನಮ್ಮೊಡೆಯರು ರಾಜಾಜ್ಞೆಯ ಪತ್ರಗಳನ್ನು ಕೈಲಿ ಹಿಡಿದುಕೊಂಡು ಇತ್ತ ಕಡೆಯೇ ಬರುತ್ತಿರುವಂತಿದೆ. ನೀನಿನ್ನು ಹದ್ದುಗಳಿಗೆ ಆಹಾರವಾಗುತ್ತೀಯೋ ನಾಯಿಯ ಹಲ್ಲುಗಳನ್ನು ನೋಡುತ್ತೀಯೋ...

**ಕೋತವಾಲ :** (ಪ್ರವೇಶಿಸುತ್ತ) ಈ ಮೀನುಗಾರನನ್ನು ಬಿಟ್ಟುಬಿಡಿ. ಉಂಗುರ ಸಿಕ್ಕಿದರ ಬಗ್ಗೆ ಅವನು ಹೇಳುವುದೆಲ್ಲ ಸರಿಯಾಗಿಯೇ ಇದೆ.

**ಸೂಚಕ :** ತಮ್ಮ ಅಪ್ಪಣೆಯಂತೆಯೇ ಆಗಲಿ. ಈ ಮನುಷ್ಯ ಯಮಸದನವನ್ನು ಹೊಕ್ಕು ಹೊರಬಂದಂತಾಗಿದೆ. (ಪುರುಷನ ಕೈಕೋಳಗಳನ್ನು ಬಿಡಿಸಿ ಅವನನ್ನು ಬಂಧಮುಕ್ತನಾಗಿ ಮಾಡುತ್ತಾನೆ.)

**ಪುರುಷ :** (ಕೊತವಾಲನಿಗೆ ಬಾಗಿ ನಮಸ್ಕರಿಸಿ) ಒಡೆಯಾ, ಈಗ (ಇಂದು) ನನ್ನ ಹೊಟ್ಟೆಗೇನು ಗತಿ ?

**ಕೊತವಾಲ :** ಇದೋ, ಇಲ್ಲಿದೆ ನೋಡು, ಮಹಾಸ್ವಾಮಿಗಳಿಂದ ನಿನಗೆ ಬಹುಮಾನ; ಆ ಉಂಗುರದ ಬೆಲೆಗೆ ಸಮಾನವಾಗಿದೆ. (ಮೀನುಗಾರನಿಗೆ ಹಣ ಕೊಡುತ್ತಾನೆ.)

**ಪುರುಷ :** (ತಲೆಬಾಗಿ ವಂದಿಸಿ ಸ್ವೀಕರಿಸುತ್ತ) ಒಡೆಯಾ, ತಮ್ಮ ದಯೆ.

**ಸೂಚಕ :** ನಿನ್ನನ್ನು ಶೂಲದಿಂದೆತ್ತಿ ಆನೆಯ ಮೇಲೆ ಕೂಡಿಸಿದಂತಾಯಿತಲ್ಲ ಈ ದಯೆಯಿಂದ !

**ಜಾನುಕ :** (ಕೊತವಾಲನಿಗೆ) ಒಡೆಯಾ, ಮಹಾಸ್ವಾಮಿಗಳಿಗೆ ಆ ಉಂಗುರ ಅತ್ಯಂತ ಪ್ರಿಯವಾಗಿದೆಯೆಂದು ಈ ಬಹುಮಾನದಿಂದ ತೋರುತ್ತದಲ್ಲ.

**ಕೋತವಾಲ :** ಹೌದೌದು ತೋರುತ್ತದೆ: ಆದರೆ ಮಹಾಸ್ವಾಮಿಗಳಿಗೆ ಪ್ರಿಯವಾದದ್ದು ಅದರೊಳಗಿನ ಅಮೂಲ್ಯ ರತ್ನಗಳಲ್ಲ; ಅದನ್ನು ಕಂಡೊಡನೆಯೇ ಅವರಿಗೆ ಅತ್ಯಂತ ಪ್ರಿಯ ವ್ಯಕ್ತಿಯೊಬ್ಬರ ನೆನಪು ಮರುಕಳಿಸಿದಂತೆ ಕಾಣುತ್ತದೆ. ಸ್ವಭಾವತಃ ಅವರು ದೃಢಮನಸ್ಕರಾದರೂ ಒಂದು ಕ್ಷಣ ಅವರ ಕಂಗಳು ಹನಿಗೂಡಿದುವು.

**ಸೂಚಕ :** ಒಡೆಯಾ, ತಾವು ನಿಜವಾಗಿಯೂ ಸೇವೆ ಸಲ್ಲಿಸಿದ್ದೀರಿ.

**ಜಾನುಕ :** ಅದೂ ಈ ಮೀನು ಕೊಲ್ಲುವವನಿಗಾಗಿ ಎಂದು ಹೇಳು. (ಮೀನುಗಾರನನ್ನು ಅಸೂಯೆಯಿಂದ ನೋಡುತ್ತಾನೆ.)

**ಪುರುಷ :** ಒಡೆಯಾ, ಇದರಲ್ಲಿ ಅರ್ಧ ತಮ್ಮ ಸೇವೆಗಾಗಿ ನಾನು ಕೊಡುವ ಬೆಲೆಯಾಗಲಿ.

**ಜಾನುಕ :** ಹೌದು ಹೌದು, ಇದು ತುಂಬ ಉಚಿತ.

**ಕೊತವಾಲ :** ಮೀನುಗಾರನೆ, ನೀನು ಮಹಾ ಉದಾರಿ; ನೀನೀಗ ನನ್ನ ಅತ್ಯಂತ ಪ್ರಿಯ ಮಿತ್ರ. ನಮ್ಮ ಈ ಮೈತ್ರಿಗೆ ಸಾಕ್ಷಿಯಾಗಿ ನಾವೆಲ್ಲ ಮದ್ಯಪಾನ ಮಾಡುವಾ. ನಾವೆಲ್ಲ ಈಗ ಮದ್ಯದಂಗಡಿಗೆ ಹೋಗೋಣ. (ಎಲ್ಲರೂ ನಿರ್ಗಮಿಸುತ್ತಾರೆ.)

✡

# ಇದು ಕಳವೋ ಸಾಹಸವೋ?

**ಪ್ರ. ರಂ. ಪಂಢರಿ**

ನವೆಂಬರ್ ೧೭, ೧೯೬೮ರ ಮಂಜು ಮುಸುಕಿದ ಬೆಳಗು. 'ಶೀರ್ಸ್‌ಬರ್ಗ್ ಏ' ಹಡಗ ಬೆಲ್ಜಿಯಮ್ಮಿನ ಆ್ಯಂಟ್‌ವರ್ಪ್ ಬಂದರದಿಂದ ಲೈಬೀರಿಯಾದ ಧ್ವಜ ಹಾರಿಸುತ್ತ ಹೊರಟಿತು. ಹಡಗಿನ ತಳಭಾಗದಲ್ಲಿ ೫೬೦ ಡ್ರಮ್ಮುಗಳಲ್ಲಿ ಯುರೇನಿಯಮ್ಮಿನ ಹಳದಿ ವಡೆಗಳಿದ್ದವು. ಜಿನೋವಾ (ಇಟಲಿ)ವನ್ನು ತಲುಪಬೇಕಿದ್ದ ಆ ಹಡಗು ಅಲ್ಲಿಗೆ ಹೋಗಲೇ ಇಲ್ಲ. ಹದಿನೈದು ದಿವಸಗಳವರೆಗೆ ಸಮುದ್ರದಲ್ಲಿ ಪಯಣಿಸಿದ ಅದು ಡಿಸೆಂಬರ್ ಎರಡರಂದು ಟರ್ಕಿ ಬಂದರು ಇಸ್ಕಂದರನ್‌ನಲ್ಲಿ ಲಂಗರು ಹಾಕಿತು. ಆದರೆ ಅದರಲ್ಲಿದ್ದ ಎರಡುನೂರು ಟನ್ ಯುರೇನಿಯಂ ಮಾತ್ರ ಮಾಯವಾಗಿತ್ತು.

ಆದರೆ ಈ ಯುರೇನಿಯಂ ಯಾರ ಕೈಗೆ ಬಿತ್ತು? ಹೇಗೆ? ಈ ಯಕ್ಷಪ್ರಶ್ನೆ ಆಗಲೇ ಎದ್ದಿತಾದರೂ ಅದು ಹೇಗೋ ಇದ್ದಕ್ಕಿದ್ದಂತೆ ಕಾಲಗರ್ಭದಲ್ಲಿ ಅಡಗಿಹೋಯಿತು. ಶೀರ ಇತ್ತೀಚೆ ಇದೆಲ್ಲ ನಾಟಕ ಇಸ್ರೇಲಿ ಗುಪ್ತಚಾರರಿಂದ ನಡೆದದ್ದು ಎಂಬುದು ಹೊರಬಿದ್ದಿದೆ. 'ಶೀರ್ಸ್‌ಬರ್ಗ್ ಏ' ಆ್ಯಂಟ್‌ವರ್ಪ್ ಬಂದರದಿಂದ ಹೊರಟದ್ದೇ ಈ ನಾಟಕದ ಮೊದಲಂಕ. ನೆಗೆವ್ ಮರುಭೂಮಿಯಲ್ಲಿ ಡಾಯ್‌ಮೊನಾ ಎಂಬಲ್ಲಿರುವ ಪರಮಾಣು ರಿಯಾಕ್ಟರಿಗೆ ಯುರೇನಿಯಂ ಬೇಕಿತ್ತು. ಇದನ್ನು ರಹಸ್ಯವಾಗಿ ಕೊಂಡು ತರುವುದೇ ಆದರ ಉದ್ದೇಶ. ಬಹಿರಂಗವಾಗಿ ಅದನ್ನು ತಂದಿದ್ದರೆ ಸೋವಿಯೆತ್ ರಶಿಯವು ಇಸ್ರೇಲಿನ ಅರಬ ಶತ್ರುಗಳಿಗೆ ಪರಮಾಣು ಅಸ್ತ್ರಗಳನ್ನು ಪೂರೈಸುವ ಸಾಧ್ಯತೆ ಇತ್ತು.

ಇನ್ನೂ ಸಾರಿಗೆ ಹಡಗವಾಗಿ ಕೆಲಸ ಮಾಡುತ್ತಿರುವ 'ಶೀರ್ಸ್‌ಬರ್ಗ್ ಏ'ದ ಈಗಿನ ಹೆಸರು 'ಕಿಕಿರಾ'.

೧೯೪೫ ರಲ್ಲಿ ಪ್ರಥಮ ಪರಮಾಣು ಬಾಂಬನ್ನು ಅಮೇರಿಕ ಸ್ಫೋಟಗೊಳಿಸಿದಾಗ ಈ ಮಾರಕ ಅಸ್ತ್ರವನ್ನು ತಯಾರಿಸುವ ತಂತ್ರ ಜಗತ್ತಿನ ಮಹಾ ರಹಸ್ಯಗಳಲ್ಲೊಂದಾಗಿತ್ತು. ಆದರೆ ಮುಂದಿನ ೨೦ ವರ್ಷಗಳಲ್ಲಿ ಹಲವಾರು ರಾಷ್ಟ್ರಗಳು ಈ ಒಗಟನ್ನು ಒಡೆದವು. ಈ ತಂತ್ರ ಜ್ಞಾನವುಳ್ಳ ಅನೇಕ ದೇಶಗಳಿಗೆ ಪರಮಾಣು ಬಾಂಬುಗಳನ್ನು ಉತ್ಪಾದಿಸಲು ಸಾಧ್ಯವಾಗಿರದಿದ್ದರೆ ಅದಕ್ಕೆ ಕಾರಣ ಮೂಲವಸ್ತುವಾದ ಯುರೇನಿಯಂ ಸುಲಭವಾಗಿ ಲಭ್ಯವಾಗದಿರುವುದು. ಈ ಅಮೂಲ್ಯ ದುರ್ಲಭ ಲೋಹದ ಮಾರಾಟದ ಮೇಲೆ ಕಟ್ಟುನಿಟ್ಟಾದ ಪ್ರತಿಬಂಧ ಇದೆ. ಇಸ್ರೇಲಿಗೆ ಅಮೇರಿಕ ಭಾರಿ ಪ್ರಮಾಣದಲ್ಲಿ ಯುದ್ಧೋಪಕರಣಗಳನ್ನು ಕೊಟ್ಟಿದ್ದರೂ ಪರಮಾಣು ಅಸ್ತ್ರಗಳನ್ನು ಮಾತ್ರ ನೀಡಿಲ್ಲ. ತಾನೇ ತನ್ನ ಈ ಅವಶ್ಯಕತೆಯನ್ನು ಪೂರೈಸಿಕೊಳ್ಳಲು ಇಸ್ರೇಲ್ ರಹಸ್ಯವಾಗಿ ಬಳಸು ಮಾರ್ಗದ

ಮೂಲಕ ಯುರೇನಿಯಂ ದೊರಕಿಸಬೇಕಾಯಿತು.

ಸುತ್ತಲೂ ಕಡು ವೈರಿಗಳಿಂದ ಆವೃತವಾದ ಇಸ್ರೇಲ್ ತನ್ನ ಅಸ್ತಿತ್ವವನ್ನುಳಿಸಿಕೊಳ್ಳಲೋಸುಗವೇ ಆಗೀಗ ಇತರರು ಬೊಟ್ಟು ಕಚ್ಚುವಂಥ ಸಾಹಸಗಳನ್ನು ನಾಟಕೀಯ ರೀತಿಯಲ್ಲಿ ಮಾಡಬೇಕಾಗುತ್ತದೆ. ಅದರ ೨೭ ವರ್ಷಗಳ ಕಿರು ಇತಿಹಾಸದಲ್ಲಿ ಇಂಥ ಹಲವಾರು ಉದಾಹರಣೆಗಳು ದೊರೆಯುತ್ತವೆ. ಇಂಥ ಸಂದರ್ಭಗಳಲ್ಲಿ ಅಂತಾರಾಷ್ಟ್ರೀಯ ಕಾನೂನುಗಳನ್ನೂ ಶಿಷ್ಟ ಸಂಪ್ರದಾಯಗಳನ್ನೂ ಅದು ಕಡೆಗಣಿಸಿದ್ದೂ ಇದೆ.

ಭಾವನಾತ್ಮಕವಾಗಿ ಇಸ್ರೇಲ ತಮ್ಮ ತಾಯ್ನಾಡೆಂಬ ನಿಷ್ಠೆಯಿರಿಸಿಕೊಂಡಿರುವ ಯಹೂದ್ಯರು ಯುರೋಪ್ ಮತ್ತು ಅಮೇರಿಕಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರಲ್ಲಿ ಅನೇಕರು ಖಾಸಗಿ ಮತ್ತು ಸರಕಾರಿ ರಂಗಗಳಲ್ಲಿ ಪ್ರಭಾವೀ ಸ್ಥಾನಗಳಲ್ಲಿದ್ದಾರೆನ್ನುವುದು ಇಸ್ರೇಲಿಗೊಂದು ದೊಡ್ಡ ಅನುಕೂಲ. ೧೯೬೮ರಲ್ಲಿ ನಡೆದ ಯುರೇನಿಯಂ ಪ್ರಕರಣದಲ್ಲಿ ಈ ಅಂಶ ನಿರ್ಣಾಯಕ ಪಾತ್ರವಾಡಿತು.

ಸ್ವತಂತ್ರವಾಗುವುದಕ್ಕೆ ಮುನ್ನ ಬೆಲ್ಜಿಯನ್ ಕಾಂಗೊ ಎನಿಸಿದ್ದ ಝೈರೆಯಲ್ಲಿ ಸೊಸೈಟಿ ಜನರೇಲ್ ಡೆಸ್ ಮಿನರಾಯಿಸ್ ಎಂಬ ಬೆಲ್ಜಿಯನ್ ಕಂಪನಿ ಯುರೇನಿಯಂ ಅದಿರನ್ನು ಹೊರದೆಗೆಯುತ್ತಿತ್ತು. ಈ ಕಂಪನಿಯಿಂದ ಯುರೇನಿಯಂ ಖರೀದಿಸಬಯಸಿದ ಇಸ್ರೇಲಿಗೆ ಇದ್ದ ದೊಡ್ಡ ಆತಂಕವೆಂದರೆ ಐರೋಪ್ಯ ಸಾಮಾನ್ಯ ಪೇಟೆಯ ಒಕ್ಕೂಟದ ಹೊರಗೆ ಪರಮಾಣು ಮಹತ್ವದ ಯಾವ ವಸ್ತುವನ್ನೂ ವಿಶೇಷ ಅಪ್ಪಣೆಯಿಲ್ಲದೆ ಒಯ್ಯಲು ಬರುವಂತಿಲ್ಲ ಎಂಬುದು.

ತನ್ನ ಈ ವ್ಯವಹಾರಕ್ಕಾಗಿ ಇಸ್ರೇಲ್ ತನ್ನ ಗುಪ್ತಚಾರ ದಳದ ಅಂಗವಾದ 'ಮೊಸ್ಸಾದ್' ಮೂಲಕ ಆಯ್ದುಕೊಂಡುದು ಅಸ್ಮಾರಾ ಕೆಮಿ ಎಂಬ ಪಶ್ಚಿಮ ಜರ್ಮನಿಯ ರಾಸಾಯನಿಕ ಕಂಪನಿಯೊಂದನ್ನು. (ಈ ಕಂಪನಿ ೧೯೭೧ರಲ್ಲಿ ಮುಚ್ಚಿತು.) ಆದರೆ ಈ ಕಂಪನಿಯ ವರಿಷ್ಠನಾಗಿದ್ದ ಹರ್ಬರ್ಟ್ ಜಿ. ಸ್ಕ್ಯಾರ್ಫ್‌ನಿಗೆ ಈ ವಿಷಯ ಏನೂ ತಿಳಿದಿರಲಿಲ್ಲವಂತೆ. ಇಲ್ಲಿ ಅಸ್ಮಾರಾ ಹೆಸರಿನಲ್ಲಿ ಇಸ್ರೇಲಿಗಾಗಿ ಕಾರ್ಯ ನಿರ್ವಹಿಸಿದವನು ಕಂಪನಿಯ ಪರ್ಚೇಜಿಂಗ್ ಏಜಂಟನಾಗಿದ್ದ ಹರ್ಬರ್ಟ್ ಸೂಲ್ಝನ್ ಎಂಬ ಇನ್ನೊಬ್ಬ ವ್ಯಕ್ತಿ. ಅವನ ಮೂಲಕ ಅಸ್ಮಾರಾ ಮಾರ್ಚ್ ೨೯, ೧೯೬೮ರಂದು ೨೦೦ ಟನ್ನು ಯುರೇನಿಯಂ ಆಕ್ಸೈಡ್ ಖರೀದಿಸುವ ಒಪ್ಪಂದಕ್ಕೆ ಅಂಕಿತ ಹಾಕಿತು.

ಅಸ್ಮಾರಾ ಮೊಟ್ಟ ಮೊದಲು ಮೊರೊಕ್ಕೊದಲ್ಲಿ ಕ್ಯಾಸಾಬ್ಲಾಂಕಾದ ಔಷಧ ಮೊದಲಾದವುಗಳನ್ನು ಪೂರೈಸುವ ಚಿಮ್‌ಗಾರ್ ಕಂಪನಿಗಾಗಿ ಯುರೇನಿಯಂ ಆರ್ಡರು ಕೊಟ್ಟಿತ್ತು. ಆದರೆ ತೆರೆಯಮರೆಯಲ್ಲಿ ಇದೆಲ್ಲ ನಡೆಸಲು ಚಿಮ್‌ಗಾರ್ ಯೋಗ್ಯವಾಗಿರಲಿಲ್ಲ. ಅಲ್ಲದೆ ಮೊರೊಕ್ಕೊ ಸಾಮಾನ್ಯ ಪೇಟೆಯ ಸದಸ್ಯರಾಷ್ಟ್ರವೂ ಅಲ್ಲ. ಆದುದರಿಂದ ಯುರೇನಿಯಂ ಒಪ್ಪಂದದಲ್ಲಿ ತಿದ್ದುಪಡಿಗಳಾದವು.

ಅಸ್ಮಾರಾ ಮತ್ತು ಸೊಸೈಟಿ ಜನರೇಲ್‌ಗಳು ಇಟಲಿಯ ಮಿಲಾನ್‌ನಲ್ಲಿರುವ ಸೈಕಾ ಎಂಬ ಕಂಪನಿಗೆ ಯುರೇನಿಯಂ ನಿರ್ಯಾತಮಾಡುವದಾಗಿ ಸಾಮಾನ್ಯ ಪೇಟೆಗೆ ತಿಳಿಸಿದವು. ಈ ಕಂಪನಿಯು ಯುರೇನಿಯಂನಲ್ಲಿ ಯಾವುದೋ ವಸ್ತುವನ್ನು ಮಿಶ್ರಮಾಡಿ ಅದೇ ೫೬೦ ಡ್ರಮ್ಮುಗಳಲ್ಲಿ ಮರಳಿ ಅಸ್ಮಾರಾಕ್ಕೆ ಕಳಿಸಬೇಕಿತ್ತು. "ಅವರು ನಮ್ಮನ್ನು ಆಯ್ದುಕೊಂಡುದು ಯುರೇನಿಯಮ್ಮನ್ನು ಆ್ಯಂಟ್‌ವರ್ಪ್‌ನಿಂದ ಭೂಮಧ್ಯ ಸಮುದ್ರಕ್ಕೆ ತರುವದಕ್ಕಾಗಿ ಮಾತ್ರ" ಎಂದು ಸೈಕಾದ ಚೇರ್‌ಮನ್ ಫ್ರಾನ್ಸಿಸ್ಕೊ ಸೆರ್ಟೋರಿಯೊ ಇತ್ತೀಚೆ ಹೇಳಿದ. ಆದರೆ ಅವನಿಗೆ ಯುರೇನಿಯಂನಲ್ಲಿ ಯಾವುದೋ ವಸ್ತುವನ್ನು ಬೆರೆಸುವದಕ್ಕಾಗಿ ಅಸ್ಮಾರಾ ಕೆಮಿಯಿಂದ ಹನ್ನೆರಡು ಸಾವಿರ ಡಾಲರು ಹಣ ಮುಂಗಡ ದೊರೆತಿದ್ದರಿಂದ 'ಶೀರ್ಸ್‌ಬರ್ಗ್ ಏ'ದಲ್ಲಿಯ ಯುರೇನಿಯಂ ಬ್ಯಾರಲ್ಲುಗಳು ಇಟಲಿಯನ್ನು ತಲುಪುವದಿಲ್ಲವೆಂದು ಸೆರ್ಟೋರಿಯೋಗೆ ಸಂದೇಹವಿತ್ತು. ಆ್ಯಂಟ್‌ವರ್ಪ್‌ನಿಂದ 'ಶೀರ್ಸ್‌ಬರ್ಗ್ ಏ'

ಹೊರಟ ಕೆಲವು ದಿವಸಗಳ ನಂತರ ಹಡಗ ಕಳೆದುಹೋಗಿದೆ ಎಂದು ಸೈಕಾಕ್ಕೆ ಆಸ್ಮಾರಾ ತಿಳಿಸಿತಲ್ಲದೆ ಆ ಬಣ್ಣದ ಕಂಪನಿಗೆ ಮುಂಗಡ ವೆಂದು ಕೊಟ್ಟಿದ್ದ ೧೨೦೦೦ ಡಾಲರುಗಳನ್ನು ತನ್ನಲ್ಲಿಯೇ ಇರಿಸಿಕೊಳ್ಳಲು ಹೇಳಿತು. ಮೊದಲು ತಿಳಿಸಿದ ಪ್ರಕಾರ ಈ ಹಡಗ ಇಟಲಿಯ ಜಿನೋವಾ ಬಂದರಿಗೆ ಬರಬೇಕಿತ್ತು.

'ಶೀರ್ಸ್‌ಬರ್ಗ್ ಏ' ಹಡಗದ ಒಡೆತನದ ಕಥೆಯೂ ಹೀಗೆಯೇ. ಆ್ಯಂಟ್‌ವರ್ಪ್‌ನಿಂದ ಪಯಣಿಸುವ ಮೊದಲು ಈ ಹಡಗದ ಹೆಸರು ಕೇವಲ 'ಶೀರ್ಸ್‌ಬರ್ಗ್' ಎಂದಿತ್ತು. ಅದನ್ನು ಪಶ್ಚಿಮ ಜರ್ಮನಿಯ ಹ್ಯಾಂಬರ್ಗಿನ ಹಡಗು ದಲ್ಲಾಳಿ-ಯೊಬ್ಬನ ಮೂಲಕ ಲೈಬೀರಿಯದ ಬಿಸ್ಕೈ ಟ್ರೇಡರ್ಸ್ ಶಿಪ್ಪಿಂಗ್ ಕಾರ್ಪೊರೇಶನ್ ಖರೀದಿ ಮಾಡಿತು. ಈ ಕಂಪನಿಯ ಸ್ಥಾಪನೆ ಅಗಸ್ಟ ೨೦, ೧೯೬೮ ರಂದು. ಆಸ್ಮಾರಾ ಕೆಮಿಯ ಯುರೇನಿಯಂ ಕೊಳ್ಳುವ ಕೊನೆಯ ಒಪ್ಪಂದವು ಈ ಹೊತ್ತಿಗೆ ಆಗಿತ್ತು. ಬಿಸ್ಕೈ ಸಪ್ಟಂಬರ್ ೨೭, ೧೯೬೮ರಂದು ೨೮೭,೦೦೦ ಡಾಲರುಗಳನ್ನು ಕೊಟ್ಟು 'ಶೀರ್ಸ್‌ಬರ್ಗ್ ಏ'ದ ಒಡೆತನವನ್ನು ಪಡೆಯಿತು. ೧೯೭೧ರಲ್ಲಿ ವಿಸರ್ಜನ ಹೊಂದಿದ ಈ ಕಂಪನಿಯು ಇಸ್ರೇಲಿ ಗುಪ್ತದಳದ ಏಜಂಟರ ಸೃಷ್ಟಿಯೆ. ಬಿಸ್ಕೈಯ ಅಧ್ಯಕ್ಷ ನಲವತ್ತು ವರುಷದ ಡಾನ್ ಅರ್ಟ್, ೧೯೭೩ ರಲ್ಲಿ ನಾರ್ವೆ-

## ಯುರೇನಿಯಂ ಏನು, ಎಂತು?

ಯುರೇನಿಯಂ ಮೂಲವಸ್ತುಗಳಲ್ಲೊಂದು. ಅದರ ಸಂಕೇತ ಯು (U) ಸಂಖ್ಯೆ ೯೨. ಸುಮಾರು ೧,೧೫೦ ಡಿಗ್ರಿ ಸೆಂಟಿಗ್ರೇಡಿಗೆ ಇದು ಕರಗುವದು. ಇದರ ವಿಶಿಷ್ಟ ಗುರುತ್ವ ೧೮.೬೮. ಬಿಳಿಯ ಬಣ್ಣದ ಈ ಬಿರುಸು ಲೋಹವನ್ನು ೧೭೮೯ರಲ್ಲಿ ಹುಡುಕಿ ತೆಗೆದವನು ಮಾರ್ಟಿನ್ ಹೆನ್ರಿಚ್ ಕ್ಲಾಪ್ರೊಥ್ ಎಂಬ ವಿಜ್ಞಾನಿ. ೧೭೮೧ ರಲ್ಲಿ ಸರ್ ವಿಲಿಯಮ್ ಹರ್ಶೆಲ್ ಯುರೇನಸ್ ಗ್ರಹವನ್ನು ಕಂಡುಹಿಡಿದನಷ್ಟೆ. ಅವನಿಗೆ ಗೌರವ ತೋರಲೆಂದು ಕ್ಲಾಪ್ರೊಥ್ ಈ ಹೊಸ ಲೋಹಕ್ಕೆ ಹೀಗೆ ಹೆಸರಿಟ್ಟ.

ಯುರೇನಿಯಂ ವಿರಳವಾಗಿ ಸಿಕ್ಕುವ ಲೋಹ. ಭೂಮಿಯ ಆಳದಲ್ಲಿ ಅದಿರಿನ ರೂಪದಲ್ಲಿ ಇದು ಸಿಕ್ಕುತ್ತಿದೆ. ಯುರೇನಿಯಂ ಕೆಲ ಬಗೆಯ ಅಗ್ನಿಜನ್ಯ ಶಿಲೆಗಳಲ್ಲಿ, ಅಷ್ಟೇಕೆ ಸಮುದ್ರ ಜಲದಲ್ಲೂ ಇರುವದು. ೧೮೪೧ರಲ್ಲಿ ಮೊಟ್ಟ ಮೊದಲು ಇದನ್ನು ಶುದ್ಧೀಕರಿಸಿದರು. ದ್ವಿತೀಯ ಮಹಾಯುದ್ಧಾನಂತರ ಅಣ್ವಸ್ತ್ರಗಳ ನಿರ್ಮಾಣದಲ್ಲಿ ಇದನ್ನು ದೊಡ್ಡ ಪ್ರಮಾಣದಲ್ಲಿ ಬಳಸುತ್ತಿರುವರು.

•

ಭಾರತದಲ್ಲಿ ಬಿಹಾರದ ಸಿಂಗಭೂಮ ಜಿಲ್ಲೆ, ಹಿಮಾಚಲ ಪ್ರದೇಶದ ಹಿಮಾಲಯದ ಭಾಗ ಹಾಗು ಉತ್ತರ ಪ್ರದೇಶಗಳಲ್ಲಿ ಯುರೇನಿಯಂ ಅದಿರಿನ ಖಣಿಗಳನ್ನು ಕಂಡು ಹಿಡಿದಿರುವರು. ಸಿಂಗಭೂಮ ಜಿಲ್ಲೆಯ ಜಾಡುಗುಡದ ಯುರೇನಿಯಂ ಖಣಿಯಲ್ಲಿ ಪ್ರತಿದಿನ ೧೦೦ ಟನ್ನು ಅದಿರನ್ನು ತೆಗೆಯುತ್ತಿರುವರು. ಭಾರತ ಸರಕಾರದ ಯುರೇನಿಯಂ ಕಾರ್ಪೊರೇಶನ್ನು ಇದರ ಆಡಳಿತವನ್ನು ನಿರ್ವಹಿಸುತ್ತಿದೆ.

ಭಾರತದಲ್ಲಿ ೭೬೦೦೦ ಟನ್ನು ಅದಿರಿನ ನಿಕ್ಷೇಪವಿದೆಯೆಂದು ಇತ್ತೀಚಿನ ಅಂದಾಜು.


ಇಲ್ಲಿ ಇಸ್ರೇಲ್ ಫ್ರಾನ್ಸಿನಿಂದ ಅಪಹರಿಸಿ ಒಯ್ಯುತ್ತಿದ್ದ ಐದು ಗನ್ ಬೋಟುಗಳಿಗೆ ಇಂಧನ ಪೂರಯಿಸಿತು
ಬೆಲ್ಜಿಯಂ
ಆಂಟ್ವರ್ಪ್
ನವೆಂಬರ್ ೧೭, ೧೯೬೮ ಶೀರ್ಸ್‌ಬರ್ಗ್ ಎ' ೨೦೦ ಟನ್ ಯುರೇನಿಯಂ ತುಂಬಿಕೊಂಡು ಹೊರಟಿತು.
ಫ್ರಾನ್ಸ್
ಯುರೇನಿಯಂ ಬರಬೇಕಿದ್ದ ಸ್ಥಳ
ಸ್ಪೇನ್
ಇಟಲಿ
ಇಲ್ಲಿ ಯುರೇನಿಯಮನ್ನು ಇಸ್ರೇಲಿ ಹಡಗುಗಳಿಗೆ ಸ್ಥಳಾಂತರಿಸಲಾಯಿತು
ಡಿಸೆಂಬರ್ ೨ ೧೯೬೮ ಶೀರ್ಸ್‌ಬರ್ಗ್ ಎ' ಸರಕಿಲ್ಲದೆ ಇಲ್ಲಿಗೆ ಬಂತು
ಡಿಸೆಂಬರ್ ೨೨ ಶೀರ್ಸ್‌ಬರ್ಗ್ ಎ ಜರ್ಮನಿಯ ಬ್ರೇಕ್ ಬಂದರಕ್ಕೆಂದು ಹೊರಡುವುದು
ಭೂಮಧ್ಯ ಸಮುದ್ರ
ಇಸ್ರೇಲ್
ಯುರೇನಿಯಂ

ಯಲ್ಲಿ ಒಂದು ಕೊಲೆಯ ಪ್ರಕರಣದಲ್ಲಿ ಬಂಧಿಸಲ್ಪಟ್ಟಾಗ ತಾನು ಇಸ್ರೇಲಿ ಗುಪ್ತಚಾರ ದಳದ ಸದಸ್ಯನೆಂದು ಒಪ್ಪಿಕೊಂಡ.

ಬಿಸ್ಕೆ ಟ್ರೇಡರ್ಸ್ 'ಶೀರ್ಸ್‌ಬರ್ಗ್ ಏ' ಯನ್ನು ಸಪ್ಟೆಂಬರ್ ೧೯೬೮ರ ರಲ್ಲಿ ಕೊಂಡ ನಂತರ ಕೆಲ ಹೊಸ ನಾವಿಕರು ಹಡಗಿನ ಮೇಲೆ ಬಂದರು. ಆದರೆ ನವೆಂಬರ್ ೧೫ ರಂದು ಬಿಸ್ಕೆ ಟ್ರೇಡರ್ಸ್ ಪ್ರತಿನಿಧಿಯು ಆ ಹಡಗದಲ್ಲಿ ಕೆಲಸಕ್ಕಿದ್ದ ಸ್ಪ್ಯಾನಿಶ್ ನಾವಿಕರಿಗೆ ಇನ್ನವರು ಅವಶ್ಯವಿಲ್ಲ; ಏಕೆಂದರೆ ಹಡಗನ್ನು ಮಾರಲಾಗಿದೆಯೆಂದು ಸುಳ್ಳು ಹೇಳಿದ. ಮರುದಿನವೇ ಆ್ಯಂಟ್‌ವರ್ಪ್‌ನಲ್ಲಿ ಯುರೇನಿಯಂ ಹೇರಲಾಯಿತು. ಆಯ್ದ ಕೆಲವೇ ಇಸ್ರೇಲಿ ನಾವಿಕರು ಹಡಗವನ್ನೇರಿದರು.

'ಶೀರ್ಸ್‌ಬರ್ಗ್ ಏ' ಆ್ಯಂಟ್‌ವರ್ಪ್‌ನಿಂದ ಹೊರಟ ಹದಿನೈದು ದಿನಗಳಲ್ಲಿ ಏನು ನಡೆಯಿತೆಂಬುದು ಹಡಗಿನ ಮೇಲಿದ್ದವರಿಗೆ ಮಾತ್ರ ಖಚಿತವಾಗಿ ಗೊತ್ತು. ಆಗ ಈ ಹಡಗಿನ ಅಧಿಕಾರಿಗಳಾಗಿದ್ದವರನ್ನು ಈಗ ಹುಡುಕುವದು ಅಸಾಧ್ಯ. ಅವರೆಲ್ಲ ಖೊಟ್ಟಿ ಪಾಸ್‌ಪೋರ್ಟು, ಸುಳ್ಳು ಹೆಸರುಗಳನ್ನು ಹೊಂದಿದ್ದರು. ಆದರೂ ಒಬ್ಬ ನಾವಿಕನ ಹೇಳಿಕೆಯಂತೆ ಹಡಗವು ಆ್ಯಂಟ್‌ವರ್ಪ್‌ನಿಂದ ನೇರವಾಗಿ ಭೂಮಧ್ಯ ಸಮುದ್ರದಲ್ಲಿ ಸೈಪ್ರಸ್ ಮತ್ತು ಟರ್ಕಿಯ ಇಸ್ಕಂದರನ್ ನಡುವಣ ಸಮುದ್ರಕ್ಕೆ ಸಾಗಿತು. ಭೂಮಧ್ಯ ಸಮುದ್ರವನ್ನು ಪ್ರವೇಶಿಸಿದೊಡನೆಯೆ 'ಶೀರ್ಸ್‌ಬರ್ಗ್ ಏ' ಪೂರ್ತಿ ರೇಡಿಯೋ ಮೌನವನ್ನು ತಳೆಯಿತು. ಆ್ಯಂಟ್‌ವರ್ಪ್ ಬಿಟ್ಟ ನಂತರ ಮಧ್ಯೆ ಯಾವ ಬಂದರಿನಲ್ಲೂ ಅದು ತಂಗಲಿಲ್ಲ. ಸೈಪ್ರಸ್ ಮತ್ತು ಇಸ್ಕಂದರನ್ ನಡುವಿನ ಸಮುದ್ರದಲ್ಲಿ ವಿಶೇಷ ಇಸ್ರೇಲಿ ಸಾರಿಗೆ ಹಡಗೊಂದು 'ಶೀರ್ಸ್‌ಬರ್ಗ್ ಏ' ಬರುವ ದಾರಿಯನ್ನು ಕಾಯುತ್ತಿತ್ತು. ಅದರ ರಕ್ಷಣೆಗೆ ಇಸ್ರೇಲಿ ನೌಕಾಪಡೆಯ ಎರಡು ಗನ್‌ಬೋಟುಗಳೂ ಇದ್ದವು. 'ಶೀರ್ಸ್‌ಬರ್ಗ್ ಏ' ಇಸ್ರೇಲಿ ಹಡಗಿಗೆ ರಾತ್ರಿಯ ಹೊತ್ತು ಪೂರ್ಣ ಕತ್ತಲಲ್ಲಿ ಯುರೇನಿಯಂ ಬ್ಯಾರಲ್ಲುಗಳನ್ನು ಸಾಗಿಸಿತು. ಕೆಲವು ಹೀಬ್ರೂ ಶಬ್ದಗಳನ್ನು ಬಿಟ್ಟರೆ ಯಾರೂ ಏನನ್ನೂ ಮಾತನಾಡಲಿಲ್ಲ. ಅನಂತರ ಯುರೇನಿಯಂ ಇಸ್ರೇಲಿ ಬಂದರು ಹೈಫಾಕ್ಕೆ ಹೋಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಹೈಫಾ ಆ ಸ್ಥಳದಿಂದ ೧೦೦ ಸಮುದ್ರ ಮೈಲುಗಳಷ್ಟು ದೂರವಿದೆ. ಅನಂತರ 'ಶೀರ್ಸ್‌ಬರ್ಗ್ ಏ' ಈಶಾನ್ಯಕ್ಕೆ ಇಸ್ಕಂದರನ್‌ನತ್ತ ಸಾಗಿತು.

ಹಡಗವು ಇಸ್ಕಂದರನ್ ಬಂದರನ್ನು ಡಿಸೆಂಬರ್ ೨ ರಂದು ತಲುಪಿದಾಗ ಬರಿದಾಗಿತ್ತು. ಮೂರು ದಿವಸಗಳ ನಂತರ, ನವೆಂಬರ್ ೧೫ ರಂದು ಒಂದೆ ಮನೆಗಪ್ಪಗೆಯುತ್ತಿದ್ದ ಸ್ಪ್ಯಾನಿಶ್ ನಾವಿಕರನ್ನು ಪ್ಯಾಲೆರ್ಮೋದಲ್ಲಿ ಹಡಗಿಗೆ ಮರಳಿ ಬರಲು ಹೇಳಿಕಳಿಸಲಾಯಿತು. ಆದರ ರಹಸ್ಯ ಪಯಣದ ಬಗೆಗೆ ಆತುರರಾದವರು ಹಡಗಿನ ಲಾಗ್ ನೋಡಿದಾಗ ಹಿಂದಿನ ಎರಡೂವರೆ ವಾರಗಳ ಪುಟಗಳೇ ಇರಲಿಲ್ಲ.

'ಶೀರ್ಸ್‌ಬರ್ಗ್ ಏ' ಹಡಗದ ರಹಸ್ಯಪೂರ್ಣ ಪಯಣ ಇದೊಂದೇ ಸಲವಲ್ಲ. ತನಗೊಪ್ಪಿಸಿದ ಕಾರ್ಯವನ್ನು ಮುಗಿಸಿದ ನಂತರ ಒಂದು ವರುಷದ ವರೆಗೆ ಅದು ಭೂಮಧ್ಯ ಸಮುದ್ರ ಮತ್ತು ಅಟ್ಲಾಂಟಿಕ್ ಸಾಗರಗಳ ನಡುವೆ ಸಾರಿಗೆಯ ಸಾಗಾಟದಲ್ಲಿ ತೊಡಗಿತ್ತು. ಈ ಅವಧಿಯಲ್ಲಿ ಫ್ರೆಂಚ್ ಬಂದರ ಚೇರ್‌ಬರ್ಗ್‌ನಲ್ಲಿ ಇಸ್ರೇಲಿಗಾಗಿ ಐದು ನೌಕೆಗಳ ನಿರ್ಮಾಣ ನಡೆದಿತ್ತು. ಅವುಗಳಿಗಾಗಿ ಇಸ್ರೇಲ್ ಹಣವನ್ನು ಕೂಡ ಕೊಟ್ಟಿತ್ತು. ಆದರೆ ಈ ಹೊತ್ತಿಗೆ ಫ್ರಾನ್ಸು ಅರಬ ಮತ್ತು ಇಸ್ರೇಲಿಗಳೊಂದಿಗಿನ ಎಲ್ಲ ಸೈನಿಕ ವ್ಯಾಪಾರವನ್ನೂ ನಿಲ್ಲಿಸಿತ್ತು. ಆದ್ದರಿಂದ ಮೊದಲೇ ಹಣ ಪಡೆದರೂ ಫ್ರಾನ್ಸ್ ಈ ನೌಕೆಗಳನ್ನು ಇಸ್ರೇಲಿಗೆ ಕೊಡಲು ನಿರಾಕರಿಸಿತು. ಇಸ್ರೇಲ್ ಈಗ ಮತ್ತೊಂದು ಸಾಹಸ ಮಾಡಿ ಅವುಗಳನ್ನು ವಶಪಡಿಸಿಕೊಳ್ಳಲು ನಿರ್ಧರಿಸಿತು.

ನವೆಂಬರ್ ೧೭, ೧೯೬೯ ರಂದು, ಇಸ್ರೇಲಿಗಳು ಯುದ್ಧನೌಕೆಗಳನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಿಂತ ಐದು ವಾರ ಮೊದಲು ಈ ಹಡಗದ ನಾವಿಕರಿಗೆ ಮತ್ತೆ ಅವನ್ನು ಮಾರಲಾಗಿದೆಯೆಂದು ಹೇಳಿದರು. ಹೊಸ ನಾವಿಕರು ಹಡಗವನ್ನೇರಿದರು. ಮತ್ತೊಂದು ರಹಸ್ಯ

ಪೂರ್ಣ ಪ್ರಯಾಣ ಆಗ ಪ್ರಾರಂಭವಾಯಿತು. ಬಂದರದ ದಾಖಲೆಯು ಈ ಮೇರೆಗೆ ಹಡಗವು ಸ್ಪೇನಿನ ಆಲ್ಮೇರಿಯಾದಿಂದ ಜಿಬ್ರಾಲ್ಟರ್ ಮಾರ್ಗವಾಗಿ ಫ್ರೆಂಚ್ ತೀರದತ್ತ ಹೊರಟಿತು. ಬಿಸ್ಕೆ ಉಪಸಾಗರ ಈ ಸಲದ ರಹಸ್ಯದ ಸಾಂಕೇತಿಕ ಸ್ಥಳ. ಯುದ್ಧ ನೌಕೆಗಳು 'ಶೀರ್ಸ್‌ಬರ್ಗ್ ಏ' ಹಡಗವನ್ನು ಸಂಧಿಸಿದವು. ಅದಕ್ಕೆ ಈ ಸಲ ವಹಿಸಿಕೊಡಲಾಗಿದ್ದ ಕಾರ್ಯವೆಂದರೆ ಈ ಯುದ್ಧನೌಕೆಗಳಿಗೆ ಸಾಗರಮಧ್ಯದಲ್ಲೇ ಇಂಧನ ಪೂರೈಸುವುದು.

ಈ ಘಟನೆಯ ನಂತರ ಡಿಸೆಂಬರ್ ೩೦ ರಂದು ಪಶ್ಚಿಮ ಜರ್ಮನಿಯ ಬ್ರೇಕ್ ಬಂದರವನ್ನು 'ಶೀರ್ಸ್‌ಬರ್ಗ್ ಏ' ತಲುಪಿತು. ಬಿಸ್ಕೆ ಟ್ರೇಡರ್ಸ್ ಅದನ್ನು ಜನವರಿ ೫, ೧೯೭೦ರಂದು ಗ್ರೀಕ್ ಹಡಗಿನ ಕಂಪನಿಗೆ ಕೊಂಡಗಿಂತ ಕಡಿಮೆ ಬೆಲೆಗೆ ಮಾರಿದರು. ಇದರಿಂದ ಈ ಹಡಗದ ಇತಿಹಾಸದಲ್ಲಿಯ ಒಂದು ಸಾಹಸಪೂರ್ಣ ಅಧ್ಯಾಯಕ್ಕೆ ಪೂರ್ಣವಿರಾಮ ದೊರತಂತಾಯಿತು.

ಪರಮಾಣು ಮಹತ್ವವುಳ್ಳ ಯುರೇನಿಯಂ ಈ ರೀತಿ ಕಣ್ಮರೆಯಾದುದು ಮೊದ ಮೊದಲು ಯಾರಿಗೂ ಗೊತ್ತಾಗಲಿಲ್ಲ. ಮುಂದೆ ಗೊತ್ತಾದಾಗ ಅದನ್ನು ಗುರುತಿಸುವ ಯತ್ನ ನಡೆಯಬೇಕಾದದ್ದು ಪಶ್ಚಿಮ ಜರ್ಮನಿಯಲ್ಲಿ. ಆದರೆ ಪಶ್ಚಿಮ ಜರ್ಮನಿಯ ಅಂದಿನ ಸರಕಾರ ಅದರಲ್ಲಿ ಅಷ್ಟೊಂದು ಆಸ್ಥೆ ವಹಿಸಲಿಲ್ಲ. ಅದಕ್ಕೆ ಕಾರಣವೇನೆಂದು ತರ್ಕಿಸಲು ಸಾಕಷ್ಟು ಪ್ರಬಲ ಆಧಾರಗಳಿವೆ. ಅದಿರಿನಿಂದ ಶುದ್ಧ ಯುರೇನಿಯಂ ಪರಿಷ್ಕರಿಸುವ ತಂತ್ರ ಆಗಲೆ ಇಸ್ರೇಲಿಗೆ ತಿಳಿದಿತ್ತು. ಅದನ್ನು ಜರ್ಮನಿಗೆ ಹೇಳಿಕೊಡುವ ಕರಾರಿನ ಮೇಲೆ ಇಸ್ರೇಲಿನ ಈ ಕಾರ್ಯವನ್ನು ಖಾಸಗಿ ವ್ಯವಹಾರದ ತೆರೆಯ ಹಿಂದೆ ನಡೆಸುಗೊಡಲು ಪಶ್ಚಿಮ ಜರ್ಮನಿ ಒಪ್ಪಿತ್ತು.

ಯುರೋಪಿಯನ್ ಸಾಮಾನ್ಯ ಪೇಟೆಯ ಪರಮಾಣು ಶಕ್ತಿ ವಿಭಾಗ ಈ ಬಗ್ಗೆ ವಿಚಾರಣೆ ನಡೆಸಿತಾದರೂ 'ಶೀರ್ಸ್‌ಬರ್ಗ್ ಏ' ಯಲ್ಲಿ ಹೇರಿದ್ದ ಯುರೇನಿಯಂ ಕಳೆದು ಹೋಗಿಲ್ಲವೆಂಬ ಒಂದು ಅಂಶವನ್ನು ಮಾತ್ರ ಖಚಿತಪಡಿಸಿತು.

ಅಮೇರಿಕದ ಅಧಿಕಾರೀ ವರ್ಗ ಕೂಡ ಇದನ್ನು ಶಾಂತವಾಗಿಯೇ ಸಹಿಸಿತು. "ಹಳದಿ ವಡೆಯು ಕೆಳ ಮಟ್ಟದ ಅದಿರು. ಅದೇನೂ ಬಾಂಬ್ ತಯಾರಿಸಲು ಯೋಗ್ಯವಾದ ಯುರೇನಿಯಂ ಅಲ್ಲ" ಎಂದು ಅದರ ಪ್ರತಿಕ್ರಿಯೆ. ಅನೇಕ ಜಟಿಲ ಪರಿಷ್ಕಾರ, ಪ್ರಯೋಗಗಳ ನಂತರ ಅದನ್ನು ಪರಮಾಣು ಅಸ್ತ್ರ ಮಾಡಲು ಉಪಯೋಗಿಸಬಹುದು. ಅಂತೆಯೇ ಅದರ ಶೋಧವು ಪ್ರಾಮಾಣಿಕವಾಗಿ ನಡೆಯಲೇ ಇಲ್ಲವೆನ್ನಬೇಕು.

ಮೊನ್ನೆ ಏಪ್ರಿಲ್‌ನಲ್ಲಿ ಅಮೇರಿಕನ್ ಸಿನೇಟ್ ಕಮಿಟಿಯ ಹಿಂದಿನ ವಕೀಲ ಪೌಲ್ ಲೆವೆಂಥಾಲ್ ಒಂದು ಪರಿಷತ್ತಿನಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ ಕೆಲ ಸೂಕ್ಷ್ಮ ಸಂಗತಿಗಳನ್ನು ಹೊರಗೆಡವಿದಾಗಲೇ ಜಗತ್ತಿನ ಲಕ್ಷ್ಯ ಈ ಕಡೆಗೆ ಹರಿದದ್ದು.

ಇಸ್ರೇಲಿಗಳ ಸಾಹಸಗಳು ರೋಮಾಂಚಕಾರಿ ಯೆಂಬ ಕಾರಣಕ್ಕಾಗಿ ಜನ ಇಂಥ ಕಾರ್ಯಗಳನ್ನು ಮೆಚ್ಚಬಹುದು. ಆದರೆ ಪರಮಾಣು ಅಸ್ತ್ರಗಳು ಜಗತ್ತಿನ ವಿನಾಶಕ್ಕೇ ಕಾರಣವಾಗಬಲ್ಲವಾದ್ದರಿಂದ ಅವುಗಳ ಉತ್ಪಾದನೆಗೆ ಸಹಾಯವಾಗಬಹುದಾದಂಥ ವಸ್ತುಗಳು ಸುಲಭದಲ್ಲಿ ಎಲ್ಲರಿಗೂ ದೊರೆಯದಂತೆ ನೋಡಿಕೊಳ್ಳುವುದರಲ್ಲೇ ಶ್ರೇಯಸ್ಸಿದೆ; ಅಲ್ಲವೇ? ✡

('ಟೈಮ್' ವಾರಪತ್ರಿಕೆಯ ಸೌಜನ್ಯದಿಂದ)



ಗಂಡಿನ ಲಕ್ಷ್ಯ ಹೆಣ್ಣು ಏನು ಹೇಳುತ್ತದೆ ಎಂಬುವುದರ ಕಡೆಗಿರುವುದಿಲ್ಲ, ಏನು ಕೇಳುತ್ತದೆ ಎಂಬುವುದರ ಕಡೆಗಿರುತ್ತದೆ.

-ಜಾರ್ಜ್ ನಾಥನ್

ದೊಡ್ಡತನವನ್ನು ಬೆಳಕಿಗೆ ತಂದ
ಕ್ಷುಲ್ಲಕ ಪ್ರಸಂಗ

# ಮ್ಯಾಜಿಸ್ಟ್ರೇಟರು ವಕೀಲರನ್ನು ಕುಸ್ತಿಗೆ ಆಹ್ವಾನಿಸಿದರು!

ಕೇಶವಚಂದ್ರ ಗುಪ್ತ

ಈ ಪ್ರಕರಣದಲ್ಲಿ ನಾನು ಆರೋಪಿಯೊಬ್ಬನನ್ನುಳಿದು ಉಳಿದೆಲ್ಲರ ಹೆಸರನ್ನೂ ಹೇಳುತ್ತೇನೆ, ಆರೋಪಿಯನ್ನು ಮಾತ್ರ 'ಕ್ಷ' ಎಂದು ಕರೆಯುತ್ತೇನೆ.

ಕಲಕತ್ತೆಯ ಸುಪ್ರಸಿದ್ಧ ವಕೀಲರಾಗಿದ್ದ ಶ್ರೀ ಜಿ. ಎಂ. ಸೇನಗುಪ್ತರಲ್ಲಿ ನಾನು ಕಿರಿ ವಕೀಲನಾಗಿ ನನ್ನ ವ್ಯವಸಾಯ ಆರಂಭಿಸಿದ್ದೆ. ಸೇನಗುಪ್ತರೇನೂ ಸಾಮಾನ್ಯ ವ್ಯಕ್ತಿಯಲ್ಲ ದೇಶಬಂಧು ಚಿತ್ತರಂಜನ ದಾಸರೊಂದಿಗೆ ಅವರೂ ಸ್ವಾತಂತ್ರ್ಯ ಹೋರಾಟದಲ್ಲಿ ಸುಗ್ಗಿ 'ದೇಶಪ್ರಿಯ' ಎನಿಸಿದವರು.

ರಾಕ್ಸಬರೋ ಎಂಬ ಇಂಗ್ಲಿಷ್ ಗೃಹಸ್ಥರು ಆಗ ಕಲಕತ್ತೆಯ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರಾಗಿದ್ದರು. ಅವರ ಕೋರ್ಟಿನಲ್ಲಿಯೇ ನಮ್ಮ ಪಕ್ಷಗಾರ 'ಕ್ಷ'ರ ವಿರುದ್ಧ ಖಟ್ಲೆ ನಡೆದಿತ್ತು. ಸೇನಗುಪ್ತರು ಅವನ ಪರವಾಗಿ ವಾದಿಸುತ್ತ ಸರಕಾರಿ ಪಕ್ಷವು 'ಕ್ಷ'ರ ಮೇಲೆ ಹೊರೆಸಿದ ಆರೋಪಗಳು ತಳಬುಡವಿಲ್ಲದವೂ ಸಾಮಾನ್ಯ ತಿಳುವಳಿಕೆಯುಳ್ಳ ಯಾವುದೇ ವ್ಯಕ್ತಿಗೆ ಅಸಮಂಜಸವೆನಿಸುವಂತಹವೂ ಇವೆ ಎಂದು ಹೇಳಿದರು.

"ಅದು ಹೇಗೆ?" ರಾಕ್ಸಬರೋ ಕೇಳಿದರು. "ಸ್ವಾಮಿ ನನ್ನ ಪಕ್ಷಕಾರ 'ಕ್ಷ' ಅತ್ಯಂತ ಮರ್ಯಾದಸ್ಥ ಸದ್ಗೃಹಸ್ಥ. ಅಂಥವರು ಹಾಡೇ ಹಗಲಿನಲ್ಲಿ ಕಲಕತ್ತೆಯ ಬೀದಿಯೊಂದರಲ್ಲಿ ಒಬ್ಬ ಮನುಷ್ಯ (ಅವರ ವಿರುದ್ಧ ದೂರಿಕೊಂಡವ) ನನ್ನು ಒತ್ತಾಯದಿಂದ ತಡೆದು ಅವನಿಂದ ಈ ಖಾಂಡಿಗೆ ಅವನ ಮನಸ್ಸಿನ ವಿರುದ್ಧವಾಗಿ ಸಹಿ ಹಾಕಿಸಿಕೊಂಡರೆನ್ನುವುದನ್ನು ನೀವು ನಂಬುತ್ತೀರಾ? ಇಂಥ ಅಸಂಬದ್ಧ ಪ್ರಲಾಪವನ್ನು ಹುಚ್ಚನು ಮಾತ್ರ ನಂಬಲು ಸಾಧ್ಯ!" ಎಂದು ಸೇನಗುಪ್ತ ಗುಡುಗಿದರು.

"ನಾನ್‌ಸೆನ್ಸ್!" ಅಷ್ಟೇ ದೊಡ್ಡ ಧ್ವನಿಯಲ್ಲಿ ರ್‍ಯಾಕ್ಸಬರೋ ಕೂಗಿದರು.

ಅವರ ಧ್ವನಿ ಯಾರನ್ನೂ ಬಾಯಿ ಮುಚ್ಚಿಸುವಂತಹದಿತ್ತು. ಸೇನಗುಪ್ತ ಕೂಡ ಒಂದು ನಿಮಿಷ ಸ್ತಬ್ಧರಾದರು. ಆದರೆ ಅದು ಒಂದೇ ಒಂದು ನಿಮಿಷ ಮಾತ್ರ. ನಂತರ ಅವರೂ ಒಮ್ಮೆಲೇ ಧ್ವನಿಯೇರಿಸಿದರು. "ಸ್ವಾಮಿ, ಆ ಸಂರಕ್ಷಿತ ಸ್ಥಾನದಲ್ಲಿ ಕುಳಿತು ನೀವು ಈ ಮಾತನ್ನು ಆಡಬಹುದು. ಇದೇ ಮಾತನ್ನು ಬೇರೆ ಯಾವುದೇ ಸ್ಥಳದಲ್ಲೂ ಐ. ಸಿ. ಎಸ್. ಅಧಿಕಾರಿಯನ್ನೊಳಗೊಂಡು ಯಾರೇ ಆಡಿದ್ದರೂ ತಕ್ಕ ಉತ್ತರವನ್ನು ಅವರ ಮುಖದ ಮೇಲೆಯೇ ಹೇಳುತ್ತಿದ್ದೆ. ಬೇರೆಲ್ಲಿಯೂ ಇಂಥ ಅಪಮಾನವನ್ನು ನಾನು ಸಹಿಸುತ್ತಲೇ ಇರಲಿಲ್ಲ," ಎಂದು ಬಲ ಮುಷ್ಟಿಯನ್ನು ಮೇಜಿನ ಮೇಲೆ ಬಲವಾಗಿ ಗುದ್ದಿ ಕುಳಿತುಬಿಟ್ಟರು.

ಮುಂದೆ ಕೆಲ ನಿಮಿಷಗಳ ನಂತರ ಮ್ಯಾಜಿಸ್ಟ್ರೇಟರು ಅಲ್ಲಿಂದೆದ್ದು ತಮ್ಮ ಚೇಂಬರಿಗೆ ನಡೆದರು. ಅನಂತರ ಬೆಂಚ್ ಕ್ಲಾರ್ಕನು ನಾವಿದ್ದೆಡೆಗೆ ಬಂದು ಅತ್ಯಂತ ವಿನಯದಿಂದ, "ನೀವು ಚೇಂಬರಿಗೆ ಬರಬೇಕೆಂದು ಮ್ಯಾಜಿಸ್ಟ್ರೇಟರು ಬಿನ್ನವಿಸುತ್ತಾರೆ. ಎರಡೂ ಪಕ್ಷಗಳ

ವಕೀಲರೂ ಬರಬೇಕು," ಎಂದು ಹೇಳಿದನು.

ಸೇನಗುಪ್ತರನ್ನು ಚೇಂಬರಿನೊಳಗೆ ಹೋಗಲು ನಾನು ಮನವೊಲಿಸಬೇಕಾಯಿತು. ಸರಕಾರೀ ವಕೀಲರೂ ನಮ್ಮೊಂದಿಗೆ ಬಂದರು. ಅಲ್ಲಿ ಮೋಜು ನಡೆಯಬಹುದೆಂದು ನನಗೆನಿಸಿದ್ದರೂ ನಿಜವಾಗಿ ಏನು ನಡೆಯಲಿದೆ, ಮ್ಯಾಜಿಸ್ಟ್ರೇಟ್ ನಮ್ಮನ್ನು ಯಾಕೆ ಕರೆಸಿದರು ಎಂದು ಊಹಿಸುವದೂ ನಮಗೆ ಸಾಧ್ಯವಾಗಲಿಲ್ಲ. ಕೆಲ ನಿಮಿಷಗಳ ಹಿಂದೆ ನಡೆದ ಘಟನೆಯಿಂದ ಅವರು ಕುಪಿತರಾಗಿದ್ದರೆ?

ನಾವು ಚೇಂಬರ್ ಪ್ರವೇಶಿಸಿದಾಗ ಮ್ಯಾಜಿಸ್ಟ್ರೇಟರು ತಮ್ಮ ಕೋಟನ್ನು ಕಳಚಿ ಕುಳಿತಿದ್ದರು. ಶರ್ಟಿನ ಎರಡೂ ತೋಳುಗಳನ್ನು ಅವರು ಏರಿಸಿದ್ದರು. ಆದರೂ ಅವರು ಮುಗುಳುನಗೆ ನಗುತ್ತಿದ್ದರು.

"ಬನ್ನಿ ಬನ್ನಿ ಸೇನಗುಪ್ತರೆ, ಈಗ ನಮ್ಮಿಬ್ಬರಲ್ಲೂ ಕುಸ್ತಿ ನಡೆಯಲಿ; ಯಾರು ಗೆಲ್ಲುತ್ತೇವೋ ನೋಡೋಣ. ಕೇಂಬ್ರಿಜ್ಜಿನಲ್ಲಿದ್ದಾಗ ನಾನೂ ಕುಸ್ತಿ ಆಡುತ್ತಿದ್ದೆ," ಎಂದು ಎದ್ದು ನಿಂತು ನಸುನಗುತ್ತಲೇ ರಾಕ್ಸಬರೋ ಸೇನಗುಪ್ತರಿಗೆ ಆಹ್ವಾನವಿತ್ತರು.

"ನಾನ್ಸೆನ್ಸ್!" ಸೇನಗುಪ್ತರು ತಕ್ಷಣ ನುಡಿದರು.

"ಓಹ್! ಈಗೆ ನಾವಿಬ್ಬರೂ ಸಮ ಸಮನಾದಂತಾಯಿತು!" ರಾಕ್ಸಬರೋ ಹೇಳಿದರು.

ನಗೆ ತಡೆಯಲಾಗದೆ ಎಲ್ಲರೂ ಒಮ್ಮೆಲೇ ನಕ್ಕೆವು.

ಸೇನಗುಪ್ತರೂ ಇಂಗ್ಲಂಡಿನಲ್ಲಿಯೇ ಶಿಕ್ಷಣ ಪಡೆದವರಾಗಿದ್ದರು. ಇಲ್ಲಿಗೆ ಮರಳಿದ ಮೇಲೆ ಕೂಡ ಇಂಗ್ಲಿಷ್ ಜನರಂತೆಯೇ ಅವರ ನಿತ್ಯ ಜೀವನವಿತ್ತು. ನಮ್ಮ ಸ್ವಾತಂತ್ರ್ಯಯುದ್ಧದಲ್ಲಿ ಅವರು ನಾಯಕರಾಗಿದ್ದುದರಿಂದ ಎಷ್ಟೋ ಸಲ ಸೆರೆಮನೆ ಕಾಣುವ ಪ್ರಸಂಗವೂ ಅವರಿಗೆ ಒದಗಿತ್ತು. ಸ್ವತಃ ರಾಕ್ಸಬರೋರವರೇ ಸೇನಗುಪ್ತರಿಗೊಮ್ಮೆ ಶಿಕ್ಷೆ ವಿಧಿಸುವ ಸಂದರ್ಭವೂ ಬಂದುಹೋಗಿತ್ತು. ಆದರೆ 'ನಾನ್‌ಸೆನ್ಸ್' ಶಬ್ದವನ್ನು ಇಂಗ್ಲಿಷ್ ಜನರು ಯಾವ ಅರ್ಥದಲ್ಲಿ ಉಪಯೋಗಿಸುವರೆಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಒಬ್ಬ ಮಾತಾಡುತ್ತಿರುವಾಗ ಇನ್ನೊಬ್ಬರು 'ನಾನ್‌ಸೆನ್ಸ್' ಎಂದರೆ ಅದರಿಂದ ಅವರು ನಮ್ಮ ಅಭಿಪ್ರಾಯವನ್ನು ಒಪ್ಪುವುದಿಲ್ಲವೆಂದಷ್ಟೇ ಅರ್ಥವಾಗುವುದೇ ಹೊರತು ನಿಮ್ಮ ಅಪಮಾನವಾದಂತಲ್ಲ. ಅದು ಸೇನಗುಪ್ತರಿಗೂ ಗೊತ್ತಿತ್ತು.

ಅಂತೆಯೇ ಮತ್ತೆ ಕೋರ್ಟು ಪ್ರಾರಂಭವಾದೊಡನೆಯೇ ಸೇನಗುಪ್ತರು ಎದ್ದು ನಿಂತು, "ಸ್ವಾಮಿ, ನಾನು ತಮ್ಮ ಕ್ಷಮೆ ಕೇಳುತ್ತೇನೆ: ನಾನು ನ್ಯಾಯಸ್ಥಾನದ ಗೌರವಕ್ಕೆ ಸಲ್ಲದ ಭಾಷೆಯನ್ನು ಉಪಯೋಗಿಸಿದೆ. ದಯವಿಟ್ಟು ಅದನ್ನು ಮರೆತುಬಿಡಿ," ಎಂದು ನುಡಿದರು.

ತಮ್ಮ ನಾಯಕರೂ ಮಿತ್ರ ಹಾಗೂ ಶತ್ರುಗಳಿಬ್ಬರೊಂದಿಗೆಯೂ ನಮ್ರತೆಯಿಂದಲೇ ನಡೆದುಕೊಳ್ಳುತ್ತಿದ್ದವರೂ ಆದ ದೇಶಬಂಧು ದಾಸರಿಂದ ಕಲಿತ ಪಾಠ ಇಲ್ಲಿ ಸೇನಗುಪ್ತರಿಗೆ ಉಪಯೋಗಕ್ಕೆ ಬಂದಿತು.

ಆದರೆ ಇದರಿಂದಲೂ ಕೇಂಬ್ರಿಜ್ ಪದವೀಧರ ರಾಕ್ಸಬರೋ ಸೋಲಲಿಲ್ಲ.

"ಸೇನಗುಪ್ತ, ನಿಜವಾಗಿಯೂ ಕ್ಷಮೆ ಕೇಳಬೇಕಿದ್ದುದು ನಾನು. ಆ ಶಬ್ದವನ್ನು ನಾನು ನ್ಯಾಯಾಲಯದಲ್ಲಿ ಉಪಯೋಗಿಸಬಾರದಿತ್ತು. ಅದರಿಂದ ನಿಮಗೆ ಅಪಮಾನ ಮಾಡುವ ಇಚ್ಛೆ ನನಗೆಳ್ಳಷ್ಟೂ ಇರಲಿಲ್ಲ. ನನ್ನನ್ನು ನೀವು ಕ್ಷಮಿಸುವಿರೆಂದು ನಾನು ಆಶಿಸುತ್ತೇನೆ," ಎಂದವರು ಹೇಳಿದರು.

ಒಳಿತಿನಲ್ಲಿ ಮುಕ್ತಾಯಗೊಂಡುದೆಲ್ಲ ಒಳಿತೇ ಅಲ್ಲವೆ?

ಈ ಘಟನೆಯೇನೋ ನಮಗೆಲ್ಲ ಮೋಜಿನದೆನಿಸಿತು. ಆದರೆ ಎಂಥ ಕ್ಷುಲ್ಲಕ ಪ್ರಸಂಗವು ಕೂಡ ಮನುಷ್ಯನ ದೊಡ್ಡತನವನ್ನು ಬೆಳಕಿಗೆ ತರುವದೆಂಬುದಕ್ಕೆ ಇದೊಂದೇ ಉದಾಹರಣೆ ಸಾಕು. ✡

ಕೃಪೆ : 'ಕರ್ಮವೀರ'



# ಪರಮಾತ್ಮನಿಗೆ ಬರೆದ ಪತ್ರ

ಸಂಗ್ರಹ : ಸಂಜೀವ ಲಕ್ಷ್ಮೇಶ್ವರ

ಮುಂಬಯಿಯ ಒಂದು ಚಾಳಿನಲ್ಲಿ ಯಮುನಾಬಾಯಿ ಎಂಬೊಬ್ಬ ವೃದ್ಧ ಮಹಿಳೆ ವಾಸಿಸುತ್ತಿದ್ದಳು. ಅವಳಿಗೆ ತನ್ನವರೆಂಬ ಬಂಧು ಬಳಗದವರು ಯಾರೂ ಇರಲಿಲ್ಲ. ವೃದ್ಧಾಪ್ಯದಿಂದಾಗಿ ಯಾವ ಕೆಲಸವನ್ನೂ ಮಾಡಲೂ ಅವಳಿಂದ ಆಗುತ್ತಿರಲಿಲ್ಲ. ಹೀಗಾಗಿ ನಾಲ್ಕು ವರ್ಷದ ಮನೆಯ ಬಾಡಿಗೆಯ ಬಾಕಿ ಉಳಿದಿತ್ತು. ಒಂದು ದಿನ ಆ ಚಾಳಿನ ಮಾಲಕ ಬಂದು, "ಇನ್ನು ಎಂಟು ದಿನಗಳಲ್ಲಿ ಬಾಕಿಯನ್ನು ತೀರಿಸದಿದ್ದರೆ ಒಂಭತ್ತನೆ ದಿವಸ ನಿನ್ನ ಸಾಮಾನುಗಳೊಂದಿಗೆ ನಿನ್ನನ್ನು ಹೊರಗೆ ಹಾಕುವೆನು," ಎಂದು ಹೆದರಿಸಿ ಹೋದ.

ಇಂಥ ಪರಿಸ್ಥಿತಿಯಲ್ಲಿ ಯಾರ ಸಹಾಯ ಕೋರಬೇಕು ಎಂಬುದೇ ಅವಳಿಗೆ ತಿಳಿಯಲಿಲ್ಲ. ಇಷ್ಟು ಹಣವನ್ನು ತನ್ನಂತಹ ಅನಾಥಳಿಗೆ ಯಾರು ತಾನೆ ಕೊಡಬಲ್ಲರು ? ಪರಮಾತ್ಮ ಅನಾಥ ರಕ್ಷಕನೆಂದು ಚಿಕ್ಕಂದಿನಲ್ಲಿ ಕೇಳಿದ್ದು ನೆನಪಾಯಿತು. ಉಪಾಯಗಾಣದೆ ಕೊನೆಯ ದಾರಿಯೆಂದು ಕೂಡಲೇ ಅವನಿಗೊಂದು ಕಾಗದಬರೆದಳು :

"ಪ್ರಿಯ ಪರಮಾತ್ಮಾ,

ನನ್ನ ಪಸಿಸ್ಥಿತಿ ಬಹಳೇ ಹದಗೆಟ್ಟಿದೆ. ನನಗೆ ಐದು ನೂರು ರೂಪಾಯಿಗಳು ಅಗತ್ಯವಾಗಿ ಬೇಕಾಗಿವೆ. ಈ ಹಣ ದೊರೆಯದಿದ್ದರೆ ಮನೆ ಮಾಲಕ ನನ್ನನ್ನು ಮನೆಯಿಂದ ಮಾಡಬೇಕು." ಪತ್ರವನ್ನೇನೋ ಬರೆದಾಯಿತು. ಆದರೆ ವಿಳಾಸವೊಂದು ಬೇಕಲ್ಲ? ಅದಿಲ್ಲದೆ ಪತ್ರ ತಲಪುವಂತಿಲ್ಲ. ಆದರೆ ವಿಳಾಸ ಸರಿಯಾಗಿರದ ಪತ್ರಗಳನ್ನು ಪೋಸ್ಟಿನವರು ಪ್ರಯತ್ನಪಟ್ಟು ಮುಟ್ಟಿಸುವರೆಂದು ಅವಳು ಕೇಳಿ ತಿಳಿ ತಿಳಿದಿದ್ದಳು. ಅದು ನೆನಪಾದೊಡನೆ ಈ ವಿಳಾಸವನ್ನು,

ಪರಮೇಶ್ವರ
ಮುಖ್ಯ ಪೋಸ್ಟ್ ಆಫೀಸ್
ಮುಂಬಯಿ ಅವರ ಮುಖಾಂತರ

ಎಂದು ಬರೆದು ಪತ್ರವನ್ನು ಪೋಸ್ಟ್ ಮಾಡಿದಳು.

ಅವಳ ಈ ಪತ್ರ ಮುಂಬಯಿಯ ಮುಖ್ಯ ಕಚೇರಿಗೆ ತಲುಪಿತು. ವಿಳಾಸ ಬಹು ವಿಚಿತ್ರವಾದದ್ದರಿಂದ ಪೋಸ್ಟ ಮಾಸ್ತರರು ಅದನ್ನು ಒಡೆದು ಓದಿದರು. ಯಮುನಾಬಾಯಿಯ ಪರಿಸ್ಥಿತಿಯನ್ನು ಓದಿ ಅವರಿಗೆ ಬಹಳೇ ಕೆಡುಕೆನಿಸಿತು. ತಮ್ಮ ಸಹಕಾರಿಗಳಿಗೆ ಅದನ್ನು ತೋರಿಸಿದಾಗ ಕಚೇರಿಯಲ್ಲಿನ ಎಲ್ಲರೂ ಅವಳ ಬಗ್ಗೆ ಮರುಕಗೊಂಡು ಕೈಲಾದಷ್ಟು ವಂತಿಗೆ ಹಾಕಿ ಹಣ ಕೂಡಿಸಿದರು. ಅದು ೪೫೦ ರೂಪಾಯಿಗಳಷ್ಟಾಯಿತು. ಅದನ್ನು ಯಮುನಾಬಾಯಿಯ ವಿಳಾಸಕ್ಕೆ ಕಳಿಸಿಕೊಟ್ಟರು.

ಮುಂದೆ ಮೂರೇ ದಿನಕ್ಕೆ ಯಮುನಾಬಾಯಿಯು ಪರಮೇಶ್ವರನಿಗೆ ಬರೆದ ಮತ್ತೊಂದು ಪತ್ರ ಮುಖ್ಯ ಪೋಸ್ಟ್ ಆಫೀಸಿಗೆ ಬಂದಿತು.

"ಪ್ರಿಯ ಪರಮಾತ್ಮಾ,

ದಯಾಶೀಲನಾದ ನೀನು ಕಳಿಸಿದ ಹಣ ಮುಟ್ಟಿತು. ಆದರೆ ಐದುನೂರರ ಬದಲು ನಾಲ್ಕು ನೂರಾ ಐವತ್ತೇ ಮುಟ್ಟಿದವು. ನಾನು ಕೇಳಿದಂತೆ ನೀನೇನೋ ಐದುನೂರು ರೂಪಾಯಿಗಳನ್ನೂ ಕಳಿಸಿರಬಹುದು. ಆದರೆ ಪೋಸ್ಟ್ ಆಫೀಸಿನ ಬದ್ಮಾಷ್ ಜನರು ಐವತ್ತು ರೂಪಾಯಿ ಎತ್ತಿ ಹಾಕಿದ್ದಾರೆ ಎಂದು ಕಾಣುತ್ತದೆ.

ಇತಿ, ನಿನ್ನ
ಯಮುನಾಬಾಯಿ."

ಕೃಪೆ: ಮರಾಠಿ 'ಅಮೃತ'

# ಶಿವಛತ್ರಪತಿಯ 'ಭವಾನಿ ಖಡ್ಗ'

ಗೌರೀಶ ಕಾಯ್ಕಿಣಿ

ಛತ್ರಪತಿ ಶಿವಾಜಿ ಮಹಾರಾಜರ ಭವಾನಿ ಖಡ್ಗದ ರಹಸ್ಯ ಇಂದಿನ ವರೆಗೂ ಸರಿಯಾಗಿ ಇತ್ಯರ್ಥವಾಗದೆ ಉಳಿದಿದೆ. ಮಹಾರಾಷ್ಟ್ರದ ಹಾಗೂ ನಮ್ಮ ರಾಷ್ಟ್ರದ ಅನೇಕ ಇತಿಹಾಸಜ್ಞ-ರಿಗೂ ಸಂಶೋಧಕರಿಗೂ ಅದೊಂದು ಜಾಗೃತ ಆಹ್ವಾನವಾಗಿ ನಿಂತಿದೆ. ಕೊಹಿನೂರ ವಜ್ರ, ಮಯೂರ ಸಿಂಹಾಸನಗಳಂತೆಯೇ ಶಿವಛತ್ರ-ಪತಿಯ ಈ ಜಗತ್ಪ್ರಸಿದ್ಧ ಖಡ್ಗವೂ ಸ್ವಾತಂತ್ರ್ಯ ಪ್ರಾಪ್ತಿಯ ನಂತರ, ಪೂರ್ಣ ಸ್ವರಾಜ್ಯದ ಸ್ಥಾಪನೆಯನಂತರ ಭಾರತೀಯ ಜನತೆಯ ಸಾರ್ವಭೌಮತ್ವಕ್ಕೆ ನಿದರ್ಶಯವಾಗಿ ಮರಳಿ ಸಲ್ಲಬೇಕಾದ ಒಂದು ಪವಿತ್ರ ಭಾವನಾಮಯ-ವಾದ ಪೂಜಾ ಪ್ರತೀಕ.

ಒಂದು ಶತಮಾನ ಹಿಂದೆಯೇ ಲೋಕಮಾನ್ಯ ಟಿಳಕರು ಶಿವಜಯಂತಿ ಉತ್ಸವವನ್ನು ಒಂದು ರಾಷ್ಟ್ರೀಯ ಜಾಗೃತಿಯ ಸಾಧನವಾಗಿ ರೂಢಿಗೊಳಿಸಿದರು. ಅವರು ಅಂದು 'ಹೋಮ್‌ರೂಲ್' ಚಳವಳಿಯ ಪ್ರಚಾರಕ್ಕಾಗಿ ಇಂಗ್ಲಂಡಿಗೆ ತೆರಳಿದಾಗ ಮಹಾರಾಷ್ಟ್ರದ ಅಂದಿನ ಶ್ರೇಷ್ಠ ಕವಿ "ಗೋವಿಂದಾಗ್ರಜ". (ಶ್ರೀ ಗಣೇಶ ರಾಮ ಗಡಕರಿ) ಒಂದು ಭಾವಾವೇಶ-ದಿಂದ ತುಳುಕಾಡುವ ಕವನದಲ್ಲಿ ಲೋಕಮಾನ್ಯ-ರಿಗೆ ಈ ದೇಶದ ಆದೇಶವಿತ್ತಿದ್ದರು: "ಲಂಡನ್ನಿ-ನಿಂದ ಮರಳುವಾಗ ಸ್ವರಾಜ್ಯವಲ್ಲದಿದ್ದರೂ ಆ ಬ್ರಿಟಿಶ್ ದೊರೆಯಿಂದ ನಮ್ಮ ಭವಾನಿ ತಲ-ವಾರವನ್ನಾದರೂ ಪಡೆದುಕೊಂಡು ಬನ್ನಿರಿ; ಅಷ್ಟೇ ಸಾಕು!"

ಶಿವಛತ್ರಪತಿಯ ಈ ಭವಾನಿ (ಜಗದಂಬಾ) ಖಡ್ಗವು ಕಳೆದ ಎರಡು ಶತಮಾನಗಳಿಂದಲೂ ಲಂಡನ್ನಿನ ಬ್ರಿಟಿಶ್ ಮ್ಯೂಜಿಯಮ್ಮಿನಲ್ಲಿ ಇದೆ.



ಇಂದಿಗೂ ಅದು ಅಲ್ಲಿಯೇ ಭದ್ರವಾಗಿ ಇದೆ. ೧೯೭೪ರಲ್ಲಿ ಶಿವಾಜಿಯ ಸ್ವರಾಜ್ಯ ಸ್ಥಾಪನೆಯ ಸಿಂಹಾಸನಾರೋಹಣದ ತ್ರಿಶತ ಸಾಂವತ್ಸರಿಕ ಮಹೋತ್ಸವವು ಮಹಾರಾಷ್ಟ್ರದ ಒಳಗೂ ಹೊರಗೂ ಸಂಭ್ರಮದಿಂದ ನೆರವೇರಿತು. ಈ ಸಂದರ್ಭದಲ್ಲಿ, ಶಿವಾಜಿಯ ಮೊಮ್ಮಗ ಛತ್ರಪತಿ ಶಾಹುವಿನ ವಂಶದ ರಾಜಧಾನಿಯಾಗಿ ನಡೆದು ಬಂದ ಸಾತಾರೆಯ ಅರಮನೆಯಲ್ಲಿಯ ಖಡ್ಗವನ್ನೇ ರಾಮಗಡದ ಉತ್ಸವ ಸಮಾರಂಭದಲ್ಲಿ ತಂದು ಅದನ್ನು ಸನ್ಮಾನಿಸಲಾಯಿತು! ಆದರೆ ಇದೊಂದು ಪ್ರಮಾದವೇ ಎಂದು ಶ್ರೀ ವಿಶ್ವನಾಥ ಹಣಮಂತ ಕುಲಕರ್ಣಿ (ಕಡೋಲಕರ) ಇವರು ಸ್ಪಷ್ಟವಾಗಿ ಅಭಿಪ್ರಾಯಪಡುತ್ತಾರೆ.

ಆದರೆ ಕಡೋಲಕರರ ಅಭಿಪ್ರಾಯಕ್ಕೆ ಇಷ್ಟೇಕೆ ಮಹತ್ವ? ಅದರ ಕಾರಣ ಹೀಗೆ– ಇವರು ಕೊಲ್ಹಾಪುರ ಸಂಸ್ಥಾನದ ಹಳೆಯ ಅಧಿಕಾರಿಗಳು. ಸೇವಾನಿವೃತ್ತಿಯ ನಂತರ ಕಡೋಲಿ ಎಂಬ ತಮ್ಮ ಗ್ರಾಮದಲ್ಲಿಯೇ ಇರುತ್ತಿದ್ದು, ಕಳೆದ ೪೭ ವರ್ಷ ಇವರು ಈ ಭವಾನಿ ಖಡ್ಗದ ಇತ್ಯರ್ಥಕ್ಕಾಗಿ ತಮ್ಮ ಶೇಷಾಯುಷ್ಯವನ್ನು ಅರ್ಪಿಸಿಕೊಂಡಿದ್ದಾರೆ. ಈ ಬಗ್ಗೆ 'ಭವಾನೀ ಖಡ್ಗ ಸಂಶೋಧನ ಕೇಂದ್ರ'ವನ್ನೊಂದು ಸ್ಥಾಪಿಸಿಕೊಂಡು ೧೯೨೬ ರಿಂದ ೧೯೭೪ರ ವರೆಗೂ ಪುಣೆ, ಮುಂಬಯಿ, ದಿಲ್ಲಿ ಕಡೆಗಳಿಂದ ಬ್ರಿಟಿಶ್ ಮ್ಯೂಜಿಯಮ್ಮಿನೊಡನೆ ಅವ್ಯಾಹತ ಪತ್ರ ವ್ಯವಹಾರ ನಡೆಸಿ ಈ ಮೂಲಕವೇ ಈ ಖಡ್ಗದ ಬಗೆಗೆ ಸ್ವಾರಸ್ಯದ ವಿವರಗಳನ್ನು ಸಂಗ್ರಹಿಸಿರುತ್ತಾರೆ.

ಇಂದು ಶ್ರೀ ವಿಶ್ವನಾಥ ಕಡೋಲಕರರ ಪ್ರಾಯ ೮೧. ೧೯೧೦ರಲ್ಲಿ ತಮ್ಮ ೧೪ ನೆಯ ವರ್ಷ ವಯಸ್ಸಿನಲ್ಲಿ ಅವರು ಕೊಲ್ಹಾಪುರ ಸಂಸ್ಥಾನದ ಚಾಕರಿ ಹಿಡಿದರು. ಆದರೆ ೧೯೨೪ರಲ್ಲಿ ತಮ್ಮ ವಿರುದ್ಧ ಆದ ಅನ್ಯಾಯವನ್ನು ಪ್ರತಿಭಟಿಸಿ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಆಗ ಅವರು ಕೊಲ್ಹಾಪುರದ ನ್ಯಾಯಾಲಯದಲ್ಲಿ ಕಾರಕೂನರಿದ್ದರು. ಅಂದಿನ ಸಂಸ್ಥಾನಿಕ ರಾಜಾರಾಮ ಮಹಾರಾಜರು ಒಂದು ಆಜ್ಞೆ ಹೊರಡಿಸಿ ಲಾಗುಬಾದಿನ ಜಮೀನುಗಳ ಮೇಲಿನ ತೆರಿಗೆ (ಸನದು) ಹತ್ತು ಪಟ್ಟು ಹೆಚ್ಚಿಸಿದ್ದರು. ಈ ಆಜ್ಞೆಯ ರದ್ದತಿಗೆ ಹೋರಾಡಲು ಆಗ ಕಡೋಲಕರರಿಗೆ ಒಬ್ಬ ವಕೀಲನೂ ಸಿಗಲಿಲ್ಲ. ಆಗ ತಾವೇ ರಾಜೀನಾಮೆ ಕೊಟ್ಟು ರೈತರದೊಂದು ಚಳವಳಿಯನ್ನು ಸಂಘಟಿಸಿ ಜೈಲಿಗೂ ಹೋದರು. ೫ ತಿಂಗಳು ಸಶ್ರಮ ಶಿಕ್ಷೆ ಭೋಗಿಸಬೇಕಾಯಿತು. ಆದರೆ ಕೊನೆಗೂ ಸಂಸ್ಥಾನ ಈ ಆಜ್ಞೆಯನ್ನು ಹಿಂದೆಗೆದುಕೊಳ್ಳಬೇಕಾಯಿತು.

ಇದೇ ಜಿದ್ದಿನಿಂದ ಮುಂದೆ ಕಡೋಲಕರರು ಪಟ್ಟು ಹಿಡಿದು ಶಿವಾಜಿಯ ಖಡ್ಗದ ಶೋಧಕ್ಕೆ ತೊಡಗಿದರು. ಇದಕ್ಕೆ ಪ್ರೇರಣೆ ಅವರು ಅಂದು ಓದಿದ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ 'ದಾಸಬೋಧ.' ಅದರ ಪ್ರಕಾರ ಶಿವಾಜಿಯು ತನ್ನ ಭವಾನಿ ಖಡ್ಗವನ್ನು ಅಂತ್ಯಕಾಲದ ಸಮಯದಲ್ಲಿ ರಾಮದಾಸರಿಗೆ ಒಪ್ಪಿಸಿದ್ದನು. ಮುಂದೆ ಶಿವಾಜಿಯ ಅವಸಾನದ ನಂತರ ರಾಮದಾಸಸ್ವಾಮಿಗಳು ಅದನ್ನು ಕೊಲ್ಹಾಪುರದ ರಾಜಮನೆತನಕ್ಕೆ ಒಪ್ಪಿಸಿದ್ದನ್ನು ಅವರು ಓದಿದರು. (ಆದರೆ ಈ ಆಖ್ಯಾಯಿಕೆಯಲ್ಲಿ ಐತಿಹ್ಯದ ಅಂಶವೆಷ್ಟೋ ಗೊತ್ತಿಲ್ಲ. ಏಕೆಂದರೆ ಕೊಲ್ಹಾಪುರದ ರಾಜಮನೆತನ ಸ್ಥಾಪಿತವಾದದ್ದೇ ಸಂಭಾಜಿ–ರಾಜಾರಾಮರ ನಂತರ, ರಾಜಾರಾಮನ ಪತ್ನಿ ತಾರಾಬಾಯಿಯಿಂದ ಶಾಹು ಛತ್ರಪತಿಯ ಸತ್ತೆಯನ್ನು ಧಿಃಕರಿಸಿ!)

ಅದೇನೆ ಇದ್ದರೂ ಅಭಿಮಾನಿ ಖಡ್ಗವು ಕೊಲ್ಹಾಪುರದ ರಾಜರು ಬ್ರಿಟಿಶರ ಮಾಂಡಲಿಕರಾದ ಮೇಲೆ, ವ್ಹಿಕ್ಟೋರಿಯಾ ಮಹಾರಾಣಿಯ ಮಗ ಏಳನೆಯ ಎಡ್ವರ್ಡ್ ಪ್ರಿನ್ಸ್ ಆಫ್ ವೇಲ್ಸ್ ಆಗಿದ್ದಾಗ ಅವನಿಗೆ ಕಾಣಿಕೆಯಾಗಿ ಕೊಲ್ಹಾಪುರದ ಸಂಸ್ಥಾನಿಕರಿಂದ ಅರ್ಪಿಸಲ್ಪಟ್ಟಿತು. ಇದೆಲ್ಲ ವಿವರ ಶ್ರೀ ಕಡೋಲಕರರು ಕಲೆ ಹಾಕಿದ್ದು ೧೯೩೦ರಲ್ಲಿ 'ದಾಸಬೋಧ' ಗ್ರಂಥ ಓದಿ ಪ್ರೇರಣೆ ಪಡೆದ ನಂತರ.

ಭವಾನಿ ಖಡ್ಗ ೧೮೭೫ರಲ್ಲಿ ಬ್ರಿಟಿಶರ ವಶಕ್ಕೆ

ಹೋಯಿತು. ಆಗ ಅದು ಲಂಡನ್ನಿನ ಬ್ರಿಟಿಶ್ ಮ್ಯೂಜಿಯಂ ಸೇರಿತು. ಆ ಖಡ್ಗದ ಒಂದು ಫೋಟೋ ದೊರಕಿಸಿಕೊಳ್ಳಲು ಕಡೋಲಕರ-ಕುಲಕರ್ಣಿಯವರು ಬಹಳವಾಗಿ ಯತ್ನಿಸಿದರು.

ಆದರೆ ಆಗ ಯಶಸ್ಸು ಸಿಗಲಿಲ್ಲ. ಬ್ರಿಟಿಶ್ ಮ್ಯೂಜಿಯಮ್ಮಿನಿಂದ ಪತ್ರ ಬಂದಿತು: "ಖಡ್ಗವು ಯುರೋಪಿನಲ್ಲಿ ತಯಾರಿಸಿದ್ದು, ಭಾರತೀಯ ತಯಾರಿಕೆಯದಲ್ಲ! ಖಡ್ಗದ ಮೇಲೆ I. H. S. ಎಂಬ ಅಕ್ಷರಗಳನ್ನು ಕೆತ್ತಲಾಗಿದೆ." ಆದರೆ ಖಡ್ಗದ ಫೋಟೋವನ್ನು ಅವರು ಕಳುಹಿಸಿ ಕೊಡಲಿಲ್ಲ. ಖಡ್ಗದ ಮೇಲೆ ಕುಸುರಿನ ಕೆಲಸವೂ ಇದೆ ಎಂಬುದನ್ನು ಅವರು ಇನ್ನೊಂದು ಪತ್ರದಲ್ಲಿ ತಿಳಿಸಿದರು.

ಅನಂತರ ಕೊಲ್ಹಾಪುರ ಸಂಸ್ಥಾನದ ದಿವಾಣ ರಾವಸಾಹೇಬ ಸುರ್ವೆ ಇವರಿಂದ ತಿಳಿದು ಬಂದಿದ್ದೇನೆಂದರೆ, ೧೮೭೫ರ ತನಕವೂ ಆ ಖಡ್ಗದ ಕೊಲ್ಹಾಪುರ ದರಬಾರದಲ್ಲಿ ಇತ್ತು. ಮುಂದೆ ೧೮೭೬ರಿಂದ ಅದು ಸಂಗ್ರಹದಲ್ಲಿ ಇಲ್ಲ. ಈ ಖಡ್ಗವು ರತ್ನಖಚಿತವಾಗಿದೆಯೆಂಬ ಒಂದು ವಿವರವೂ ಗೊತ್ತಾಯಿತು. ಶ್ರೀ ಕಡೋಲಕರರು ತಮ್ಮ ಪ್ರಯತ್ನ ಬಿಡಲಿಲ್ಲ. ಕೇವಲ ಪತ್ರವ್ಯವಹಾರದಿಂದಲೇ ಈ ಶೋಧ ಮುಂದುವರಿಸಿದರು. ೧೯೬೯–೭೦ ರಲ್ಲಿ ಅವರಿಗೆ ತಕ್ಕಮಟ್ಟಿಗೆ ಇದರಲ್ಲಿ ಯಶಸ್ಸೂ ಲಭಿಸಿತು. ೪೦ ವರ್ಷಗಳ ಎಡಬಿಡದ ಸಾಧನೆಯ ಫಲವಾಗಿ.

ಮತ್ತೆ ಮತ್ತೆ ಪತ್ರ ಬರೆದು ಭೇಡಿಸಿದ್ದರಿಂದ ಬ್ರಿಟಿಶ್ ಮ್ಯೂಜಿಯಂನವರು ೬"×೪" ಸೈಜಿನ ಭವಾನಿ ಖಡ್ಗದ ಎರಡು ಫೋಟೋಗಳನ್ನು ಕಳುಹಿಸಿದರು. ೧೯೭೦ ರ ನವ್ಹೆಂಬರ್ ೨೧ ಕ್ಕೆ. ಆದರೆ ಫೋಟೋಗಳ ಜೊತೆಗೆ ೧೩ ಶಿಲಿಂಗುಗಳ ಒಂದು ಬಿಲ್ಲು ಬೇರೆ ಬಂದಿತು! ಈ ಬಿಲ್ಲಿನಲ್ಲಿ "ಶಿವಾಜಿ ಸ್ವೋರ್ಡ್ ಇನ್ ದ ರಾಯಲ್ ಕಲೆಕ್ಶನ್" ಎಂದು ಸ್ಪಷ್ಟವಾಗಿ ಬರೆಯಲಾಗಿತ್ತು. ೧೯೩೧ ರಲ್ಲಿ ಅಂಥ ಒಂದು ಖಡ್ಗವೆ ತಮ್ಮಲ್ಲಿ ಇಲ್ಲವೆಂದು ಬರೆದು ತಿಳಿಸಿದ ಈ ಮ್ಯೂಜಿಯಮ್ಮಿನವರು ೪೦ ವರ್ಷಗಳ ನಂತರ ಈ ಇಲ್ಲದ ಖಡ್ಗದ ಫೋಟೋ ಮತ್ತು ವಿವರಗಳನ್ನು ಬರೆದು ತಿಳಿಸಿದ್ದರು!

ಈ ಎರಡು ಫೋಟೋಗಳಲ್ಲಿ ಒಂದು ಭವಾನಿ ಖಡ್ಗದ ಪೂರ್ತಿ ಉದ್ದದ ಛಾಯಾಚಿತ್ರ. ಇನ್ನೊಂದು ಅದರ ರತ್ನಖಚಿತ ಹಿಡಿಕೆಯ ಚಿತ್ರ. ಈ ಖಡ್ಗ ಒಟ್ಟು ೪೮ ಇಂಚು ಉದ್ದ. ಅದರ ಅಲಗು ೩೮॥ ಇಂಚು ಮತ್ತು ಹಿಡಿಕೆ ೯॥ ಇಂಚು. ಈ ಹಿಡಿಕೆಯಲ್ಲಿ ೩೩೬ ವಜ್ರಗಳನ್ನೂ ೬೮ ಕೆಂಪು ಹರಳುಗಳನ್ನೂ ಕೂಡಿಸಲಾಗಿವೆ. ಖಡ್ಗದ ರೂಪ–ರಚನೆ ತುಂಬ ಮಾಟವಾಗಿದೆ, ಉತ್ಕೃಷ್ಟವಾಗಿದೆ. ಹಿಡಿಕೆಯ ಮುಂಭಾಗದಲ್ಲಿ ೧೫೬ ವಜ್ರಗಳೂ ೧೭ ಮಾಣಿಕಗಳನ್ನೂ ಜೋಡಿಸಲಾಗಿದೆ. ಈ ಮುಷ್ಟಿಯ ತುದಿಯ ಚೆಲುವೂ ಅಪ್ರತಿಮವಿದೆ. ಅದರಲ್ಲಿಯೂ ೮೦ ವಜ್ರಗಳನ್ನೂ ೪ ಕೆಂಪು ಹರಳುಗಳನ್ನು ಕೂಡಿಸಲಾಗಿದೆ. ಹಿಡಿಕೆಯ ಒಳ ಮಗ್ಗಲಿಗೆ ಬೇರೆ ಲೋಹದ ಹಾಳೆ ಇದ್ದು ಕೈಗೆ ಅದರಿಂದ ನೋವಾಗದಂತೆ, ಮೆತ್ತನ್ನ 'ಗಾದಿ'ಯನ್ನೂ ಅದಕ್ಕೆ ಅಂಟಿಸಿದ್ದುಂಟು.

ಇದರಿಂದ ಒಂದು ಸಂಗತಿ ಸ್ಪಷ್ಟ. ಸಾತಾರೆಯ ಖಡ್ಗ ಭವಾನಿ ಖಡ್ಗವಲ್ಲ. ಕೊಲ್ಹಾಪುರದಿಂದ ಲಂಡನ್ನಿಗೆ ಹೋದ ಖಡ್ಗವೇ ನಿಜವಾದ ಶಿವಾಜೀ ಖಡ್ಗ. ಸಾತಾರೆ ಮತ್ತು ಕೋಲ್ಹಾಪುರ ಇವೆರಡೂ ರಾಜಕುಲಗಳಲ್ಲಿ ಎಂದಿನಿಂದಲೂ ವ್ಯಾಜ್ಯಗಳಿದ್ದರಿಂದ ಆ ಖಡ್ಗದ ಬಗೆಗೂ ವಿವಾದವೆದ್ದಿರಬೇಕು.

ಆದರೆ ಶಿವಛತ್ರಪತಿಯ ಈ ಭವಾನಿ ಖಡ್ಗ ಯುರೋಪದಲ್ಲಿ ತಯಾರಾದದ್ದು ಹೇಗೆ? ಅವರ ಮೇಲಿ I. H. S.* ಈ ರೋಮನ್ ಅಕ್ಷರಗಳು ಅಚ್ಚಾದದ್ದು ಹೇಗೆ? ಈ ಬಗೆಗೆ ಸಾವಂತವಾಡಿಯ ಇತಿಹಾಸ ವೃತ್ತದಿಂದಲೂ ಸಮರ್ಥನೆ ದೊರೆಯುತ್ತದೆ. ಈ ಖಡ್ಗದ

---

* ಈ ಖಡ್ಗದ ಮೇಲಿರುವ I. H. S. ಅಕ್ಷರಗಳ ಅರ್ಥವೇನು? ಅವು ಪೋರ್ತುಗೀಜ್ ಶಬ್ದಗಳ ಪ್ರಾರಂಭಿಕ ಅಕ್ಷರಗಳು "ಇನ್ ಹಾಕ್ ಸಾಯನಾವೋ" (ನೀನು ಗೆದ್ದೇ ಗೆಲ್ಲುವಿ) ಎಂಬ ವಾಕ್ಯ.

ಪೂರ್ವ ಚರಿತ್ರೆ ಇಂತಿದೆ:

೧೫೩೦ ರಲ್ಲಿ ಪೋರ್ತುಗೀಜರ ಪ್ರಥಮ ದಾಳಿಗಾರ ನೌಕಾಧಿಪತಿ ಅಲ್ಫಾನ್ಸೊ ಅಲ್ಬುಕರ್ಕನು ಗೋವೆಯ ಮೇಲೆ ದಾಳಿ ಮಾಡಿದಾಗ ಅವನ ಕಮಾಂಡರನಾಗಿದ್ದ ಡಾಯಗೂ ಫರ್ನಾಂಡಿಜ್ ಸಾವಂತವಾಡಿಯ ಮೇಲೆ ದಾಳಿ ಮಾಡಿದ. ಯುದ್ಧದಲ್ಲಿ ಡಾಯಗೂ ಪರಾಜಯಗೊಂಡನು. ಈಗ ಸಾವಂತವಾಡಿಯ ಭೋಸಲೆ ವಂಶದ ದೊರೆ ಅವನ ಖಡ್ಗವನ್ನು ಕಸಿದು ವಶಪಡಿಸಿಕೊಂಡ. ಅದನ್ನು ಅವನು ಒಂದು ಪೂಜೆಯ ವಸ್ತುವಾಗಿ ಇಟ್ಟುಕೊಂಡಿದ್ದ. ಮುಂದೆ ಛತ್ರಪತಿ ಶಿವಾಜಿಗೆ ಈ ಭೋಸಲೆ ಮನೆತನದವರು ಅದನ್ನೇ ಕಾಣಿಕೆಯಾಗಿ ಒಪ್ಪಿಸಿದರು. ಶಿವಾಜಿಯು ಅದನ್ನು ಬಹಳ ಮೆಚ್ಚಿಕೊಂಡು ಅದಕ್ಕೆ ಪ್ರತಿಯಾಗಿ ಸಾವಂತವಾಡಿಯ ಭೋಸಲೆಯವರಿಗೆ ೩೦೦ ಹೊನ್ನುಗಳನ್ನು ನೀಡಿದನು. ಈ ಘಟನೆ ನಡೆದದ್ದು ಅಫಝಲಖಾನನ ವಧಕ್ಕೂ ಮುಂಚೆ.

ಶಿವಾಜಿಯು ಅಫಝಲಖಾನನನ್ನು ಇದೇ ಖಡ್ಗದಿಂದ ಇರಿದು ಕೊಂದಿದ್ದ. ಮುಂದೆ ರಾಯಗಡದಲ್ಲಿಯ ರಾಜ್ಯಾರೋಹಣ ಪ್ರಸಂಗದಲ್ಲಿಯೂ ಇದೇ ಖಡ್ಗವನ್ನು ಬಳಸಲಾಯಿತು. ಈ ಖಡ್ಗದಲ್ಲಿ ತುಳಜಾಪುರದ ಶ್ರೀ ಭವಾನಿ ಮಾತೆಯ ತೇಜವು ಅಡಗಿದೆ ಎಂದು ಶಿವಾಜಿಯ ಭಾವನೆ. ಆದ್ದರಿಂದ ಇದಕ್ಕೆ 'ಭವಾನೀ ತಲವಾರ' ಎಂಬ ಲೋಕಪ್ರಸಿದ್ಧಿ. ಮುಂದೆ ಶಿವಛತ್ರಪತಿಯು ಮಾರಣಾಂತಿಕ ಕಾಯಿಲೆ ಬಿದ್ದಾಗ ಈ ಖಡ್ಗವನ್ನು ಅವರು ಗುರು ಸಮರ್ಥ ರಾಮದಾಸರಿಗೆ ಒಪ್ಪಿಸಿದ. ಈ ಮಹಾರಾಜರ ನಿಧನದ ನಂತರ ರಾಮದಾಸಸ್ವಾಮಿಗಳು ಅದನ್ನು ಕೊಲ್ಹಾಪುರದ ರಾಜವಂಶಕ್ಕೆ ಕೊಟ್ಟರು ಎಂದು ಆಖ್ಯಾಯಿಕೆ ಇದೆ.

ಆದರೆ ಇದಕ್ಕೆ ಭದ್ರವಾದ ಐತಿಹಾಸಿಕ ಆಧಾರವಿಲ್ಲ. ಏಕೆಂದರೆ ಕೊಲ್ಹಾಪುರ ರಾಜಗದ್ದುಗೆಯ ಪ್ರತಿಷ್ಠಾಪನೆಯೇ ಶಿವಾಜಿ–ಶ್ರೀರಾಮದಾಸರ ಕಾಲದ ನಂತರ. ಶಾಹು–ಮಹಾರಾಜರ ಕಾಲದ ವರೆಗೂ ರಾಮದಾಸ ಸ್ವಾಮಿ ಬದುಕಿದ್ದುದು ಅಸಂಭವ. ರಾಮದಾಸೀ ಸಂಪ್ರದಾಯದವರು ಸ್ವಪ್ರತಿಷ್ಠೆಗಾಗಿ ಈ ಆಖ್ಯಾಯಿಕೆಯನ್ನು ಪ್ರಚರಗೊಳಿಸಿರಬೇಕು. ಈ ಮಂದಿ ಶಿವಾಜಿಯು ಸ್ವರಾಜ್ಯವನ್ನು ರಾಮದಾಸರ ಜೋಳಿಗೆಗೆ ಇಟ್ಟು ವಿರಕ್ತನಾಗಲು ಹೊರಟಿದ್ದನು; ಆಗ ಸ್ವಾಮಿಗಳು ಬುದ್ಧಿವಾದ ಹೇಳಿ ಅವನನ್ನು ಒಲಿಸಿ ತಮ್ಮ ಪರವಾಗಿ ರಾಜ್ಯ ನೋಡಿಕೊಳ್ಳಲು ಹೇಳಿದರು. ಆಗ ರಾಮದಾಸರ ಕೌಪೀನದ ಬಟ್ಟೆಯನ್ನು ತನ್ನ ಧ್ವಜವಾಗಿ ಇಟ್ಟುಕೊಂಡು ಶಿವಾಜಿ ಸ್ವರಾಜ್ಯವನ್ನು ನಡೆಯಿಸಿದನೆಂದೂ ಒಂದು ಕಟ್ಟುಕಥೆ ಜನಪ್ರಿಯಗೊಳಿಸಿದ್ದುಂಟು. ಆದರೆ 'ಭಗವಾ ಝೇಂಡಾ' ಶಿವಾಜಿಯ ತಂದೆ ಶಹಾಜಿಯ ಧ್ವಜವೂ 'ಭಗವಾ' ಶಿವನ ಆರಾಧಕರಾದ ಎಲ್ಲ ರಾಜಪೂತ ರಾಜರ ಧ್ವಜಗಳೂ ಭಗವಾ. ಅದು ರಾಮದಾಸಸ್ವಾಮಿಗಳ ಕೌಪೀನದ ಸಂಕೇತವಲ್ಲ! ಇರಲಿ.

ಕೊಲ್ಹಾಪುರ ರಾಜಮನೆತನಕ್ಕೆ ಭವಾನಿ ಖಡ್ಗ ನೇರವಾಗಿ ತಾರಾಬಾಯಿ ಕಡೆಯಿಂದಲೇ ಬಂದಿರಬೇಕು. ಅದು ಶಾಹುಛತ್ರಪತಿಗೆ ಸಂದಿರಲಿಕ್ಕಿಲ್ಲ. ಅವಳು ಅವನನ್ನು ಒಪ್ಪಿಕೊಳ್ಳದೆ ಔರಂಗಜೇಬನ ಹಸ್ತಕನೆಂದೇ ವರ್ಣಿಸಿದ್ದಳು.

ಅದೇನೇ ಇದ್ದರೂ, ಸದ್ಯ ಬ್ರಿಟಿಶ್ ಮ್ಯುಜಿಯಮ್ಮಿನಲ್ಲಿ ಇರುವ ಈ 'ಶಿವಾಜಿ ಖಡ್ಗ'ವನ್ನು ನಮ್ಮ ಅಚ್ಚ ಭಾರತೀಯ ಸಂಸ್ಕೃತಿ ಸಂರಕ್ಷಕರಾದ ವಿದೇಶ ಮಂತ್ರಿಗಳೂ ಹೊಸ ಜನತಾ ಕೇಂದ್ರ ಸರಕಾರವೂ ಮರಳಿ ಭಾರತಕ್ಕೆ ತರಿಸಿಕೊಳ್ಳಲು ಸುಯೋಗ್ಯ ಕಾಲವು ಇಂದು ಒದಗಿಬಂದಿದೆ.. ಆದರೆ ಇದನ್ನು ಯಾರು ಲಕ್ಷಿಸಬೇಕು? ✡



ವರ್ಡ್ಸ್‌ವರ್ತ್ ಕವಿಯ ಹೃದಯದ ತೊರೆ

# ಚುಂಬನದ ನೋವು

ಶಶಿಧರ ಕುಲಕರ್ಣಿ*

ಎಲ್ಲರಿಗೂ ಹೇಳುವಂತಹುದೇ...? ಅಲ್ಲ; ಖಂಡಿತ ಅಲ್ಲ. ಆದರೂ ಆ ಅನುಭವದ ನೆನಪನ್ನು ನನ್ನೆದೆಯ ಗೋರಿಯಲ್ಲಿ ಹುಗಿದಿಡುವುದು ನನ್ನಿಂದ ಸಾಧ್ಯವಾಗದೇ ಹೋಯಿತು; ಹುಡುಕಿ ಹುಡುಕಿ, ಅಲೆದು ಅಲೆದು ಕಡೆಗೆ ನಿನ್ನ ಕಿವಿಯಲ್ಲಿ ಉಸುರುತ್ತಿದ್ದೇನೆ. ಸತ್ಯ ಹೇಳು; ಸುಳ್ಳು ಹೇಳಿ ಖಂಡಿತ ವಂಚಿಸಬೇಡ. ಆಣೆ ಮಾಡಿ ಹೇಳುತ್ತೇನೆ. ನೀನು ಸುಳ್ಳು ಹೇಳಿದೆ ಎಂದು ನನಗೆ ನಂತರ ತಿಳಿದುಬಿಟ್ಟರೆ ನನ್ನ ಸಾವಿನಷ್ಟೇ ನೋವಿನ ವಿಚಾರ ಅದು! ನಿನಗೆ ನಿಜವಾದ ಪ್ರೀತಿಯ ಅರ್ಥ ಅಥವಾ ಪ್ರಾಮಾಣಿಕವಾದ ಪ್ರೇಮದ ಅನುಭವ ಇದೆ ತಾನೇ...?

ನನ್ನ
ಮುದ್ದು ಸರಳಳ ನೆನಪು–

ಚಪ್ಪರಿಸುತ್ತ, ಕುದುರೆಗೆ ಕಡಿವಾಣ ಬಿಗಿದು ಏರಿ ಕುಳಿತೆ. ನನ್ನ ಕುದುರೆಗೂ ನನ್ನ ಚಪಲ ಸ್ಪಷ್ಟವಾಗಿ ತಿಳಿದಿತ್ತು; ತಿಳಿದಿತ್ತು ಅನ್ನುವುದಕ್ಕಿಂತ ರೂಢಿಯಾಗಿತ್ತು ಎನ್ನುವುದು ಸಹಜವಾದ ಮಾತೂ ಹೌದು ಅನಿಸುತ್ತದೆ. ನಾನು ಏರಿ ಕುಳಿತ ತಕ್ಷಣ ನನ್ನ ಅಪ್ಪಣೆಗೂ ಕಾಯದೆ ಗಂಭೀರವಾಗಿ ಹೆಜ್ಜೆಯಿಡಲು ಆರಂಭಿಸಿತ್ತು. ಆ ದಿನ, ಆ ಅನುಭವ, ನಿಜ ಹೇಳಬೇಕೆಂದರೆ ಈ ಜೀವನದಲ್ಲಿ ಒಂದೇ ಒಂದು ಬಾರಿ. ಆ ದಿನದ ಒಂದೇ ಒಂದು ಘಳಿಗೆಯನ್ನಾದರೂ ಹೋಲುವ ಯಾವ ಘಳಿಗೆಯನ್ನೂ ಈ ದಿನದ ವರೆವಿಗೂ ನಾನಂತೂ ಕಾಣಲೇ ಇಲ್ಲವಲ್ಲ...! ಆದರೆ ಆ ದಿನದ ನೆನಪು ಮಾತ್ರ ಯಾವ ದಿನದಲ್ಲಿಯೂ ನನ್ನನ್ನು ತೊರೆದು ದೂರಕ್ಕೆ ಸರಿಯಲೇ ಇಲ್ಲ ಬಿಡು; ಅದು ನನ್ನ ಇಚ್ಛೆಯೂ ಅಲ್ಲ.

ನಾನು ಅವಳನ್ನು ನೋಡದ ದಿನವೇ ಇಲ್ಲ. ಅದೇ ಅರಳುತ್ತಿರುವ ಕೆಂಗುಲಾಬಿಯ ನಗುವನ್ನೂ ಆ ನಗೆಯ ಚೆಲುವನ್ನೂ ನೆನಪಿಗೆ ತರುತ್ತಿದ್ದ ಅವಳ ಆ ಸುಂದರ ಭಾವವನ್ನು ನಾನು ಮರೆತ ದಿನವಂತೂ ಒಂದೂ ಇಲ್ಲ. ಇಂದಿಗೂ ಅಷ್ಟೇ! ಅದೇ ದಾರಿ, ಅದೇ ಬಯಲು, ಹಸಿರು ಹುಲ್ಲು–ಒಂದು ಗರಿಯ ಮೇಲೆ ಮತ್ತೊಂದು ಗರಿ ಬೆಳದಿಂಗಳನ್ನು ತಡೆಹಿಡಿದು ಆಡುವ ಕಣ್ಣುಮುಚ್ಚಾಲೆಯ

---

* ಇನ್ನೂ ಅರಳಬೇಕಿದ್ದ ಮೊಗ್ಗು ಅರಳುವಾಸೆಯಿಟ್ಟುಕೊಂಡೇ ಕಮರಿಹೋಯಿತು. ಶಶಿಧರ ಕುಲಕರ್ಣಿ ಕವಿ, ಸಂಗೀತಗಾರ, ಆದರೆ ಉಪಜೀವನಕ್ಕಾಗಿ ಮಾರ್ಗವನ್ನರಸಿ ಅಲೆಯುತ್ತಿದ್ದ ಯುವಕ. ಅವರ ಅಕಾಲ ನಿಧನದಿಂದ ಕನ್ನಡ ಸಾರಸ್ವತ ಲೋಕಕ್ಕೆ ಖಂಡಿತ ಹಾನಿ ತಟ್ಟಿದೆ. ತಮ್ಮ ಈ ಅನುವಾದ ಲೇಖನವನ್ನು ಕಳೆದ ವರ್ಷವೇ ಅವರು ಕಳಿಸಿದ್ದರು. –ಸಂ.

ಆಟ; ನೆಲವನ್ನು ಮುಗಿಲು ಮಾಡಿ, ಮುಗಿಲ ನೆಲದಲ್ಲಿ ನಕ್ಷತ್ರದಂತೆ ಹೊಳೆಯುವ ಜಲ್ಲಿ ನೆಲಕ್ಕೆ ಒತ್ತಿದ್ದ ಬೆಣಚು ಕಲ್ಲುಗಳು—ನನ್ನ ಕಣ್ಣಿಗೊಂದು ಹಬ್ಬ. ಅವನ್ನೆಲ್ಲಾ ನೋಡಿ ಖುಷಿಪಡುವ ಭಾಗ್ಯ ನನಗೆ ಮಾತ್ರ ಎಂದು ಏಕೆ ಹೇಳುತ್ತೇನೆಂದರೆ ಅದು ನನ್ನ ಪ್ರೇಯಸಿಯ ಮನೆಯ ದಾರಿ.

ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ನನ್ನ ಕುದುರೆ ಗಂಭೀರವಾಗಿ ಸಾಗುತ್ತಿತ್ತು. ಆದರ ನೆನಪು ನನಗೆ ಅಳಿಸಿಹೋದಂತೆ ಅದಕ್ಕೂ ನನ್ನ ನೆನಪು ಅಳಿಸಿಹೋಗಿರಬೇಕು. ತಿಳಿಯದು... ಇಳಿಯುತ್ತಿದ್ದ ಚಂದಿರ ನನ್ನನ್ನೇ ನೋಡುತ್ತಿದ್ದಾನೆ ಅನಿಸಿತು. ನಾನೂ ನೋಡಿದೆ. ಅವನು ನಗುತ್ತಿದ್ದ; ನಗುತ್ತಲೇ ಇದ್ದ— ಕೆಂಡ ಸಂಪಿಗೆಯ ಹಾಗೆ. ಅವನು ಹೊಳೆಯುತ್ತಿದ್ದ. ಹೊಳೆಯುತ್ತ ಹೊಳೆಯುತ್ತ ತನ್ನ ಹೊಳಪಿನಲ್ಲಿ ನನ್ನನ್ನೆಲ್ಲಿಯೊ ತೇಲಿಸುತ್ತಿದ್ದಾನೆ ಅನ್ನಿಸಿತು. ಆಗ ನನಗಂತೂ ನೆಲದ ಮೇಲೆ ಅಥವಾ ಕುದುರೆಯ ಮೇಲೆ ಇದ್ದ ಅರಿವೇ ಇಲ್ಲ. ಅವನು ನಗುತ್ತಿದ್ದ; ನಗು ನಗುತ್ತಲೇ ಇದ್ದ— ನಾನು ನೋಡುತ್ತಲೇ ಇದ್ದೆ. ಹಾಗೆ ನಾನು ನೋಡುತ್ತಲೇ ಇದ್ದುದಕ್ಕೆ ಕಾರಣವಿತ್ತು. ನಂಬು, ನನ್ನ ಮಾತನ್ನು ನಂಬದೇ ಇರಬೇಡ. ನನಗೆ ಚಂದ್ರ ಮಾತ್ರ ಕಾಣಿಸಲಿಲ್ಲ...! ಆ ಚಂದ್ರ ನಗೆಯನ್ನು ಮಾತ್ರ ನೋಡುತ್ತಿರಲಿಲ್ಲ. ಅಷ್ಟೊಂದು ತದೇಕ ಚಿತ್ತನಾಗಿ ನಾನು ನೋಡುತ್ತಲೇ ಇದ್ದುದು ನನ್ನ ಕಣ್ಣಿನಲ್ಲಿ ಎಂದೂ ನನ್ನ ಹೊಳಪು, ನನ್ನ ಕಣ್ಣಿನ ಹೊಳಪು, ಅದರ ಸುಂದರ ಬಿಂಬ ತುಳುಕಿ ಚೆಲ್ಲದ ಆ ಹೊಳಪು— ಹೌದು... ಆ ಬಿಂಬವನ್ನೇ ನಾನು ಕಣ್ತುಂಬ ನೋಡುತ್ತಿದ್ದೆ.

ಮಟ್ಟಸವಾದ ನೆಲವನ್ನು ದಾಟಿ ದಿಬ್ಬೆಯನ್ನು ಏರುತ್ತಿದ್ದೇವೆ ಎಂದು ಗೊರಸಿನ ದನಿಯೂ ನನ್ನನ್ನು ಎಚ್ಚರಿಸಲಿಲ್ಲ. ನಾನಾಗಲೇ ಹಸಿರು ಬಯಲನ್ನು ದಾಟಿ ದಿಬ್ಬದ ಬುಡಕ್ಕೆ ಬಂದಿದ್ದೇವೆಂದು ನಂತರದ ನೆನಪು. ನಾವು ಮೇಲೆ ಮೇಲೆ ಏರಿದಂತೆಲ್ಲಾ ಚಂದಿರ ಇಳಿಯುತ್ತಿದ್ದ. ಹಾದಿಯ ಪಕ್ಕದಲ್ಲಿ ಸ್ಪಷ್ಟವಾಗಿ ಕಾಣುವ ಪುಟ್ಟ ಗುಡಿಸಿಲಿನ ಮೇಲೆ ಹೊದಿಸಿದ ಒಣ ಗರಿ ಹುಲ್ಲುಗಳ ಮೇಲೆ ಚಂದಿರ ತನ್ನ ಸೌಮ್ಯವಾದ ಬೆಳಕನ್ನು ತುಂಬು ಮನದಿಂದ ಚೆಲ್ಲಿದ್ದ. ಅದೇ ಮನೆ...! ಆ ಮನೆಯ ಮುಂದೆಯೇ ಎಂದಿನಂತೆ ನಾನು ಹಾಯ್ದು ಹೋಗಬೇಕಾಗಿದ್ದುದು. ಅದೇ ನನ್ನ ಚಪಲ, ಅಚಂಚಲವಾದ ಚಪಲ.

ಅಲ್ಲಿಗೆ ತಲುಪಲು ಏರಿದಷ್ಟೇ ಏರಿಯನ್ನು ಇಳಿಯಬೇಕು. ಇಳಿಯಬೇಕಾದವನು ನಾನಲ್ಲ... ನಾನಲ್ಲ...! ಇಳಿಸಲೇಬೇಕಾದವನು ನನ್ನ ಕುದುರೆ. ನನ್ನಷ್ಟೇ ಚೆನ್ನಾಗಿ ನನ್ನ ಕುದುರೆಗೆ ಸಹ ಗೊತ್ತಿಲ್ಲ— ಆ ದಾರಿ, ಆ ಮನೆ, ಅವಳು- ನನ್ನ ಮನವನ್ನು ತುಂಬಿದ ಅವಳು. ಆ ಮನೆ ಅಷ್ಟೊಂದು ದೂರ ಅನ್ನಿಸುವ ಕಲ್ಪನೆ ಆವರೆಗೆ ನನಗೆ ಬಂದಿರಲೇ ಇಲ್ಲ. ಹೊಳೆಯುತ್ತ, ಆ ಹೊಳಪಿನಲ್ಲಿ ನನ್ನನ್ನು ತೇಲಿಸುತ್ತ, ನನ್ನ ಸಿರಿಯೇ ಆದ ಆ ಮುಗುಳು ನಗೆಯ ಚಂದಿರನ ಸುಂದರ ಬೆಳಕಿನಲ್ಲಿ; ಆ ನಗೆ ಬೆಳಕನ್ನೇ ಹಿಂಬಾಲಿಸುತ್ತಿದ್ದ ನನಗೆ ದೂರದ ಅರಿವಾದರೂ ಹೇಗೆ ಬಂದೀತು? ನನ್ನ ದೃಷ್ಟಿ ಬದಲಾಗಿರಲಿಲ್ಲ! ಹಾಗೆ ಬದಲಿಸಲು ಆ ಚಂದ್ರನಗೆ ನನ್ನನ್ನು ಬಿಟ್ಟಿರಲಿಲ್ಲ.

ನನ್ನ ನಗೆಯನ್ನು ಹೊತ್ತ ಚಂದಿರ ನಿಧಾನದಾಗಿ ಜಾರುತ್ತಲೇ ಇದ್ದ. ನಾನು ಹತ್ತಿರ— ಹತ್ತಿರವಾದಂತೆ ಅವನು ದೂರ ದೂರ ಸರಿಯುತ್ತಿದ್ದ. ಅವನು ಪ್ರಶಾಂತವಾಗಿ ನನ್ನ ಗೆಳತಿಯ ಮನೆಯ ಮೇಲೆ ನಲಿದಾಡುವಾಗ ಸದ್ದಿರದ ಮಿಡಿತ ನನ್ನದು.

ನಾನು ಗುಡ್ಡವನ್ನು ಇಳಿದು ಹೋದಂತೆಲ್ಲಾ ಅವನೂ ಇಳಿಯುತ್ತಿದ್ದ. ಆ ಮನೆಗೆ ಕಿರೀಟವಾದ ಆ ಮನೆಯ ಮುಡಿದ ದುಂಡು ಮಲ್ಲಿಗೆಯ ರೂಪವಾದ ಆ ಮನೆಯ ಸುಂದರ ಪ್ರಭಾವಳಿಯಾಗಿ ನನಗೆ ಕಾಣಿಸಿದ. ಕೊನೆಗಂತೂ ನನ್ನ ಚೆಲುವ ನಗೆಯನ್ನು ಹೊತ್ತು, [illegible] ಕೊಡ ತುಂಬಿದ ನೀರಿನೊಂದಿಗೆ ಗಂಭೀರವಾಗಿ ಮುಳುಗಿಹೋಗುವಂತೆ ಬಿಂಬಿಸುವ ಆ ನಗೆಯ ಹೊಳಪಿನೊಂದಿಗೆ ಅವನು ಆ ಮನೆಯ ಹಿಂದೆ ಮುಳುಗಿ ಹೋದ ಮೇಲೆ ನಾನು ಸ್ತಬ್ಧನಾಗಿ

ಬಿಟ್ಟೆ.

ಆಗ—

ಕಣ್ಣು ಕಾಣಿಸುತ್ತಿರಲಿಲ್ಲ. ಆದರೂ ನನ್ನೆದೆಯ ಪಾತ್ರೆಯೊಳಗೆ ಆ ನಗೆಯನ್ನು ಪೂರ್ಣವಾಗಿ ತುಂಬಿಕೊಳ್ಳುವ ಕಾತರದಿಂದ ನನ್ನ ಕುರುಡು ಕಣ್ಣುಗಳು ತೆರೆದ ರೆಪ್ಪೆಯನ್ನು ಮುಚ್ಚದೆ ತೆರೆದುಕೊಂಡೇ ಇದ್ದವು.

ಹೇಗೆ ಹೇಳಲಿ...? ನಿನಗೆ ಮುಂದೆ ಹೇಗೆ ಹೇಳಲಿ ಎಂದು ನನಗೆ ತೋಚುತ್ತಲೇ ಇಲ್ಲ— ಅವನು ಆ ಮನೆಯ ಹಿಂದೆ ಜಾರಿಹೋದ ಮೇಲೆ ಮೂಡಿ ಬಂದ ನನ್ನ ಕಣ್ಣೀರ ಹನಿಯಲ್ಲಿ ಆ ನನ್ನ ನಗೆಯನ್ನು ಬಿಂಬಿಸಲು ಸಾಧ್ಯವೇ? ನಗುನಗುತ್ತಲೇ ಕತ್ತಲ ತೆರೆಯನ್ನು ಸರಿಸಿ ಹೋದ ಅವನು ಭೂಮಿಯ ಒಡಲಿನಲ್ಲಿ ನನ್ನ ಆ ಸುಂದರ ನಗೆಯನ್ನು ಬಚ್ಚಿಟ್ಟು ಹಿಂದಿನ ಸಂಜೆಯಂತೆಯೇ ಮುಂದಿನ ಸಂಜೆಯೂ ಬರುತ್ತಾನೆ. ನನ್ನ ಆ ಕತ್ತಲ ತೆರೆಯನ್ನು ಹರಿಯುವ ಅವನ ಆ ನಗೆ ಬೆಳಕನ್ನು ಯಾವ ಸಂಜೆಯಲ್ಲಾದರೂ ಮತ್ತೆ ಕಾಣಬಲ್ಲೆನೇ...?

ದಯೆಯಿಟ್ಟು ಹೇಳು—

ನಿನಗೆ ನಿಜವಾದ ಪ್ರೀತಿಯ ಅರ್ಥ ತಿಳಿದಿದೆ ತಾನೆ...? ಆಳವಾದ ಪ್ರೇಮದ ಅರಿವು, ಪ್ರಾಮಾಣಿಕವಾದ ಅನುಭವ ಇರುವುದು ನಿಜವೆ ತಾನೆ...?? ✪



## ನರಭಕ್ಷಕಕ್ಕಿಂತಲೂ ಕ್ರೂರ

ಪ್ರಾಣಿಗಳಲ್ಲಿ ಅತಿ ಹೆಚ್ಚು ಕ್ರೂರವಾದದ್ದು ಹುಲಿ. ಆದರೂ ಅದಕ್ಕೊಂದು ನಿಯತ್ತಿದೆ. ಹುಲಿಗೆ ಒಂದು ಸಲ ಮನುಷ್ಯ ರಕ್ತದ ರುಚಿ ಹತ್ತಿದರೆ ಆಮೇಲೆ ಅದು ಬೇರೆ ಪ್ರಾಣಿಗಳ ಸಮೀಪ ಹೋಗಲಾರದು. ಅದು ಮನುಷ್ಯನನ್ನೇ ಹುಡುಕುವದು. ಸಿಕ್ಕದಿದ್ದರೆ ಉಪವಾಸವಾದರೂ ಇದ್ದೀತು. ಅವರೆ ವನ್ಯಮೃಗಗಳನ್ನು ತಿನ್ನಲಾರದು. ಇಂತಹ ನರಭಕ್ಷಕನಿಗಿಂತಲೂ ಕ್ರೂರವಾದ ಇನ್ನೊಂದು ನರಭಕ್ಷಕ ಇರುವುದಾಗಿ ಚೀನಾ ದೇಶದ ದಾರ್ಶನಿಕ ಕನ್‌ಫ್ಯೂಶಿಯಸ್ ಹೇಳುತ್ತಾನೆ.

ಅವನೊಮ್ಮೆ ಪ್ರವಾಸಿಸುತ್ತಿದ್ದಾಗ ದುಃಖಾರ್ತಳಾದ ಓರ್ವ ಸ್ತ್ರೀಯನ್ನು ಕಂಡು ಆವಳ ದುಃಖಕ್ಕೆ ಕಾರಣವೇನೆಂದು ವಿಚಾರಿಸಿದ.

"ಇಲ್ಲೊಂದು ನರಭಕ್ಷಕವಿದೆ. ಅದು ನನ್ನ ಮಾವನನ್ನು; ಗಂಡನನ್ನು ಕೂಡಿಯೇ ತಿಂದುಹಾಕಿದೆ. ಅದರ ದೌರ್ಜನ್ಯ ಅಷ್ಟಕ್ಕೇ ನಿಲ್ಲಲಿಲ್ಲ. ನಿನ್ನೆ ನನ್ನ ಮಗನನ್ನು ಸಹ ತಿಂದಿತು," ಎಂದಳು.

"ಹಾಗಾದರೆ ಇಂಥಾ ಸ್ಥಳದಲ್ಲಿ ನೀನೇಕೆ ಇರುತ್ತಿ?" ಎಂದ ಕನ್‌ಫ್ಯೂಶಿಯಸ್.

"ಅಯ್ಯೋ! ಇಷ್ಟೂ ಗೊತ್ತಿಲ್ಲವೇ? ಇಲ್ಲಿ ಇನ್ನೇನೇ ಇದ್ದರೂ ದಬ್ಬಾಳಿಕೆ ನಡೆಸುವ ಸರಕಾರವಿಲ್ಲ."

ಇಷ್ಟು ಹೇಳಿ ಕನ್‌ಫ್ಯೂಶಿಯಸ್, "ನೋಡಿರಿ, ಶಿಷ್ಯರೆ, ದಬ್ಬಾಳಿಕೆಯಲ್ಲಿ ನಿರತ ಸರಕಾರಕ್ಕಿಂತ ಕ್ರೂರ ನರಭಕ್ಷಕ ಒಳ್ಳೇದು," ಎಂದು ಉಪದೇಶಿಸಿದ.

-ಎಸ್. ಬಿ. ಖೋದಾನಪುರ

ಮೂರ್ಖ ಪ್ರಶ್ನೆಗಳನ್ನು ಕೇಳಲು ಎಷ್ಟೂ ಭಯಪಡಬೇಡಿ. ಅವುಗಳನ್ನು ಮೂರ್ಖ ತಪ್ಪುಗಳಿಗಿಂತ ಚೆನ್ನಾಗಿ ನಿವಾರಿಸಬಹುದು.

—ವಿಲಿಯಂ ವಿಸ್ಲರ್ ಹೇನ್ಸ್



# ಸೌತೇಕಾಯಿ

'ಅಶ್ವತ್ಥ'

"ಈ ಸೌತೇಕಾಯಿನ ಹಾಗೇ ಇತ್ತು, ಅದು," ಬೆಳ್ಳಗೆ ಬುರೂಡಾಗಿ ದೊಡ್ಡ ಹಜಾರದ ಸೋಫಾದ ಮೇಲೆ ಸುಮಾರಾಗಿ ಕುಕ್ಕುರುಗಾಲಿನ ಮೇಲೆನ್ನುವಂತೆಯೇ ಕುಳಿತಿದ್ದ ತೊಂಬತ್ತು ವರ್ಷದ ಸಣ್ಣಯ್ಯನವರು ತಮಗೇ ಹೇಳಿಕೊಂಡಂತೆ ನುಡಿದರು— ಸೊಸೆ ಶ್ಯಾಮಲಾ ತರಕಾರಿ ವ್ಯಾಪಾರ ಮಾಡಿ ತಟ್ಟೆಯ ಮೇಲಿಟ್ಟುಕೊಂಡು ಒಳಗೆ ತರುತ್ತಿದ್ದ ಸೌತೇಕಾಯಿಯನ್ನು ನೋಡುತ್ತ.

"ಅದೂ ಅಂದ್ರೆ ಯಾವ್ದು ಮುತ್ತಾತಾ?" ಆ ದಿನ ಬೆಳಗ್ಗಿಯ ತಿಂಡಿ-ಇಡ್ಲಿ ಚಟ್ನಿ, ಈರುಳ್ಳಿ ಆಲೂಗಡ್ಡೆ ಪಲ್ಯ, ಮುಗಿಸಿ ಟೀ ಕುಡಿದು ಅಲ್ಲೇ ಟ್ರೈಸಿಕಲ್ ಹೊಡೆಯುತ್ತಿದ್ದ ಕ್ರಿಕೆಟ್ ಸ್ಕಲ್ ಕ್ಯಾಪ್, ಬಾಬಾ ಸ್ಯೂಟ್, ಸ್ಟಾಕಿಂಗ್ ಷೂಗಳ, ನಾಲ್ಕು ವರ್ಷದ ಮರಿಮಗ ರತೀಶ ಕೇಳಿದ.

"ಯಾವ್ದೂ ಅಂದ್ರೇ ನಾನು ಅಮ್ಮನಿಗೇಂತ ತಗೊಂಡಿದ್ದ ಸೌತೇಕಾಯಿ."

"ನಿಂಗೂ, ನಿನ್ನಂಥ ದೊಡ್ಡೋರ್ಗೂ, ಅಮ್ಮ ಇದಾರಾ?"

"ಈಗಿಲ್ಲ, ಆಗ ಇದ್ಲು, ನಾನು ನಿನ್ನ ಹಾಗೇ ಪುಟ್ಟೊನಾಗಿದ್ದಾಗ."

"ಅವಳ್ಗೇಂತ ಸೌತೇಕಾಯಿ ತಗೊಂಡಿದ್ಯಾ ನೀನು?"

"ಹುಂ."

"ಯಾಕೆ?"

"ಯಾಕೇಂದ್ರೆ! ಅವಳು ಅಮ್ಮ!" ತಂದೆ ನಕ್ಕರು.

"ನಾನು ಅಮ್ಮಂಗೆ ಸೌತೇಕಾಯಿ,ಬೆಂಡೆಕಾಯಿ ಇನ್ನೂ ಏನೂ ತಗೊಳ್ಳೋದಿಲ್ಲಪ್ಪಾ. ಅವಳೇ ತಗೋತಾಳೆ. ನಂಗೆ ಅವ್ಳೆ ಎಲ್ಲಾ ತಕ್ಕೊಡ್ತಾಳೆ—ಬಿಸ್ಕತ್ತು, ಚಾಕೊಲೇಟು, ಟೆರಿಲಿನ್ ಬುಷ್‌ಕೋಟು, ಇನ್ನೇನಪ್ಪಾ ಇನ್ನೇನಪ್ಪಾ, ಎಲ್ಲಾನೂ ಎಲ್ಲಾನೂ... ನಾನೇನೂ ಕೊಡೋದೇ ಇಲ್ಲ ಅವಳ್ಗೆ. ಯಾವಾಗ್ಲಾದ್ರೂ ಅವ್ಳು ಕೇಳಿದ್ರೆಗೀಳಿದ್ರೆ ಒಂದು ಮುತ್ತು ಕೊಡ್ತೀನಿ, ಅಷ್ಟೇಪ್ಪಾ..."

ಉದ್ದ ಸೋಫಾದ ಮೇಲೆ ಕುಳಿತು ಪತ್ರಿಕೆಯನ್ನು ಓದುತ್ತಿದ್ದ ತಾಯಿ ತಂದೆಯರು—ನರಹರಿ, ರಮಾ— ಮಗನ ಮಾತನ್ನು ಕೇಳಿ ಫಕ್ಕನೆ ನಕ್ಕರು. ಮಗು ಮಾತನ್ನು ಅಷ್ಟಕ್ಕೆ ನಿಲ್ಲಿಸಿ ಅವರ ಮುಖವನ್ನು ನೋಡಿತು.

"ನೋಡು ಮರಿ, ಅಮ್ಮ ಅಂದ್ರೆ ಹಾಗೇ.

ನಮ್ಮಪ್ಪನೂ ನಂಗೆ ಜರಿ ಮಖಮಲ್ ಟೋಪಿ ಹಾಕಿ, ಕಲಾಪತ್ತಿನ ಪಂಚೆ ಉಡಿಸ್ತಾ ಇದ್ರು, ಕತ್ತಿಗೆ ಒಂದೆಳೆ ಚಿನ್ನದ ಸರ ಮಾಡಿಸಿ ಹಾಕಿದ್ರು, ಕಿವಿ ಎರಡೆರಡು ಕಡೆ ಚುಚ್ಚಿ ಮುತ್ತಿನ ಲೋಲಾಕು ಮುರುವು ಇಟ್ಟಿದ್ರು, ಕಡೇ ಮಗು ಅಂತ ತೊಡೆ ಮೇಲೆ ಕೂರಿಸಿಕೊಂಡು ತುತ್ತು ತಿನ್ನಿಸ್ತಾ ಇದ್ರು, ತಬ್ಬಿಕೊಂತಾ ಮುದ್ದು ಮಾಡ್ತಾ ಇದ್ರು— ಹುಂ, ಅದೆಲ್ಲ ನಮ್ಮಪ್ಪ ಇನ್ನೂ ಬದುಕಿದ್ದಾಗ, ನಾನು ಕೈಮಗು ಆಗಿದ್ದಾಗ.

"ಆಮೇಲೆ ಅದೆಲ್ಲ ಕನಸಿನ ಹಾಗೆ ಮಿಂಚಿ ಹೋಯ್ತು. ಅಪ್ಪ ಸತ್ತುಹೋದ್ರು; ಅದೇನಾಯ್ತೋ ಏನೋ, ಅಮ್ಮ ಮುಸುಕು ಹಾಕ್ಕೊಂಡು— ಇಲ್ಲಿ ಪಕ್ಕದ ಮನೆ ಗೌರಜ್ಜಿ ಇದಾರಲ್ಲಾ ಹಾಗೆ— ಅವಳ ಅಣ್ಣ ತಮ್ಮಂದಿರ ಮನೆ ಸೇರಿಕೊಡ್ಲು ಲಿಂಗರಾಜಪುರದಲ್ಲಿ. ನಾನು ಭದ್ರಾವತೀಲಿ ನಮ್ಮಣ್ಣನ ಮನೇಲಿದ್ದೆ, ಅವನ ಮಗೂನ ಎತ್ತಿ ಆಡಿಸಿ ಮಾಡ್ಕೊಂಡು, ನಾಲ್ಕು ಅಕ್ಷರಾನೂ ಕಲಿತಾಲೇನೋ. ಆಗ್಩ೇ ಆ ಸೌತೇಕಾಯಿನ ವಿಚಾರಾ...,"

"ಸೌತೇಕಾಯಿ ಬೀದಿ ಬಾಗಿಲ್ನಿಂದ ತಂದು ನಿಮ್ಮಮ್ಮಂಗೆ ಕೊಟ್ರ್ಯಾ?"

"ಹ್ಹ!. ಹಾಗಲ್ಲ ಮರಿ, ಅಷ್ಟರಲ್ಲಿ ಏನಿರುತ್ತೆ."

"ಮತ್ತೆ? ಮಾರ್ಕೆಟ್‌ನಿಂದ ತಂದ್ರ್ಯಾ?"

"ಹಾಗೂ ಅಲ್ಲ. ಅಷ್ಟು ಸುಲಭ ಅಲ್ಲ, ಆ ಸೌತೇಕಾಯಿನ ಕತೆ."

"ಕತೆ ಹೇಳು ಮುತ್ತಾತಾ," ಮರಿ ಮಗ ಟ್ರೈಸಿಕಲ್‌ನಿಂದ ಇಳಿದು ಬಂದು ಮುತ್ತಾತನ ಕುಕ್ಕರುಗಾಲನ್ನು ಬಿಡಿಸಿ ತೊಡೆಯ ಮೇಲೆ ಕುಳಿತುಕೊಂಡ.

"ಅದೇನಂಥಾ ಭಾರಿ ಕತೆಯಲ್ಲ ಮರೀ, ನಡೆದದ್ದು."

"ಅದ್ನೆ ಹೇಳು ಮುತ್ತಾತಾ!" ಮಗು ಗೋಗರೆದ.

"ಆಗ್಩ಪ್ಪ ಅದಕ್ಕೇನು..: ಆಗ ನಂಗೆ ನಿಂಗಿಂತ ಎರಡು ಮೂರು ವರ್ಷ ಜಾಸ್ತಿ ಆಗಿತ್ತು ಅಷ್ಟೆ. ಆರೋ ಏಳೋ ಇರಬಹುದು. ಭದ್ರಾವತೀಲಿ ನಮ್ಮಣ್ಣನ ಮನೇಲಿ ಇದ್ದೆ ಅಂತ ಹೇಳಿದೆನಲ್ಲ..."

"ಹುಂ."

"ಹಾಗೇ ಇರೋವಾಗ ಒಂದು ಸಾರಿ ಅಮ್ಮನ್ನ ನೋಡಬೇಕೂ ಅಂತ ಅನ್ನಿಸ್ತು— ತುಂಬಾ ಅನ್ನಿಸಿಬಿಡ್ತು. ಲಿಂಗರಾಜಪುರದಲ್ಲಿ ಇದ್ಲು ಅಂತ ಆಗ್಩ೇ ಹೇಳಿದೆನಲ್ಲ. ಅವಳನ್ನು ನೋಡಿ ವರ್ಷವೇ ಆಗಿತ್ತೊ ಇನ್ನೂ ಹೆಚ್ಚಾಯ್ತೊ; ಎಷ್ಟೋ ವರ್ಷ ಆಗಿಹೋಯ್ತು ಅಂತ ಅನ್ನಿಸೋ ಹಾಗೆ ಆಗಿ ಹೋಗಿತ್ತು. ಚಿಕ್ಕಕೇರಿ ವೆಂಕಟಶಾಸ್ತ್ರಿಗಳು, ಶಾಂಭಟ್ರು ಇನ್ನು ಯಾರು ಯಾರೋ ಲಿಂಗ ರಾಜಪುರಕ್ಕೆ ಹೋಗ್ತಾರೆ ಅಂತ ಗೊತ್ತಾದ ಮೇಲಂತೂ ನಾನು ತುದಿಗಾಲಲ್ಲೇ ನಿಂತಿದ್ದೆ, ಅವರ ಜತೆ ಹೋಗೋದಕ್ಕೆ."

"ಹುಂ."

"ಸರಿ, ಅಣ್ಣನ್ನ ಕೇಳಲೇಬೇಕಲ್ಲ— ಅವನೇ ಮನೆ ಯಜಮಾನ ಅಂದ ಮೇಲೆ. ಏನು?"

"ಹುಂ, ಕೇಳ್ಬೇಕು."

"ಅವನು ನಂಗಿಂತ ಎಷ್ಟೋ ದೊಡ್ಡೋನು. ಅವನಿಗೆ ಆಗಲೆ ಒಂದು ಮಗು. ಮಹಾ ಬಿಗಿ ಮನುಷ್ಯ. ಮಾತೇ ಇಲ್ಲ. ನಂಗೆ ಅವನನ್ನ ಕಂಡ್ರೆ ಬಹಳ ಭಯ."

"ಹೊಡೀತಾ ಇದ್ರಾ?"

"ಉಹುಂ ಉಹುಂ, ಛೇ! ಅದೆಲ್ಲ ಇಲ್ಲ. ಸ್ವಲ್ಪ ಗುರ್ ಗುರ್ ಅನ್ನೋನು ಅಷ್ಟೆ."

"ಟೈಗರ್ ಹಾಗೆ," ಮಗು ಗುರ್‌ರ್ ಎಂದೇ ತೋರಿಸಿದ. "ಆಮೇಲೆ?"

"ಆಮೇಲೆ, ಹೇಗಾದ್ರೂ ಆಗ್಩ಿ, ಅಮ್ಮನ್ನ ನೋಡೇ ಬಿಡಬೇಕು ಅಂತ ಅಂದುಕೊಂಡು, ಹೇಗೋ ಕೆಟ್ಟ ಧೈರ್ಯ ಮಾಡಿ, ನಮ್ಮಣ್ಣ ರಾತ್ರಿ ಊಟ ಮಾಡಿ ಎಲೆಅಡಕೆ ಹಾಕ್ಕೊಂತಾ ತುಂಗನ್ನ— ಅಂದ್ರೆ, ಅವನ ಮಗೂನ— ತೊಡೆ ಮೇಲೆ ಕೂರಿಸ್ಕೊಂಡಿದ್ದಾಗ, ಮೆಲ್ಲಗೆ ಸ್ವಲ್ಪ ಹತ್ತಿರ ಹೋಗಿ ಪಿಸ್ಕೀತಾ 'ಅಣ್ಣ ಅಣ್ಣ' ಅಂದೆ. ಮುಂದೆ ಮಾತು ಬೇಗ ಬರಲಿಲ್ಲ. ಅವನು 'ಹ್ಞ' ಅಂತ ಹೂಂಕರಿಸಿದ. ನಾನು ಅಷ್ಟೇ ಸಾಕು ಅಂತ ಮತ್ತೆ ಮಾತು ಸಿದ್ಧಮಾಡಿಕೊಂಡು 'ನಾಳೆ ಲಿಂಗರಾಜಪುರಕ್ಕೆ ಹೋಗಿ ಬರ್ತೀನಣ್ಣ: ಶಾಂಭಟ್ರು, ಯಾರ್ಯಾರೋ ಹೋಗ್ತಾರಂತೆ



ಅಂತ ಬಡ ಬಡ ಹೇಳಿದೆ. ಅವನು 'ಹ್ಞು! ಈಗ ಯಾಕೆ?' ಅಂತ ತಳ್ಳಿ ಹಾಕಿದ. ನಾನು ಅಮ್ಮನ್ನ ನೋಡಬೇಕೂಂತ ಇದ್ದದ್ದನ್ನ ಹೇಳಿದೆ. ಅವನು 'ಎಷ್ಟು ಮಹಾ ವರ್ಷ ಆಯ್ತು?' ಅಂತ ತಡೆ-ಹಾಕಿದ. ನಂಗೆ ತಣ್ಣೀರು ಎರೆಚಿದ ಹಾಗಾಯ್ತು; ಮುಖ ಪೆಚ್ಚು ಮಾಡಿಕೊಂಡೆ; ಇನ್ನೇನು ಅಳು ಬರೋಹಾಗಾಯ್ತು." ಸಣ್ಣ-ಯ್ಯನವರು ನಿಲ್ಲಿಸಿದರು, ಈಗಲೂ ಪೆಚ್ಚಾಗಿ ಯೋಚಿಸುತ್ತಿದ್ದವರಂತೆ.

"ಆಮೇಲೆ?" ಮಗು ಎಚ್ಚರಿಸಿದ.

"ಹ್ಞು! ಆಮೇಲೆ ನೋಡಪ್ಪಾ, ಎಲ್ಲ ಆಗೇ ಹೋಯ್ತು ತಣ್ಣಗೆ ಅಂದುಕೋತಾ ಇದ್ದಾಗ, ನಮ್ಮತ್ತಿಗೆ ಅಡಿಗೆ ಮನೆಯ ಬಾಗಿಲಿಗೆ ಬಂದಳು, ನನ್ನ ಸಹಾಯಕ್ಕೆ...ಹುಂ, ಅತ್ತಿಗೇ ಅಂದ್ರೆ ಅಂಥಿಂಥೋಳಲ್ಲ, ಸಾಕ್ಷಾತ್ ದೇವತೆ. ತಂಪಿನ ಹೊತ್ತಿನಲ್ಲಿ ನೆನೆಸಿಕೋಬೇಕು ಅಂಥೋಳನ್ನು, ನನ್ನನ್ನು ಮೈದುನ ಅಂತ ಅಲ್ಲ, ಮಗ ಅಂತ ನೋಡಿಕೋತಾ ಇದ್ಳು. ನಮ್ಮಣ್ಣಂಗೆ ನಾನು ಎಷ್ಟೂ ಎಷ್ಟು ದೂರವಾಗಿದ್ನೋ ಅವಳಿಗೆ ಅಷ್ಟೂ ಅಷ್ಟು ಹತ್ತಿರವಾಗಿದ್ದೆ; ಅವಳ ಜತೆ ಅಷ್ಟು ಸದರವಾಗಿದ್ದೆ. ಅವಳಿಗೂ ನಮ್ಮಣ್ಣ ಅಂದ್ರೆ ಅಷ್ಟಿಷ್ಟು ಹೆದರಿಕೆಯೇ. ಅವನ ಜತೆ ಹೆಚ್ಚಾಗಿ ಮಾತಾಡಿದೋಳೇ ಅಲ್ಲ. ಹಾಗೂ ಅವಳು ಬಾಗಿಲ ಬಳಿ ನಿಂತು 'ಹೋಗಿ ಬರ್ಲಿ, ಮಗು ಏನೋ ಬಹಳ ಆಸೆಪಡ್ತಾನೆ. ಅಮ್ಮ ಅನ್ನೋ ವಸ್ತು ದೊಡ್ಡದು–ಮಕ್ಕಳಿಗೆ' ಅಂತ ಹೇಳಿದಳು. ಅಣ್ಣ ಸ್ವಲ್ಪ ಹೊತ್ತು ತಡೆದು 'ಹ್ಞು, ಮಗೂನ ನೋಡಿಕೊಳ್ಳೋರು ಯಾರು ಇವನು ಹೋಗಿ ಅಲ್ಲಿ–ಕೂತುಕೊಂಡು ಬಿಟ್ರೆ' ಅಂತ ಬೇರೊಂದು ದಾರಿ ಹಿಡಿದ. ಅಷ್ಟೇ ಸಾಕೆಂದು ನಾನು ಆತುರದಿಂದ 'ನಾಳೆ ಹೋಗಿ ನಾಡಿದ್ದೇ ಬಂದು ಬಿಡ್ತೀನಿ ಅಣ್ಣ' ಎಂದು ಅಂಗಲಾಚಿದೆ. ಅತ್ತಿಗೆ 'ಹೇಗೋ ಆಗುತ್ತೆ ಒಂದೆರಡು ದಿನಕ್ಕೆ. ಮಗೂನ ನಾನೇ ನೋಡಿ-ಕೋತೀನಿ' ಅಂತ ಅಂದ್ಳು. ನನ್ನ ಉತ್ಸಾಹ ಏರಿತು. ಅಣ್ಣ 'ಅವನ ಪಾಠ ಪಳಿದ್ಯಾನೂ ನೀನೇ ಮಾಡ್ತೀಯೋ ಏನು? ಹ್ಞು!' ಅಂದ. ನಾನು ನನ್ನೊಳಗೇ 'ಸರಿ, ಪಾಠ ಅಂದಮೇಲೆ

ಆಗೇಹೋಯ್ತು, ಹೋಗೋ ಹಾಗೇ ಇಲ್ಲ' ಅಂದುಕೊಂಡೆ. ಏರಿದ್ದ ಉತ್ಸಾಹ ಜರ್ರನೆ ಇಳಿದು ಹೋಯ್ತು. ಆದರೆ ಅತ್ತಿಗೆ ಅಷ್ಟಕ್ಕೇ ಬಿಡದೇ ಇದ್ದದ್ದು ನಂಗೆ ಆಶ್ಚರ್ಯವೇ ಆಯ್ತು. ಅವಳು 'ಸಣ್ಣ ಹುಡುಗನಾಗಿದಾನೆ, ಪಾಠ ಸರಿ ಮಾಡಿಕೋ-ತಾನೆ' ಅಂದಾಗ ಅಣ್ಣ ಏನಂತಾನೋ ಅಂತ ಮುಳ್ಳಿನ ಮೇಲಿದ್ದ ಹಾಗಿದ್ದೆ. ಅಣ್ಣ ಸುಮ್ಮನಿದ್ದ, ಏನೂ ಹೇಳಲಿಲ್ಲ. ಅಂದ್ರೆ ನೋಡಿಕೋ! ಅವನ ಮೌನವೇ ಮಹಾ ಪ್ರಸಾದ, ನಂಗೆ ಅಡ್ಡಿ ಮಾಡೋದಿಲ್ಲ ಅಂತ ಒಳಗೊಳಗೇ ಹಿಗ್ಗಿ ಕುಣಿದಾಡಿದೆ ಅಂತ ಇಟ್ಟುಕೋ—ಹೊರಗೆ ಏನೂ ತೋರಿಸಿಕೊಳ್ದೇ ಇದ್ರೂ. ಗೊತ್ತಾಯ್ತೆ?"

"ಅದು ಸರಿ ಮುತ್ತಾತಾ, ಸೌತೇಕಾಯಿ ಎಲ್ಲಿ? ಏನಾಯ್ತು?" ಮಗು ನೆನಪು ಕೊಟ್ಟ.

"ಹ್ಞ ಹ್ಞ, ಸೌತೇಕಾಯಿ ಸೌತೇಕಾಯಿ, ಅದಕ್ಕೇ ಬರ್ತಾ ಇದೀನಿ ಮರೀ...ಹೂಂ... ಹೂಂ...ಎಲ್ಲಿದ್ದೇ? ಹೂಂ...ಅಣ್ಣ ಅಡ್ಡಿ ಮಾಡಲಿಲ್ಲ—ಅಂತ ಅಂದುಕೊಂಡೆ. ಓಡಿಹೋಗಿ ಶಾಂಭಟ್ರ ಮನೆಗೆ ನಾನೂ ಅವರ ಜತೆ ಬರೋದಾಗಿ ಹೇಳಿ ಬಂದೆ. ಗೊತ್ತಾಯ್ತೆ?"

"ಹುಂ."

ಮಾರನೇ ದಿನ ಬೆಳಿಗ್ಗೆ ಅತ್ತಿಗೆ ಅಷ್ಟು ಹೊತ್ತಿಗೇ ತಂಗಳನ್ನ ಕಲಸಿ ತುತ್ತು ಹಾಕಿದಳು..."

"ಯಾಕೆ ಮುತ್ತಾತಾ, ಬ್ರೇಕ್‌ಫಾಸ್ಟ್ ಇರ್ಲಿಲ್ವಾ?"

"ಉಹುಂ ಉಹುಂ. ಆಗೆಲ್ಲ ಬೆಳಿಗ್ಗೆ ತಿಂಡಿ ಕಾಫೀ ಇಲ್ಲ ನಮಗೆ. ಎಣ್ಣೆ ನೀರು ಬುಕ್ಕಶ್ಯಿ ಮಾಡಿಕೊಂಡ ದಿನ ಮಾತ್ರ ಬಚ್ಚಲ ಒಲೇಲೇ ಸುಟ್ಟ ಗೇಣು ಅಗಲ ಅಂಗೈ ದಪ್ಪ ಬಿಸಿ ಬಿಸಿ ತಾಳಿಪಿಟ್ಟು. ಬಾಕಿಯಂತೆ ಹಿಂದಿನ ರಾತ್ರಿ ಮಿಕ್ಕ ಅನ್ನ, ಸಾರು, ಹುಳಿ, ನಡುಮನೆ ಮೂಲೇಲಿ ಇಟ್ಟಿರ್ತಾ ಇದ್ದದ್ದೆ. ಇದ್ದಷ್ಟನ್ನೇ ಹುಡುಗರಿಗೆಲ್ಲ ಕಲಸಿ ಕೈತುತ್ತು ಹಾಕೋರು. ಅಂಗೈ ಮೊಸರನ್ನದ ತುತ್ತಿನಲ್ಲಿ ಹೆಬ್ಬೆರಳಿಂದ ಹಳ್ಳ ಮಾಡಿ ಮೂಲಂಗಿ ಹುಳೀನೋ ಸಾರಿನ ಚರಟಾನೋ ಹಾಕಿಸಿಕೊಂಡು ಹೊಡೆದರೆ ಹೇಗಿರ್ತಾ ಇತ್ತು ಅಂತೀಯೇ, ಈಗಲೂ ನೆನೆಸಿಕೊಂಡ್ರೆ ಬಾಯಲ್ಲಿ ನೀರೂರುತ್ತೆ, ಹೊಟ್ಟೆ ಹೊಡೆದೋ ಹಾಗೆ ಆಗುತ್ತೆ..."

"ನಂಗೆ ಇಷ್ಟ ಇಲ್ಲಾಪ್ಪಾ, ತಂಗಳನ್ನ."

"ನಿಂಗೆ ಅದೇನು ಅಂತ ಏನು ಗೊತ್ತೋ? ಕೆನೆ ಮೊಸರು ಕಲಸಿ ಬಿಟ್ಟಾಂದ್ರೆ ಅದರ ಮುಂದೆ ಯಾವ ತಿಂಡಿ ಕಾಫೀನೂ ಇಲ್ಲ, ತಿಳಕೋ. ಮನೇಲೇ ಕರಾವು ಇತ್ತು, ಅದ್ರದ್ದೇ ಮೊಸರು. ಹೊರಗೆ ಕೊಂಡ್ರೂ ಆಗ 'ಥೇಂಡಿ ಮೊಸ್ರೂ' ಅಂತ ಕೂಗ್ಕೊಂಡ್ ಬರ್ತಾ ಇದ್ರು, ಹಿಡಿ ಹಿಡಿ ಗಾತ್ರದ ಗರಣೆ, ಕಾಸಿಗೊಂದು ಪಾವು. ನಮ್ಮ ತಂದೆ ಮನೇಲಂತೂ ಆದೆಷ್ಟೋ ಹಸು ಇದ್ವು. ಕರೆಯೋದೇ, ಹೆಪ್ಪು ಹಾಕಿ ಕಡೆದು ಬೆಣ್ಣೆ ತೆಗೆಯೋದೇ ಒಂದು ಭಾರಿ ಕೆಲಸ. ಹಳ್ಳಿ ಬೆಣ್ಣೆ ಕೂಡ ಬಲು ಅಗ್ಗ—ರೂಪಾಯಿಗೆ ಹನ್ನೆರಡು ಸೇರು, ಇಷ್ಟಿಷ್ಟು ಗಾತ್ರ ಮುದ್ದೆಗಳು. ಕಾಯಿಸೋದಕ್ಕೆ ಇಟ್ರೆ ಮನೆಯೆಲ್ಲ. ಅಕ್ಕಪಕ್ಕದ ಮನೇಲೂ ಬೀದೀಲೂ ಘಂ ಅಂತ ಸೊಗಸಾದ ವಾಸನೆ. ಈಗಿನ ಹಾಗಲ್ಲ, ಬೆರಕೆ ಬೆಣ್ಣೆಗೂ ಕೆ. ಜಿ. ಗೆ ಹದಿನಾರು ಇಪ್ಪತ್ತು ರೂಪಾಯಿ, ದರಿದ್ರ ವನಸ್ಪತೀಗೂ ಹನ್ನೆರಡು ಹದಿನಾಲ್ಕು ರೂಪಾಯಿ. ನಮ್ಮ ತಂದೇ ಮನೇಲಿ ದೊಡ್ಡ ತೊಡೆ ಎತ್ತರ ಕೊಳದಪ್ಪಲೆ ಇತ್ತು, ಅದರ ತುಂಬ ಬೆಣ್ಣೆ ಕಾಯಿಸಿದ ತುಪ್ಪ ಇಟ್ಟಿರ್ತಾ ಇದ್ರು. ಆ ಕೊಳದಪ್ಪಲೇಲಿ ನಮ್ಮಣ್ಣ ಅಕ್ಕಿ ತುಂಬಿಟ್ಟುಕೋತಾ ಇದ್ದ. ಅದು ನಂಗೆ ಬಂದಾಗ ನಾನು ನೀರು ತುಂಬಿ ಇಟ್ಟುಕೋತಾ ಇದ್ದೆ. ನಿಮ್ಮ ತಾತ ನಾಣಿ ತಾತನ ಕಾಲಕ್ಕೆ ಆ ಕೊಳದಪ್ಪಲೆಯೇ ಇಲ್ದ ಹಾಗಾಯ್ತು, ಅಷ್ಟು ಹೊತ್ತಿಗೆ ನಾನು ಮಾರಿಬಿಟ್ಟಿದ್ದೆ...ಹ್ಞ, ನಾನು ಮಾರಿದ್ದು ಒಂದೊಂದೇ?... ನನ್ನ ಪಾಲಿಗೆ ಬಂದದ್ದನ್ನೆಲ್ಲ ಮಾರಿಬಿಟ್ಟೆ—ಪಾತ್ರೆ ಪರಡಿ, ಜಮೀನು ಸಮೀನು, ಮನೇನೂ ಕೂಡ. ನಂಗೆ ದರದು ದರದು ಅಂತ ಪತ್ರ ಪಲಾಶಾನೆಲ್ಲ ಕೊಟ್ಟ ಕೊಟ್ಟಷ್ಟು ಹಣಾನೇ ತಗೊಂಡು ತಲೆ ಹರಿದು ಸುಟ್ಟುಹಾಕಿಬಿಟ್ಟೆ. ನಮ್ಮಮ್ಮನಂತೂ 'ಮನೇನಾದ್ರೂ ಕೊಡಬೇಡ ಕಣೋ. ಮನೆ ಇಲ್ದೆ ಇದ್ದೋರಿಗೆ ಮಾನವಿಲ್ಲ' ಅಂತ ಎಷ್ಟೋ ಹೇಳಿದ್ರು ಪಾಪ..."

"ಅಯ್ಯೋ ಹೋಗು ಮುತ್ತಾತ, ಏನೇನೋ ಹೇಳ್ತಿ, ಅಮ್ಮಂಗೆ ತಗೊಂಡ ಸೌತೇಕಾಯಿನ ಕತೇನೇ ಹೇಳೋದಿಲ್ಲ."

"ಹೌದು, ಹೌದು, ನಿಜ ಮರಿ. ಮರೆತೇ ಬಿಟ್ಟೆ, ಏನೇನೋ ನೆನಸಿಕೋತಾ. ನಾವು ಮುದುಕರೇ ಹೀಗೆ. ನಾಳೆ ನೀನು ಮುದುಕನಾಗಿ ನನ್ನ ಹಾಗೆ ಗಡ್ಡ ಮೀಸೆ ಬೆಳ್ಳಗಾದರೆ ನೀನೂ ಹೀಗೆ ಮಾಡ್ತೀಯೋ." ಸಣ್ಣಯ್ಯನವರು ನಕ್ಕರು.

"ಏನಿಲ್ಲ. ನಾನು ಮುದ್ಕ ಆಗೋದೇ ಇಲ್ಲ; ನಿನ್ನೆ ಹಾಗೆ. ನಂಗೆ ಗಡ್ಡ ಮೀಸೆ ಬರೋದೆ ಇಲ್ಲ."

"ಹೌದಪ್ಪ, ಮನುಷ್ಯರಾದೋರಿಗೆಲ್ಲ ಈ ಭ್ರಮೆ ಇರುತ್ತೆ ಮರಿ–ಇನ್ನೂ ಎಷ್ಟೋ ಇವ್ವ ಹಾಗೆ."

"ಅದಿರ್ಲಿ, ಸೌತೇಕಾಯಿ ಕತೆ ಹೇಳ್ತೀಯೋ ಇಲ್ವೋ?"

"ಆಗ್ಲಿ ಆಗ್ಲಿ ಹೇಳ್ತೀನಿ...ಅಲ್ಲಿಗೇ ಬರ್‍ತಾ ಇದೀನಿ......ಹುಂ, ಎಲ್ಲಿದ್ದೇ? ಎಲ್ಲೀವರಗೆ ಬಂದಿದ್ದೇ?...ಹ್ಞಾ, ತಂಗಳನ್ನ ಉಂಡೆ, ಅಲ್ವೆ?"

"ಹುಂ."

"ಆಮೇಲೇನಿದೆ, ಎಲ್ಲ ಚುಟುಕ ಚುಟುಕ ಸರಿ ಒಂದು ಪಾಣಿ ಪಂಚೆ ಕಚ್ಚೆ ಹಾಕಿ ಕಟ್ಕೊಂಡು, ಇನ್ನೊಂದನ್ನು ಹೊದ್ಕೊಂಡು ಹೊರಟೇಬಿಟ್ಟೆ."

"ಪಾಣಿ ಪಂಚೆ ಅಂದ್ರೆ ಇದಾ?" ಮರಿಮಗ ಮುತ್ತಾತನ ಹೆಗಲಿನ ಮೇಲಿದ್ದ ತುಂಡು ವಸ್ತ್ರವನ್ನು ತೋರಿಸಿದ.

"ಹುಂ, ಇದೇ. ನೀನು ಜಾಣ, ನಿಂಗೆಲ್ಲ ಗೊತ್ತು."

"ನಿಂಗೆ ಬೆಲ್‌ಬಾಟಂ ಪ್ಯಾಂಟು, ಟೆರಿಲಿನ್ ಬುಷ್ ಷರಟು, ಹ್ಯಾಟು, ಷೂ, ಸಾಕ್ಸು ಏನೂ ಇರಲಿಲ್ವಾ?"

"ಉಹುಂ, ಆಗೆಲ್ಲ ಹಾಗೇ. ನಮ್ಮ ಅಪ್ಪನ ಮನೇಲೇ ನನ್ನ ಅಲಂಕಾರ ಎಲ್ಲ ಮುಗಿದು ಹೋಗಿತ್ತು. ಇನ್ನೂ ದೊಡ್ಡೋನಾಗಿರಲಿಲ್ಲ. ಅಲ್ಪ ಸ್ವಲ್ಪ ಆಸ್ತಿ ಪಾಸ್ತಿ ಏನಿತ್ತೋ ಇಲ್ವೋ ನಂಗೆ ಗೊತ್ತೇ ಇರಲಿಲ್ಲ. ಆಮೇಲೆ, ಆಸ್ತಿ ಬಂದ ಮೇಲೆ, ಮಲ್ ಪಂಚೆ ಉಟ್ಟೆ, ಸರ್ಜ ಕೋಟು ಹಾಕಿದೆ, ರೇಷ್ಮೆ ಪೇಟ ಸುತ್ತಿದೆ, ಏನೇನೋ ಮಾಡಿದೆ ಅನ್ನು. ಆಸ್ತಿಯೆಲ್ಲ ಕರಗಿ ಹೋಗೋವರೆಗೂ... ಹುಂ, ಅದೆಲ್ಲ ಯಾಕೆ ಬಿಡು, ಬೋಳಮ್ಮ ತುರುಬು ನೆನೆಸಿಕೊಂಡ ಹಾಗೆ... ಹ್ಞಾ, ಹೇಳ್ತಾ ಇದ್ನಲ್ಲ, ಒಂದು ಇಂಥ ತುಂಡು ಪಂಚೆ ಉಟ್ಟು ಇನ್ನೊಂದನ್ನು ಹೊದ್ದು ಹೊರಟೆ ಅಂತ..."

"ಹುಂ."

"ಆಗ ನಮ್ಮಣ್ಣ 'ತಗೋ ದಾರಿ ಖರ್ಚಿಗೆ' ಅಂತ ಒಂದು ಮೂರು ಕಾಸಿನ ಬಿಲ್ಲೆ ಕೊಟ್ಟ. ನಂಗೆ ಸಂತೋಷವೋ ಸಂತೋಷ."

"ಮೂರು ಕಾಸಿನ ಬಿಲ್ಲೆ ಅಂದ್ರೆ ?"

"ಹ್ಞಾ, ಬಿಲ್ಲೆ ಅಂದ್ರೆ ತಾಮ್ರದ ಕಾಸು, ಬಹಳ ಭಾರಿ ಪೈಸಾ ಅಂತ ಇಟ್ಟುಕೊ; ಅಷ್ಟು ತಾಮ್ರಕ್ಕೆ ಈಗ ಈ ರೂಪಾಯಿ ಅನ್ನಿಸಿಕೊಂಡದ್ದನ್ನೇ ಕೊಡಬೇಕಾಗುತ್ತೇನೋ. ಆಗ ಬೆಳ್ಳಿ- ತಾಮ್ರ ನಾಣ್ಯಗಳ ಕಾಲ. ಈಗ ಬೆಳ್ಳಿ ರೂಪಾಯೇ ಕಾಣೋದಿಲ್ಲ, ಬರಿ ಕಾಗದ ಚೂರಿನ ಪ್ರಪಂಚ. ಮಹಮದ್ ಬಿನ್ ತೊಗಲಕ್ ಅಂತ ಒಬ್ಬ ಖಿಲು ದೊರೆ ಇದ್ನಂತೆ, ಅವನ ಕಾಲದಲ್ಲಾದ್ರೂ..."

"ಆಮೇಲೆ ? ಆ ಪೈಸಾದಲ್ಲಿ ಸೌತೇಕಾಯಿ ತಗೊಂಡ್ಯಾ ?"

"ಹ್ಞಾ, ನೋಡು, ಅದ್ನೇ ನಾನು ಮಾಡಿದ್ದು! ಭದ್ರಾವತಿಯಿಂದ ನಡೆದೂ ನಡೆದೂ ಹೊಸಳ್ಳಿ ಹತ್ರ ಹತ್ರ ಬಂದಾಗ ಆಗ್ಲೆ ಹತ್ತು ಗಂಟೆ



ಸಮಯ, ಮೇಲೆ ಮಾರ್ಚಿ ಬಿಸಿಲು ಬಾರಿಸ್ತಾ ಇತ್ತು. ತಲೆ ಮೇಲೆ, ನಡೆಯೋ ನೆಲದ ಮೇಲೆ, ಬಿಸಿ ಧೂಳು ಮುಚ್ಕೊಂತಾ ಇತ್ತು. ಕಾಲಿನ ಮೇಲೆ, ಬಟ್ಟೆ ಮೇಲೆ. ತಂಗಳನ್ನ ಎಲ್ಲ ಕರಗಿ ಹೋಗಿ ಆಗಲೇ ಹೊಟ್ಟೆ ಚುರುಕ್ ಅನ್ನಿಸ್ತಾ ಇತ್ತು. ಹೊಸಳ್ಳಿ ಮಾಳದಲ್ಲಿ ಸಂತೆ– ಅಂದ್ರೆ ವಾರದ ಮಾರ್ಕೆಟ್–ಸೇರಿತ್ತು.. ಅಲ್ಲಿ ಬಣ್ಣ ಬಣ್ಣದ ಬತ್ತಾಸು, ಕಲ್ಯಾಣಸೇವೆ, ಸಕ್ಕರೆ ಬೆಂಡು, ಏನೇನೆಲ್ಲ– ಪೆಪ್ಪರ್‌ಮೆಂಟಿನ ಹಾಗೇ ಸಕ್ಕರೆ ತಿಂಡಿ ಅಂತ ಇಟ್ಟುಕೊ–ಗುಡ್ಡೆ ಗುಡ್ಡೆ-ಯಾಗಿ, ಪೇರಿಸಿ ಪೇರಿಸಿ ಇಟ್ಟಿದ್ರು. ಕಡ್ಲೆಪುರಿ ದೊಡ್ಡ ದೊಡ್ಡ ಗುಡ್ಡೆ, ಗಾಡಿ ಗಾಡಿ ಸೌತೇ-ಕಾಯಿಂದು ಎಲ್ಲಕ್ಕಿಂತ ಭಾರಿ ಭಾರಿ ಗುಡ್ಡೆ. ನೋಡಿ ನೋಡಿ ನಂಗೆ ಒಣಗಿದ ಬಾಯಲ್ಲೂ ನೀರು ಸುರಿತು. ಏನು ತಗೊಳ್ಳಲಪ್ಪಾ ದೇವರೇ ಅಂತ ಕಕ್ಕಾಬಿಕ್ಕಿ ಆಯ್ತು. ಹಾಗೇ ನಿಂತು-ಕೊಂಡು ನಾನು ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಕಣ್ಣು ಹಾಯಿಸ್ತಾ ಯೋಚನೆ ಮಾಡ್ತಾ ಇರೋವಾಗ ರಾಂಭಟ್ರು, ವೆಂಕಟಶಾಸ್ತ್ರಿಗಳು ಒಂದೊಂದು ಸಣ್ಣ ಕಾಸು ಕೊಟ್ಟು ಸೌತೇಕಾಯಿ ತಗೋತಾ ಇದ್ದದ್ದನ್ನು ಕಂಡೆ. ಹ್ಞಾ, ಅದೇ ಸರಿ, ತುಂಬ ಚೆನ್ನಾಗಿರುತ್ತೆ ಅಂತ ನಾನು ಮೂರು ಕಾಸಿನ ಬಿಲ್ಲೇನೂ ಕೊಟ್ಟು ಒಂದು ದೊಡ್ಡ ಬಿಳೀ ಸೌತೇಕಾಯಿ– ಇಗೊ ಈಗ ನಿಮ್ಮಜ್ಜಿ ಕೊಂಡುಕೊಂಡ್ಳಲ್ಲ ಅಂಥಾದ್ದು– ತಗೊಂಡೆ. ಅದನ್ನು ನೋಡಿ ಎಷ್ಟು ಹಿಗ್ಗಿ-ದೆನೋ. ಅದನ್ನು ಎಲ್ಲಿ ಚಚ್ಚಿ ತಿನ್ನೋದು ಅಂತ ಯೋಚಿಸ್ತಾ ನಡೆದೆ."

"ಅಮ್ಮಂಗೆ ತಗೊಂಡು ಹೋಗಿ ಕೊಡ್ಲೇ ಇಲ್ವಾ?"

"ಅದಕ್ಕೇ ಬರ್‍ತಾ ಇದೀನಿ ಮರೀ. ಹಾಗೇ ಯೋಚಿಸ್ತಾ ಹೋಗ್ತಾ ಇರೋವಾಗ ನಾನು ಪುಟ್ಟೋನಾಗಿದ್ದಾಗ, ನಮ್ಮ ತಂದೆ ಮನೇಲಿ ಇದ್ದಾಗ, ಅಮ್ಮ ಸೌತೇಕಾಯಿ ಹೆಚ್ಚಿ ಉದ್ದನೆ ಹೋಳು ಮಾಡಿ ನಂಗೆ ಕೊಡ್ತಾ ಇದ್ದದ್ದು ನೆನಪಿಗೆ ಬಂತು. ಆಗ ಅವಳೂ ಒಂದು ಚೂರು ಬಾಯಿಗೆ ಹಾಕ್ಕೊಂತಾ ಇದ್ದಳು ಅನ್ನೋದೂ ಬಂತು. ಅವಳಿಗೂ ಇಷ್ಟ ಸೌತೇಕಾಯಿ ಅಂದ್ರೆ ಅಂದುಕೊಂಡೆ. ಹೌದು, ಅವಳಿಗೂ. ಇಷ್ಟ, ಹುಂ, ಹುಂ, ಇದನ್ನು ಅಮ್ಮಂಗೇ ತಗೊಂಡು ಹೋಗಿ ಕೊಟ್ರೆ ಅಂತ ಯೋಚನೆ ಬಂತು. ಆದ್ರೆ ನಂಗೆ ಹಸಿವಾಗ್ತಾ ಇದೆ ಬಾಯಾರಿಕೆಯೂ ಆಗ್ತಾ ಇದೆಯಲ್ಲ, ನಾನೇ ತಿಂದರೋ ಅಂತ ಬೇರೆ. ಸರಿ ಆಗಿನಿಂದ ನೋಡಪ್ಪ 'ಅಮ್ಮಂಗೆ ತಗೊಂಡು ಹೋಗಲೊ, ನಾನೇ ತಿನ್ನಲೊ, ಅಮ್ಮಂಗೆ ತಗೊಂಡು ಹೋಗಲೋ ನಾನೇ ತಿನ್ನಲೋ, ಅಂತ ಯೋಚಿಸಿದ್ದೂ ಯೋಚಿ-ಸಿದ್ದೇ, ದೋಸೆ ಮೊಗಚಿ ಹಾಕಿದ ಹಾಗೆ. ಹಾಗೋ ಹೀಗೋ ಹೀಗೋ ಹಾಗೋ. ಬಗೆ ಹರೀಲೇ ಇಲ್ಲ. ಸಂತೆಯಿಂದ ಸ್ವಲ್ಪ ದೂರ ಹೋಗಿ ಒಂದು ಬಂಡೆ ಮೇಲೆ ಕೂತ್ಕೊಂಡು ಭಟ್ರು ಶಾಸ್ತ್ರಿಗಳೂ ಸೌತೇಕಾಯಿ ಚಚ್ಚಿಕೊಂಡು ತಿನ್ತಾ ಇದ್ರು. ನಂಗೆ ಇನ್ನೂ ಅನುಮಾನವೇ, ಏನು ಮಾಡೋದು ಅಂತ. ವೆಂಕಟಶಾಸ್ತ್ರಿಗಳು, 'ಮಗು, ಸುಮ್ಮನೆ ಯಾಕೆ ಕೂತಿದಿಯೋ, ಹಸಿವಿಲ್ವೆ, ಸೌತೇಕಾಯಿ ತಿನ್ನು' ಅಂದ್ರು. ಆಗ ನೋಡಪ್ಪ ಅದೇನೋ ಆಗಿ ನಾನು 'ನಮ್ಮ-ಮ್ಮಂಗೆ ತಗೊಂಡು ಹೋಗಿ ಕೊಡ್ತೀನಿ' ಅಂದು ಬಿಟ್ಟೆ. ಕಡೆಗೆ! ಭಟ್ರು, 'ಅಲ್ಲೇನು ಕಡಿಮೆಯೊ ಸೌತೇಕಾಯಿಗೇ? ಸುಮ್ಮನೆ ತಿನ್ನು' ಅಂದ್ರು. ಆದ್ರೇನು ನಾನು ಸುಮ್ಮನೇನೇ ಇದ್ದುಬಿಟ್ಟೆ– ಸೌತೆಕಾಯೀನ ತೊಡೆ ಮೇಲೆ ಇಟ್ಕೊಂಡು..."

"ನಿಂಗೆ ತಿನ್ಬೇಕು ಅಂತ ಅನ್ನಿಸಲೇ ಇಲ್ವಾ– ಅವರೆಲ್ಲ ತಿನ್ತಾ ಇದ್ರೂ?"

"ಅನ್ನಿಸದೇ ಇರುತ್ಯೇ ಮರೀ? ಆದ್ರೆ ಅಮ್ಮಂಗೆ ತಗೊಂಡು ಹೋಗಬೇಕಾಗಿತ್ತಲ್ಲ."

"ಅವರು ಎಲ್ಲ ತಿಂದುಬಿಟ್ರಾ ಕರಂಕರಂ ಅಂತ?"

"ಇಲ್ಲ, ಪಾಪ. ಎಷ್ಟು ಹೊತ್ತಾದ್ರೂ ನಾನು ಸುಮ್ಮನೇನೇ ಕೂತಿದ್ದನ್ನು ಕಂಡು ಅವರು 'ಹುಚ್ಚು ಹುಡುಗ! ತಗೊ, ಇದ-ನ್ನಾದ್ರೂ ತಿನ್ನು' ಅಂತ ತಮ್ಮದರಲ್ಲೇ ಒಂದು ಚೂರು ಕೊಟ್ಟರು."

"ನಿಂಗೆ ಸಾಕಾಯ್ತಾ?"

"ಹ್ಞ! ಸಾಕಲ್ಲಾಗುತ್ತ್ಯೋ ಮರಿ, ಅಷ್ಟು ಚೂರಿನಲ್ಲಿ. ಆದ್ರೆ ಅವರದ್ದೆಲ್ಲ ಬಾಕೀದು

ಆಗಿ ಹೋಗಿತ್ತು, ಸನ್ನದನ್ನು ತಿನ್ನೋಹಾಗಿರಲಿಲ್ಲ; ಏನು ಮಾಡೋದಕ್ಕಾಗುತ್ತೆ ?"

"ಆಮೇಲೆ ?"

"ಆಮೇಲೇನು? ಎದ್ದು ಹೊರಟೆ ಅವರ ಜತೆ, ಸೌತೇಕಾಯಿ ಹೊತ್ತುಕೊಂಡು."

ಈಗ ಶ್ಯಾಮಲಜ್ಜಿ ಎರಡು ಉದ್ದನೆಯ ಹೋಳು ಸೌತೇಕಾಯನ್ನೂ ಬೀಜ ತೆಗೆದ ಎರಡು ಚೂರು ತಿರುಳನ್ನೂ ತಟ್ಟೆಯಲ್ಲಿ ತಂದಿಟ್ಟಳು. ಮುತ್ತಾತ ಒಂದು ಚೂರು ತಿರುಳನ್ನು ಬಾಯಿಗೆ ಹಾಕಿಕೊಂಡು ಹಲ್ಲು ಸವೆದ ಒಸಡಿನಲ್ಲಿ ಅಗಿದಗಿದು ನುಂಗಿದರು.

"ಆ ಮೇಲೆ ಅಮ್ಮನೂರು ಸಿಕ್ತಾ ?" ಮರಿಮಗ ಮತ್ತೆ ಕೆದಕಿದ, ಸೌತೇಕಾಯನ್ನು ತಿನ್ನುತ್ತ.

"ಅಯ್ಯೋ, ಅಷ್ಟು ಬೇಗ ಸಿಗ್ತೇನಪ್ಪಾ ? ಅಲ್ಲೀವರೆಗೆ ಕಾಲು ಭಾಗ ಮಾತ್ರ ಬಂದಿದ್ವಂತೆ, ಇನ್ನೂ ಸಂಜೆವರೆಗೂ ನಡೀಬೇಕಾಗಿತ್ತಂತೆ. ಹಾಗೆ ಅಂದಿದ್ರು ಶಾಂಭಟ್ರು, ನಾನು 'ಇನ್ನೂ ಎಷ್ಟು ದೂರ ಇದೆ' ಅಂತ ಕೇಳಿದಾಗ ನಕ್ಕು."

"ತುಂಬಾ ದೂರಾನಾ ?"

"ಹೂಂ ಮತ್ತೆ."

"ನಿಂಗೆ ಕಾಲು ನೋವಾಗ್ತಾ ಇತ್ತಾ ?"

"ಹುಂ, ಆಗಲೇ ಒಂಬತ್ತು ಗಂಟೆ ಹೊತ್ತಿಗೇ ಸ್ವಲ್ಪ ಸ್ವಲ್ಪ ಶುರು ಆಗಿತ್ತು, ಅಷ್ಟಾಗಿ ಕಾಣಿಸ್ತಾ ಇರಲಿಲ್ಲ– ಹೋಗೋ ಉತ್ಸಾಹದಲ್ಲಿ. ಈಗೀಗ ಜಾಸ್ತಿ ಆಗ್ತಾ ಇತ್ತು."

"ಹಾಗೂ ನಡ್ದೇ ನಡೆದ್ಯಾ ?"

"ಹೂಂ, ಇನ್ನೇನು ಮಾಡೋದು ? ಅಮ್ಮನ್ನ ನೋಡಬೇಕಾಗಿತ್ತಲ್ಲ, ಅಲ್ಲಿವರೆಗೆ ಬಂದೂ ಬಿಟ್ಟಿದ್ನಲ್ಲ."

"ಆಮೇಲೆ ?"

" ಆಮೇಲೆ ನಡ್ದೇ ನಡ್ದೇ ನಡ್ದೇ. ಹೊಸಳ್ಳಿ ಅಂತ ಹೇಳಿದ್ನಲ್ಲ, ಸಂತೆ ಆಗ್ತಾ ಇದ್ದೂರು, ಸೌತೇಕಾಯಿ ಕೊಂಡೂರು, ಅದನ್ನು ಬಿಟ್ಟು ಬಂದು ಕೂತುಕೊಂಡಿದ್ದ ಬಂಡೆ ದಾಟಿದ ಸ್ವಲ್ಪ ದೂರದಲ್ಲೇ ದೊಡ್ಡ ಕಾಡು ಸಿಕ್ತು– ಬಿದಿರು ಮೆಳೆ, ಆಲದ ಮರ, ಮುತ್ತುಗದ ಮರ, ಗೊಬ್ಬಳಿ ಮರ, ತೇಗದ ಮರವಂತೆ, ಯಾವ ಯಾವ ಮರವೋ ಪೊದೆಗಳೋ ಕುರುಚಲು ಗಿಡಗಳೋ ಬಂಡೆಗಳೋ; ಬಟ್ಟೆಗೆಲ್ಲ ಊಬು, ಅಂದ್ರೆ ಸಣ್ಣ ಸಣ್ಣ ಮುಳ್ಳು, ಹತ್ತಿಕೊಳ್ಳೋ ಹಾಗೆ ನನ್ನ ಎದೆವರೆಗೂ ಬೆಳೆದಿದ್ದ ಹುಲ್ಲು ಹಂಚೀಕಡ್ಡಿ..."

"ಅದ್ ಯಾಕೆ ಮುತ್ತಾತ ನಡಕೊಂಡೇ ಹೋದೆ ಕಾಡ್ನಲ್ಲಿ? ರೈಲು, ಬಸ್ಸು, ಕಾರು, ಏರೋಪ್ಲೇನ್‌ನಲ್ಲಿ ಹೋಗ್ಲಿಲ್ಲಾ ?"

"ಆಗ ಅದೊಂದೊಂದೂ ಇರ್ಲಿಲ್ಲ, ಈಗಲೂ ಇಲ್ಲ ನಮ್ಮಮ್ಮನ ಊರಿಗೆ; ಅಬ್ಬಬ್ಬಾ ಅಂದ್ರೆ ಎತ್ತಿನ ಗಾಡಿ. ಅದೂ ನಂಗೊಬ್ಬನಿಗೋಸ್ಕರಾನೇ ? ಗಾಡಿ ದಾರೀಲಿ ಹೋಗಬಹುದಾಗಿತ್ತೇನೋ; ಆದ್ರೆ ಅದು ಬಹಳ ಬಳಸು ಅಂತ ಹೋಗ್ಲಿಲ್ಲ. ಕಾಡಿನ ಅಡ್ಡ ದಾರೀನೇ ಹತ್ತಿರ ಅಂತ ಹೋದದ್ದು."

"ಕಾಡ್ನಲ್ಲಿ ಹುಲಿ ಸಿಂಹಾನೂ ಇತ್ತಾ ?"

"ಹುಲೀ, ಕಿರಬ, ಚಿರತೆ, ತೋಳ ಇದ್ವೇ ಇರುತ್ವೆ. ಆ ಹೊತ್ನಲ್ಲಿ ನಮಗೆ ಅವು ಹತ್ರ ಇದ್ವೊ ಇಲ್ವೊ ಗೊತ್ತಿಲ್ಲಾಪ್ಪ. ರಣಹದ್ದು, ಹದ್ದು, ಗಿಡಗ, ಕಾಡು ಪಾರಿವಾಳ, ಕಾಗೆ ಅದು ಇದು ಅಂತೂ ಸರಿಯೇ ಸರಿ—ಎಷ್ಟೋ ಹಕ್ಕಿಗಳು ಹಾರಾಡ್ತಾ ಇದ್ವು, ಮರದ ಮೇಲೆ ಅಲ್ಲಿ ಇಲ್ಲಿ ಕೂತಿದ್ವು, ಒಂದು ಗುಂಪು ನವಿಲೂ ಕೂಡ ಕಾಣಿಸ್ತು. ನಾವು ಕಾಲ್ದಾರೀಲಿ ನಡೀತಾ ಇದ್ವಲ್ಲ, ಪಕ್ಕದಲ್ಲಿ ಗುಂಪು ಜಿಂಕೆಗಳು ನಿಂತು ನೋಡ್ತಾ ಇದ್ವು, ಆಗ ಈಗ ಅಲ್ಲಷ್ಟು ಇಲ್ಲಷ್ಟು ಭರ್ರಂತ ನೆಗೆನೆಗೆದು ನಮ್ಮ ದಾರಿ ದಾಟಿ



ಹೋಗ್ತಾ ಇದ್ವು. ಆಗೀಗ ಒಂದು ನರಿ ಒಂದು ಸಾರಿ ಗುರ್ ಗುರ್ ಅಂತ ಕಾಡುಹಂದಿಯೂ ಹಾದು ಹೋಯ್ತು."

"ನಿಂಗೆ ಹೆದರ್ಕೆ ಆಗ್‌ಲಿಲ್ವಾ?"

"ಆಗ್ದೇ ಇರುತ್ತೇ? ನೀನು ಇಲಿ ಕಂಡ್ರೆ ಅಮ್ಮನ ತೊಡೆ ಮೇಲೆ ಹೋಗಿ ಕೂತುಕೋತೀಯೋ ಇಲ್ವೋ. ಇನ್ನು ಕಾಡು ಪ್ರಾಣಿ ಅಂದ್ರೆ? ನಾನು ನಿಂಗಿಂತ ಇನ್ನೆರಡು ಮೂರು ವರ್ಷದಷ್ಟು ಮಾತ್ರ ದೊಡ್ಡೋನಾಗಿದ್ನಲ್ಲ. ಪ್ರತಿ ಸಾರಿ ಪ್ರಾಣಿ ಯಾವುದಾದರೂ ಕಂಡ್ರೆ ಎದೆ ಢವಢವ ಅಂತಾ ಇತ್ತು, ಹತ್ರ ಹಾದಾಗಲಂತೂ ಎದೆ ಧಡಕ್ ಅಂದು ಕಿರಿಚಿಕೊಳ್ಳೋ ಹಾಗೆ ಆಗ್ತಾ ಇತ್ತು. ಶಾಂಭಟ್ರು– ಅವರು ದೊಡ್ಡೋರು– ಹತ್ರ ಇದ್ವಾಗ ಸ್ವಲ್ಪ ವಾಸಿ, ಅಷ್ಟು ಹೆದರ್ಕೆ ಆಗ್ತಾ ಇರಲಿಲ್ಲ. ಆದ್ರೆ ಅವರು ಉದ್ದನೆ ಕಾಲಿನೋರು, ಮಾತಾಡ್ಕೊಂಡು-ಮಾತಾಡ್ಕೊಂಡು ಮುಂದೆ ಮುಂದೆ ಹೊರಟು ಹೋಗ್ತಾ ಇದ್ರು. ನಾನು ಹಿಂದೆ ಬೀಳ್ತಾ ಇದ್ದೆ, ಜಾಸ್ತಿ ಹಿಂದೆ ಬಿದ್ದಾಗ ಓಡೋಡಿ ಹೋಗಿ ಅವರನ್ನು ಸೇರ್ಕೋತಾ ಇದ್ದೆ. ಹಾಗೆ ಓಡ್ತಾ ಇದ್ವಾಗ ಒಂದು ಕಡೆ ಕಾಲಿಗೆ ಗೊಬ್ಬಳಿ ಮುಳ್ಳು ಹೊಕ್ಕು ಮುರುಕೊಂಡು ಬಿಡ್ತು..."

"ಗೊಬ್ಬಿ ಮುಳ್ಳು ಅಂದ್ರೆ? ಮಿರ್ಜಾ ಮುಳ್ಳ ಹಾಗಿರುತ್ತಾ?"

"ಮಿರ್ಜಾ ಮುಳ್ಳು ಏನೇನೂ ಅಲ್ಲ ಮರಿ, ಅದರ ಮುಂದೆ. ಅದು ಉದ್ದಕ್ಕೆ ಚೂಪಾಗಿರುತ್ತೆ, ದೊಡ್ಡ ಸೂಜಿ, ಉಹುಂ, ದಬ್ಬಳ, ತೆಳ್ಳನೆ ತಂತಿ ಮೊಳೆ ಇದ್ದ ಹಾಗಿರುತ್ತೆ."

"ಅಷ್ಟು ದೊಡ್ಡಾ. ತುಂಬಾ ನೋವಾ?"

"ನೋವಿಲ್ದೇ ಇರುತ್ತೇ? ಕೂತುಕೊಂಡು ಮುಳ್ಳ ಬಗೆದು ತೆಗೆದು ಹಾಕೋಣ ಅಂದ್ರೆ, ಅವರೆಲ್ಲ ಮುಂದೆ ಹೋಗಿಬಿಡ್ತಾ ಇದ್ರು. ಸಧ್ಯಕ್ಕಿರಲಿ, ಆಮೇಲೆ ನೋಡೋಣ ಅಂತ ಹಾಗೇ ನಡೆದೆ ನೋವಿನಿಂದ್ಲೇ, ಕುಂಟ್ತಾನೇ-ಇನ್ನೂ ಹೆಚ್ಚು ಹೆಚ್ಚು ಹಿಂದೆ ಬೀಳ್ತಾ."

"ಆಮೇಲೆ ಮುಳ್ಳ ನಿಮ್ಮಮ್ಮ ತೆಗೆದ್ರಾ?"

"ಅಮ್ಮನೂರಿಗೆ ಹೋಗೋವರೆಗೂ ಆ ನೋವು ಸಹಿಸೋದಕ್ಕೆ ಆಗ್ತಾ ಇತ್ತೇ? ಇಷ್ಟಕ್ಕೂ ಆಗ ನನ್ನ ಮುಳ್ಳ ನಾನೇ ತೆಗೆದುಕೋತಾ ಇದ್ದೆ. ಹಾಗೇ ಕುಂಟ್ಕೊಂಡು-ಕುಂಟ್ಕೊಂಡು ನಡೆದೂ ನಡೆದೇ. ಮಟಮಟ ಮಧ್ಯಾಹ್ನದ ಹೊತ್ತಿಗೆ ದೊಡ್ಡ [illegible] ಬಳಿಗೆ ಬಂದಾಗ ಅವರೆಲ್ಲ ಸ್ವಲ್ಪ ಹೊತ್ತು ಕೂತ್ಕೊಂಡ್ರು. ನಾನೂ ಹಿಂದಿನಿಂದ ಬಂದು ಕೂತ್ಕೊಂಡು ಇನ್ನೊಂದು ದೊಡ್ಡ ಗೊಬ್ಬಿ ಮುಳ್ಳು ಆರಿಸಿಕೊಂಡು ತಂದ್ರು ಅದರಿಂದ ಅಂಗಾಲ ಬಗೆದು ಹೊಕ್ಕಿತ್ತಲ್ಲ ಆ ಮುಳ್ಳಿನ ಚೂರನ್ನ ತೆಗೆದುಹಾಕಿದೆ ಅಂತೂ."

"ರಕ್ತಾನೂ ಬಂತಾ?"

"ಬರದೆ ಇರುತ್ಯೇ ಅಷ್ಟೊಂದು ಬಗೆದಾಗ? ಬಂತು ಬೇಕಾದಷ್ಟೇ."

"ಆಮೇಲೆ ಸರಿಯಾಯ್ತಾ ಕಾಲು?"

"ಆಗ್ಲೇ ಎಲ್ಲಿ ಸರಿಹೋಗುತ್ತೆ, ಆಳವಾದ ಗಾಯ ಇರುವಾಗ. ಅವತ್ತೆಲ್ಲ ಕುಂಟ್ತಾಲೇ ನಡೀತಾ ಇದ್ದೆ."

"ನಂಗೆ ಮುಳ್ಳು ಚುಚ್ಚೋದೆ ಇಲ್ಲಾಪ್ಪ. ನಾನು ಹೊರಗಡೆ ಹೋದಾಗೆಲ್ಲ ಬಾಟಾ ಚಪ್ಲಿ ಷೂ ಏನಾದ್ರೂ ಹಾಕ್ಕೊಂಡೇ ಇರ್ತೀನಿ. ಇಲ್ದೆ ಇದ್ರೆ ಅಮ್ಮ ಬಯ್ತಾಳೆ. ಯಾವಾಗಾದ್ರೂ ಒಂದೊಂದ್ ಸಲ ಆಟ ಆಡೋವಾಗ ಚಪ್ಲಿ ಬಿಟ್ರೆ ಮಾತ್ರ ಮಿರ್ಜಾ ಮುಳ್ಳು ಚುಚ್ಚುತ್ತೆ, ಅಷ್ಟೆ—ಮುತ್ತಾತಾ, ಮುಳ್ಳು ಚುಚ್ಕೊಂಡಾಗ ನೀನು ಬಾಟಾ ಚಪ್ಲಿ, ಷೂ ಏನೂ ಹಾಕ್ಕೊಂಡಿರ್ಲಿಲ್ವಾ?"

"ಆಗ ಚಪ್ಲಿ ಗಿಪ್ಲಿ ಮಾತೇ ಇಲ್ಲ, ಕಾಲೇ ಚಪ್ಲಿ. ಕಲ್ಲು, ಮುಳ್ಳು ತಾಗಿ ಗಾಯ ಆಗ್ತಾ ಇರೋದೇ. ಅಂಗೈಯಲ್ಲಷ್ಟು ಮಣ್ಣು ಆರಿಸಿ ದೊಡ್ಡ ಚೂರು ಉದುರಿಸಿ ಉಳಿದ ಸಣ್ಣ ಮಣ್ಣು ಮೆತ್ತೋದು. ಹಾಗೇ ವಾಸಿಯಾಗ್ತಾ ಇತ್ತು. ಮುಲಾಮಿಲ್ಲ, ಔಷಧಿಯಿಲ್ಲ, ಇಂಜಕ್ಷನ್ ಇಲ್ಲ—ಅಷ್ಟು ಯಾಕೆ ಮರೀ, ನಾನು ದೊಡ್ಡೋನಾಗಿ, ಮದುವೆ ಮಾಡಿಕೊಂಡು, ನಿಮ್ಮ ಈ ನಾಣಿ ತಾತ ಹುಟ್ಟಿ, ಇಪ್ಪತ್ತೆರಡು ವರ್ಷ [illegible] ದ್ದರೂ ಅವನೂ ಕೂಡ ಒಂದು ಚಪ್ಪಲಿ ಅಂತ ಕಂಡೋನಲ್ಲ. [illegible]

ಹೊಲದಲ್ಲಿ ಸದಮ್ಮ, ಜೋಳದ ಕೂಳೆ ಅಂಗಾಲಿಗೆ ಆಳವಾಗಿ ಹೊಕ್ಕು ರಂಪವಾದ ಮೇಲೆ ಅವನಿಗೆ ಹದಿಮೂರಾಣೇದು, ಅಂದ್ರೆ ರೂಪಾಯಿಗೂ ಕಡಿಮೇದು, ಒಂದು ಜತೆ ಕಂತ್ರಿ ಚಪ್ಪಲಿ ತೆಗೆದು ಕೊಟ್ಟೆ ಅಂದ್ರೆ ನೋಡು."

"ನನ್ನ ಚಪ್ಲಿಗೆ ನಾಕು ರೂಪಾಯಿ ಮುತ್ತಾ‌ತಾ, ಅಲ್ಲೇನಮ್ಮ ?"

"ಈಗ ಬಿಡಪ್ಪ, ಸ್ವರ್ಗದ ಬೆಲೆಗಳು."

"ಆಮೇಲೆ ಮುತ್ತಾ‌ತಾ?"

"ಹುಂ, ಆಮೇಲೆ ಆಮೇಲೆ. ಎಲ್ಲಿದ್ದೇ?... ಹ್ಞಾ ಹರಿಯೋ ಹಳ್ಳದ ಬಳಿ ಅಲ್ವೆ? ಹುಂ, ಹೌದು."

"ಹರಿಯೋ ಹಳ್ಳ ಅಂದ್ರೆ ಹೊಳೇನಾ–ಕಾವೇರಿ ಹೊಳೆ ಹಾಗೆ?"

"ಕಾವೇರಿ ಹೊಳೆಯಷ್ಟು ದೊಡ್ಡದಲ್ಲ, ಸಣ್ಣದು; ನೀನು ನೂರಡಿ ರಸ್ತೆ ನೋಡಿದೀಯೋ ಇಲ್ವೊಪ್ಪಾ, ಅದರ ಎರಡರಷ್ಟು ಮೂರರಷ್ಟು ಅನ್ನು. ಆದ್ರೆ ಜೋರಾಗಿ ಹರೀತಾ ಇತ್ತು. ಹುಂ, ಆಗ ಮಧ್ಯಾಹ್ನದ ಮೇಲಾಗಿತ್ತು ಅಂದ್ನಲ್ಲ, ಶಾಂಭಟ್ರು ತಂದಿದ್ದ ಅವಲಕ್ಕಿ ಗಂಟು ಬಿಚ್ಚಿ ಎಲ್ಲಾರಿಗೂ ಒಂದೋದು ಹಿಡಿ ಕೊಟ್ರು. ಒಂದೊಂದು ಚೂರು ಬೆಲ್ಲ, ಅವಲಕ್ಕಿ ತಿಂದಂ ಹಳ್ಳದ ನೀರು ನಾಲ್ಕು ಬೊಗಸೆ ಕುಡಿದೆ. ಆಹಾ..."

"ಹಾಗೇ ತಿಂದ್‌ಬಿಟ್ರಾ ಒಣ ಅವಲಕ್ಕೀನೇ?"

"ಹೂಂ ಮತ್ತೆ. ಆ ಹಸಿವಿನ ಹೊತ್ತಿನಲ್ಲಿ ಅದು ಹೇಗಿತ್ತು ಅಂತೀಯಾ? ಅಗೀತಾ ಅಗೀತಾ ಬಾಯಲ್ಲಿ ಅದೇ ಸಿಹಿಯಾಗೋದು, ಬೆಲ್ಲಾನೇ ಬೇಡ ಅನ್ನೋ ಹಾಗೆ."

"ನಂಗೆ ಹಾಗೇ ಇಷ್ಟ ಇಲ್ಲಾಪ್ಪಾ, ಥೂ! ಅಮ್ಮ ಯಾವತ್ತಾದ್ರೂ ಯಾವತ್ತಾದ್ರೂ ಒಂದೊಂದ್ ದಿನ ಹಾಲು ಅವಲಕ್ಕಿ ಮಾಡ್ತಿ, ಸಕ್ರೆ, ತುಂಬ ಕಾಯಿತುರಿ, ಯಾಲಕ್ಕಿ, ಹಾಕಿ ಕೊಟ್ರೆ ತಿನ್ತೀನಿ ಅಷ್ಟೆ."

"ನಮಗೆ ಒಣವಲಕ್ಕಿ, ಒಂದು ಚೂರು ಕೊಬ್ಬರಿ ಬೆಲ್ಲ ತಿಂದು ಅಭ್ಯಾಸ. ಎಷ್ಟೆಷ್ಟೋ ದಿವಸ ಅದೇ ಸಂಜೆ ಟಿಫಿನ್ ನಮಗೆ. ಶಾಂಭಟ್ರೇನೋ ಅವರ ಅವಲಕ್ಕಿ ಬಟ್ಟೆ ಗಂಟನಲ್ಲಿ ಹಾಗೇ ನೀರೊಳಗೆ ಸ್ವಲ್ಪ ಹೊತ್ತು ಮುಳುಗಿಸಿ ನೆನೆದ ಮೇಲೆ ಹಿಂಡಿ, ಬೆಲ್ಲ ಕುಟ್ಟಿ ಪುಡಿ ಮಾಡಿ ಸೇರಿಸಿ ತಿಂದ್ರು. ಅವರಿಗೆ ವಯಸ್ಸಾಗಿ ಹಲ್ಲು ಸವೆದು ಹೋಗಿತ್ತಂತೆ. ಅದು ಹೋಗ್ಲಿ ಬಿಡು. ನಾವು ಹಳ್ಳ ದಾಟಿದ್ದು ಹೇಳ್ತೀನಿ ಕೇಳು."

"ಹುಂ, ಬೋಟ್ನಲ್ಲಿ ದಾಟಿದ್ರಾ– ಕೆ. ಆರ್. ಎಸ್. ನಲ್ಲಿ ಇದೆಯಲ್ಲಾ ಅಂಥಾದ್ದರಲ್ಲಿ?"

"ಉಹುಂ ಉಹುಂ, ಅದೊಂದೂ ಇಲ್ಲ. ಕಾಲು ಬೋಟ್, ಕಾಲು ದೋಣಿ ಅಷ್ಟೆ. ಶಾಂಭಟ್ರು ಹೇಳಿದ್ರು 'ಹಳ್ಳ ತಕ್ಕಷ್ಟು ಆಳವಾಗಿದೆ, ಎಲ್ಲಾರೂ ಬಟ್ಟೆ ತೆಗೆದು ತಲೆ ಮೇಲೆ ಇಟ್ಕೊಳ್ಳಿ, ಒದ್ದೆ ಆಗದ ಹಾಗೆ. ದಾಟೋವಾಗ ಹೆಜ್ಜೆ ನಿಧಾನವಾಗಿಡಿ, ಕಲ್ಲು ಜಾರುತ್ತೆ, ನೀರು ಜೋರಾಗಿ ಹರಿಯುತ್ತೆ, ಜಿದ್ದುಗಿದ್ದೀರಿ' ಅಂತ. ನಾನು ಪಂಚೆ ಬಿಚ್ಚಿ ಹೊದ್ದಿದ್ದನ್ನೂ ತೆಗೆದು, ಸೌತೇಕಾಯಿಗೆ ಸುತ್ತಿ ತಲೆ ಮೇಲೆ ಇಟ್ಕೊಂಡು ನೀರಿಗಿಳಿದೆ."

"ಬರಿ ಬೆತ್ಲೇನಾ–ಥೂ!"

"ಉಹುಂ, ಆಗ ಎಲ್ಲರೂ ಲಂಗೋಟಿ ಕಟ್ಟಾ ಇದ್ರು" ಸಣ್ಣಯ್ಯನವರು ನಕ್ಕು ಮುಂದುವರಿಸಿದರು. "ನೀರಿಗೆ ಕಾಲಿಟ್ರೆ ಹೆಜ್ಜೆ ಹೆಜ್ಜೆಗೂ ಹೆಚ್ಚು ಹೆಚ್ಚು ನೀರು ಮೇಲಕ್ಕೆ ಬರ್ತಾ ಇತ್ತು. ಈಗ ಹೆಜ್ಜೆ ಮುಳುಗ್ತು, ಈಗ ಮಂಡಿ ಮುಳುಗ್ತು, ಈಗ ತೊಡೆ, ಸೊಂಟ, ಎದೆ–ಕತ್ತಿಗೂ ಬಂತು. ನುಣ್ಣನೆ ಕಲ್ಲಿನ ಮೇಲೆ ಕಾಲು ಬೇರೆ ಜಾರ್ತಾ ಇರೋದು. ನೀರು ಬೇರೆ ಹೊಡೀತಾ ಇರೋದು. ಅತ್ತ ಇತ್ತ ತತ್ತರಿಸ್ತಾ ಇದ್ದೆ–ಅರ್ಧ ಭಯದಿಂದ, ಎಲ್ಲಿ ಬಿದ್ದು ಬಿಟ್ಟೇನೊ ಅಂತ. ಹಿಡಿದುಕೊಳ್ಳೋದಕ್ಕೆ ಏನೂ ಇಲ್ಲ–ಮರ, ಗಿಡ, ಬಂಡೆ ಗಿಂಡೆ ಏನೂ. ಎರಡು ಕೈಯಿಂದಲೂ ತಲೆ ಮೇಲಿರೋ ಸೌತೆಕಾಯಿ ಬಟ್ಟೆಗಂಟನ್ನು ಹಿಡಿದುಕೊಂಡಿದ್ದೆ. ಅಂತೂ ಕಡೆಗೆ ಹಾಗೆ ಹೀಗೆ ಆಡಿ ಪಲ್ಟಿ ಹೊಡೆದೇಬಿಟ್ಟೆ."

"ಬಿದ್ದೇಬಿಟ್ರಾ–ಧಂ ಅಂತ?"

"ಹೂಂ ಮತ್ತೆ, ಏನು ಮಾಡ್ಲಿ, ನಿಲ್ಲೋದಕ್ಕೆ ಆಗ್ಲೇ ಇಲ್ಲ. ತೇಲಿಕೊಂಡು ಹೊಗ್ತಿದ್ನೇನೋ ಹೊಳೇಲಿ. ಸಧ್ಯ, ವೆಂಕಟಶಾಸ್ತ್ರಿಗಳು ಕಂಡು,

ಈಸಿ ಬಂದು ಮೇಲೆತ್ತಿ ಹಿಡ್ಕೊಂಡ್ರಂತೆ. ಆಗ್ಲೇ ಒಂದು ಸಾರಿ ನೀರು ಕುಡಿದುಬಿಟ್ಟಿದ್ದೆ. ಆದ್ರೆ ಇನ್ನೇನೂ ಹೆಚ್ಚಿನ ಅಪಾಯವಾಗಲಿಲ್ಲ ಅನ್ನು."

"ಸೌತೇಕಾಯೂ ಬಿದ್ದುಹೋಯ್ತಾ?"

"ನೋಡಪ್ಪ, ಅಷ್ಟಾದ್ರೂ, ಸೌತೇಕಾಯಿ ಗಂಟನ್ನು ಮಾತ್ರ ಕೈಬಿಟ್ಟಿರಲಿಲ್ಲ. ಅದು ಹೇಗೋ ಏನೋ, ಬಿಗಿಯಾಗಿ ಹಿಡಿದಿದ್ದೆ. ಅದೇ ಆಶ್ಚರ್ಯ ನಂಗೆ, ಈಗ ನೆನೆಸಿಕೊಂಡರೂ'"

"ಆ ಮೇಲೆ?"

"ಆಮೇಲೆ ಆ ದೊಡ್ಡೋರೇ ನನ್ನ ಕೈ ಹಿಡ್ಕೊಂಡು, ನೀರು ಆಳವಾಗಿದ್ದ ಕಡೆ ಹಾಗೇ ಆ ಪಕ್ಕದಲ್ಲಿ ಒಬ್ರು, ಈ ಪಕ್ಕದಲ್ಲಿ ಒಬ್ರು ಕಂಕುಳು ಹಿಡಿದು ಎತ್ತಿಕೊಂಡು ಅಂತೂ ಹಳ್ಳ ದಾಟಿಸಿದರು ಪಾಪ. ಬದುಕಿದೆಯಾ ಬಡ ಜೀವವೇ ಅಂದ್ಕೊಂಡೆ, ಈಚೆ ದಡ ಸೇರಿದ ಮೇಲೆ. ಅಲ್ಲಿ ಮೈ ಒರೆಸಿಕೊಂಡು ಬಟ್ಟೇನೆಲ್ಲ ಹಿಂಡಿಕೊಂಡು, ಒಂದು ಕೈಯಲ್ಲಿ ಸೌತೇಕಾಯಿ ಅವುಚ್ಕೊಂಡು, ಹಾಗೇ ಬಟ್ಟೆ ಒಣಗಲಿ ಅಂತ ಇನ್ನೊಂದು ಕೈಯಲ್ಲಿ ಹಾರಾಡಿಸ್ತಾ ಹೊರಟೆ ಮುಂದೆ. ಬಟ್ಟೆ ಅಷ್ಟಿಷ್ಟು ಆರಿದ ಮೇಲೆ ಮತ್ತೆ ಉಟ್ಕೊಂಡೆ ಹೊದ್ಕೊಂಡೆ. ಮತ್ತೆ ನಡೆದೂ ನಡೆದೂ, ಆಗ್ಲೇ ಹಿಂದೆ ನನ್ನ ಕಾಲು ಸೋತು ನೊಂದು ಪದ ಹೇಳ್ತಾ ಇತ್ತಲ್ಲ, ಈಗಂತೂ ಮುದಿಸಿಕೊಂಡು ಬೀಳೋ ಹಾಗೇ ಆಗ್ತಾ ಇತ್ತು. ಆದ್ರೂ ನಡೀಲೇಬೇಕಲ್ಲ, ಏನು ಮಾಡೋದು, ಬಂದುಬಿಟ್ಟಿದ್ದೆ. ಹಾಗೇ ಹೋಗ್ತಾ ಹೋಗ್ತಾ ಇರಬೇಕಾದ್ರೆ ಏನಾಯ್ತು ಅಂತೀಯಾ?"

"ಏನು?"



"ಹೋ! ಹೋ! ಹೋ!" ಮುತ್ತಾತ ಹುಲಿಯಂತೆ ಗರ್ಜಿಸಿದರು.

"ಏನ್ ಮುತ್ತಾತಾ ಅದೂ!" ಮಗು ಮುತ್ತಾತನನ್ನು ಭಯದಿಂದ ಅಪ್ಪಿಕೊಂಡು ಅವರ ಮುಖವನ್ನು ಗಾಬರಿ ಕಣ್ಣಿನಿಂದ ನೋಡುತ್ತ ಕೇಳಿದ.

"ಹಾಗೆ ಹೋ ಹೋ ಅಂತ ಗರ್ಜಿಸೋದು ಏನು ಹೇಳು? ಜೂ ಗಾರ್ಡ್‌ನ್‌ನಲ್ಲಿ ನೋಡಿ-ದೀಯಲ್ಲಾ."

"ಹುಲೀನಾ?"

"ಹೂಂ!"

"ಹುಲಿ ಬಂದುಬಿಡ್ತಾ-ತಿನ್ನೋಕೆ?"

"ಉಹುಂ. ಸೂರ್ಯ ಇಳೀತಾ ಇದ್ದ, ಸಂಜೆ ಆಗ್ತಾ ಇತ್ತು, ಹಕ್ಕಿಗಳು ಮರ ಸೇರಿಕೊಂಡು ಗಲಾಟೆ ಮಾಡ್ತಾ ಇದ್ವು, ಪ್ರಾಣಿಗಳು ನೀರು ಕುಡಿಯೋದಕ್ಕೆ ಹಳ್ಳಕ್ಕೆ ಹೋಗೋ ಹೊತ್ತು. ಆಗ ಕೇಳಿಸ್ತು, ಹುಲಿ, ಗರ್ಜನೆ, ದೂರದಲ್ಲಿ, ಬಲಗಡೆ ಗುಡ್ಡದಿಂದ. ಇಗೊ, ನೀನು ಹೇಗೆ ನನ್ನ ಅಪ್ಪಿಕೊಂಡ್ಯೋ ಹಾಗೇ ನಾನು ಮುಂದೆ ಓಡಿ-ಹೋಗಿ ಶಾಂಭಟ್ರ ಕೈಯನ್ನು ಹಿಡ್ಕೊಂಡೆ ಬಲವಾಗಿ. ಅವರು 'ಓಹೋ ಹುಲಿರಾಯ ಸವಾರಿ ಹೊರಟಾಗಿದೆ. ಶಿಕಾರಿಗೆ. ಎಲ್ಲೋ ಹೊಸದುರ್ಗದ ಕಡೆಯಿಂದ್ಲೋ ಎಲ್ಲಿಂದ್ಲೋ ಬಂದಿರಬೇಕು, ಆಗಾಗ ಬರೋ ಹಾಗೆ. ಎಷ್ಟು ದಿನ ಆಗಿದೆಯೋ ಬಂದು. ಇವತ್ತು ಯಾವ ಪ್ರಾಣಿಗೆ ಬಂದಿದೆಯೋ ಆಪತ್ತು. ಎತ್ತ ಕಡೆ ಹೊರಟಿದಾನೋ ಏನೋ ಮಹಾರಾಯ. ಇತ್ತ ಕಡೆಯೇ ದಯಮಾಡಿಸ್ದೇ ಇದ್ರೆ ಸಾಕು ಸಧ್ಯ. ಇನ್ನೂ ದೂರದಲ್ಲಿದ್ದಾನೆ, ಏನಿಲ್ಲಾಂದ್ರೂ ಅರ್ಧ ಕೂಗಳತೆ' ಅಂತ ಅಂದು ನನ್ನನ್ನೂ ಎಳಕೊಂಡು ವೇಗ ವೇಗ ಹೆಜ್ಜೆ ಹಾಕಿದರು. ಹುಲಿ ಗರ್ಜನೆ ಹತ್ರ ಹತ್ರ ಆಗ್ತಾ ಇತ್ತು. ಶಾಂಭಟ್ರು ಆ ಕಡೇನೇ ನೋಡ್ತಾ 'ಅಲ್ಲಿ ನೋಡಿ, ಹಕ್ಕಿಗಳು ಕೂಗ್ತಾ ಮರದಿಂದ ಮೇಲೆ ಹಾರ್ತಾ ಇರೋದು. ಅಲ್ಲಿ ಬರ್ತಾ ಇರಬೇಕು ಹುಲಿ, ಮರದ ಕೆಳಗೆ. ಇಗೊ, ಇನ್ನೊಂದು ಅದಕ್ಕಂತ ಹತ್ತಿರದ ಮರದಿಂದ್ಲೂ ಹಾರ್ತಾ ಇವೆ. ಅಂದ್ರೆ ಹುಲಿ ಈ ದಿಕ್ಕಿನಲ್ಲೇ ಬರ್ತಾ

ಇದೆ. ಅಂತ ಆಯ್ತು' ಅಂತ ಅಂದ್ರು."

"ಹುಲಿ ಬಂದೇ ಬಿಡ್ತಾ? ಹಿಡ್ಕೊಂಡು ಬಿಡ್ತಾ— ತಿನ್ತೀನಿ ಅಂತ?"

"ಕೇಳು, ಸ್ವಲ್ಪ ಕೇಳ್ತಾ ಇರು ಹೇಳೋದನ್ನ... ಹುಂ, ಹಾಗೆ ಬೇಗ ಬೇಗ ಅಷ್ಟು ದೂರ ಹೋಗಿದ್ವೋ ಇಲ್ವೋ, ಅಲ್ಲೇ ಕಾಲ್ದಾರಿಗೆ ಹತ್ತಿರವಾಗಿ ಹುಲ್ಲು ಮಲಗಿದ ಜಾಗದಲ್ಲಿ ಒಂದು ದೊಡ್ಡ ಸಾರಂಗ, ಅಂದ್ರೆ ಗಂಡು ಜಿಂಕೆ, ಬಿದ್ದಿತ್ತು ಸತ್ತು, ಹಿಂಭಾಗವೆಲ್ಲ ಅರ್ಧದಷ್ಟು ತಿಂದು ಹೋಗಿದ್ದು."

"ಹುಲಿ ತಿಂದ್‌ಬಿಟ್ಟಿತ್ತಾ?"

"ಹುಂ, ಇನ್ನೇನು ಅಂತೀಯೆ. ಹದ್ದು ಕಾಗೇನೂ ಅಷ್ಟಿಷ್ಟು ಕುಕ್ಕಿ ತಿಂದಿರಬೇಕು ಅನ್ನು. ಶಾಂಭಟ್ರು, 'ಓಹೋ, ಒಳ್ಳೆ ಹೀಕ್ಲಾಟಕ್ಕೇ ಬಂತಲ್ಲ, ಇದನ್ನು ತಿನ್ನೋಕೇ ಬರ್‍ತಾ ಇದ್ರೂ ಇರಬಹುದು, ನಿನ್ನೆ ಶಿಕಾರಿ ಮಾಡಿ ಅರ್ಧ ತಿಂದಿದ್ದನ್ನು. ನಡೀರಿ ನಡೀರಿ ಆ ಆಲದಮರಕ್ಕೆ. ಜಾಸ್ತಿ ಪುರುಸತ್ತಿಲ್ಲ, ಸಾಕಾದಷ್ಟು ದೂರ ಹೋಗೋಕೆ' ಅಂತ ಅಂದ್ರು. ನಾವು ಸ್ವಲ್ಪ ದೂರದಲ್ಲಿದ್ದ ಆ ದೊಡ್ಡ ಮರಕ್ಕೆ ಹೋದ್ವು. ಮರದ ಬುಡ ಅಷ್ಟು ದೊಡ್ಡದಾಗಿದ್ದು ನಂಗೆ ತಬ್ಕೋಳ್ದಕ್ಕಾಗದೆ ಇದ್ರೆ, ಕೈಯಲ್ಲಿ ಸೌತೇಕಾಯಿ ಇಲ್ದೆ ಇದ್ರೆ, ನಾನೇ ಮರ ಹತ್ತಿ ಬಿಡ್ತಾ ಇದ್ದೆ. ಈಗ ಶಾಂಭಟ್ರು ನನ್ನ ತೊಡೆ ಹಿಡಿದು ಎತ್ತಿಕೊಟ್ರು, ಶಾಸ್ತ್ರಿಗಳು ಮೇಲಕ್ಕೆ ಎಳೆದುಕೊಂಡ್ರು. ನನ್ನ ಪಕ್ಕೆ ಕೊಂಚ ಮರಕ್ಕೆ ತಗಲಿ ತರೀತು, ಉರೀತು, ರಕ್ತ ಒಸರ್‍ತು ಅಷ್ಟೇ, ಪೆಟ್ಟಾಗಲಿಲ್ಲ. ಕಲೆ ಮಾತ್ರ ಇನ್ನೂ ಕೊಂಚ ಇದೆ ಅನ್ನು— ಎಡ ಕಿಬ್ಬೊಟ್ಟೆ ಮೇಲೆ. ನಾವೆಲ್ಲ ಎತ್ತರದ ಕೊಂಬೆ ಮೇಲೆ ಕೂತು ನೋಡ್ತಾ ಇದ್ವು ಆ ಜಿಂಕೆ ದಿಕ್ಕಿನಲ್ಲೆ, ಅದು ಕಾಣ್ದೇ ಇದ್ರೂ. ಅಷ್ಟು ಹೊತ್ತಾಯ್ತು, ಇಷ್ಟು ಹೊತ್ತಾಯ್ತು, ಹಾಗೇ ನೋಡ್ತಾ ಇದ್ವು. ಶಾಂಭಟ್ರು, 'ಏನೊ, ದೂರ ಹೋಗೇ ಬಿಡಬಹುದಾಗಿತ್ತೇನೋ' ಎಂದು ಮೆಲ್ಲಗೆ ಪಿಸಿಗುಟ್ಟಿಕೊಂಡ್ರು. ಆದ್ರೆ ಆಗ ಮರ ಇಳಿಯೋದಕ್ಕೆ ಧೈರ್ಯ ಎಲ್ಲಿ..."

"ಇಳ್ದಿದ್ರೆ, ಹುಲಿ ಹಿಡ್ಕೊಂಡು ಕಚ– ಕಚ– ಕಚ– ಅಂತ ತಿಂದ್ ಬಿಡ್ತಾ ಇತ್ತು ಅಲ್ವಾ— ಆ ಜಿಂಕೇನ ತಿಂದ ಹಾಗೆ?"

"ಹೂಂ, ಏನಾಗ್ತಾ ಇತ್ತೋ. ನಾವು ಇಳಿದಿದ್ರೆ, ತಾನೆ?"

"ಆಮೇಲೆ ಹುಲಿ ಬಂತಾ?"

"ಹೂಂ, ಅದೂ ಎಲ್ಲೋ ನಮ್ಮ ಸುಳಿವು ತಿಳಿದು ತಡೆದು ನಿಂತು ನಡೆದು ಎಚ್ಚರಿಕೆಯಿಂದ ಬರ್‍ತಾ ಇತ್ತು ಅಂತ ಕಾಣುತ್ತೆ— ಶಾಂಭಟ್ರು ಆಮೇಲೆ ಹೇಳಿದ ಹಾಗೆ. ಅಂತೂ ಇನ್ನಷ್ಟು ಹೊತ್ತಾದ ಮೇಲೆ ಎತ್ತರದ ಹುಲ್ಲಿನ ಮಧ್ಯೆ ಸರಸರಾ ಅಂತ ಶಬ್ದ ಕೇಳಿಸಿ ಏನೋ ನಿಂತು ನಿಂತು ಮೆಲ್ಲಗೆ ಹಾದುಹೋಗ್ತಾ ಇದ್ದ ಹಾಗೆ ಕಾಣಿಸ್ತು. ಕೆಂದು ಕಪ್ಪು ಪಟ್ಟೆಗಳೂ, ಹುಲಿ ಮೈಯಿದು. ಒಂದು ಸಾರಿ ಎತ್ತಿದ್ದ ದೊಡ್ಡ ಭಯಂಕರ ತಲೆ, ಉದ್ದನೆ ಮೀಸೆ, ಉದ್ದ ಉದ್ದ ಕೋರೆದಾಡೆ ಹಲ್ಲು, ಕಾಡಿನ ಅಷ್ಟು ಮಂಕು ಕತ್ತಲೇಲೇ ದೀಪದ ಹಾಗೆ ಎರಡು ಕೆಂಗಣ್ಣೂ ನಂಗೆ ಕಾಣಿಸಿದ ಹಾಗೆ. ಅಯ್ಯಪ್ಪ, ಅದೇನು ನಿಜವೇಯೋ, ಬರಿ ನನ್ನ ಊಹೆಯೋ ಹೇಳೋ ಹಾಗಿಲ್ಲ ಅನ್ನು."

"ಆ ದಪ್ಪ ತಲೆ ಹುಲಿ ಹೀಗೆ ಹಲ್ಲು ಕಿರ್‍ಕೊಂಡು ಹೀಗೆ ಕಣ್ಣು ಅಗಲ್ವಾಗಿ ಬಿಟ್ಕೊಂಡು ನಿನ್ನ ಕಡೇಗೇ ನೋಡ್ತಾ ಇತ್ತಾ-ದುರುಗುಟ್ಕೊಂಡೂ?" ಮಗು ಹಲ್ಲು ಕಿರಿದು ಕಣ್ಣು ಬಿಟ್ಟು ತೋರಿಸುತ್ತ ಕೇಳಿದ.

"ಹೂಂ, ಇರಬಹುದು, ಇಲ್ಲದೇನೂ ಇರಬಹುದು."

"ಆಮೇಲೆ?"

"ಆಮೇಲೆ, ಅಲ್ಲಿ ಬಿದ್ದಿತ್ತಲ್ಲ, ಸತ್ತ ಜಿಂಕೆ, ಆ ದಿಕ್ಕಿನಿಂದ ಗುರ್, ಗುರ್, ಕಟಂ ಕಟಂ ಕರಂ ಕರಂ ಅಂತ ಹುಲಿ ತಿನ್ನೋ ಶಬ್ದ ಬಹಳ ಹೊತ್ತು ಕೇಳಿಸ್ತಾ ಇತ್ತು."

"ಕಟಂ ಕಟಂ ಕರಂ ಕರಂ ಅಂತ ತಿನ್ತಾ ಇತ್ತಾ ಹುಲೀ– ನಾನು... ಚಕ್ಲಿ ತಿನ್ನೋ ಹಾಗಾ?"

"ಹೂ, ಜಿಂಕೆದು ಮೂಳೆ ಕಟಂ ಕಟಂ ಅಂತ ಕಡಿದು, ಕಡಿದು ಕರಂ ಕರಂ ಅಂತ ಅಗಿದು ನುಂಗ ಬೇಕಲ್ಲ ಮಾಂಸದ ಜತೆಗೆ."

"ಹುಲಿ ಗುರ್ ಗುರ್ ಅಂತ ಯಾಕೆ ಅನ್ತಾ-

ಇತ್ತು ಮುತ್ತಾತಾ?"

"ಯಾರಾದ್ರೂ ಹತ್ರ ಬಂದೀರಿ, ಕಿತ್‌ಗಿತ್-ಕೋಂಡೀರಿ ಜೋಕೆ ಅಂತ ಹೆದರಿಸ್ತಾ ಇತ್ತೇನೋ, ಬಾಯಿಗೆ ಆಯವಾಗಿ ಮಾಂಸ ಮೂಳೆ ಸಿಕ್ಕಿದ್ದೇ ಇದ್ರೆ ಹುಲಿಗೆ ಸಿಟ್ಟು ಬರ್ತಾ ಇತ್ತೇನೋ, ಅದಕ್ಕೇ ಗುರ್ ಗುರ್ ಅನ್ತಾ ಇತ್ತು. ಅವತ್ತು ನಿನ್ನ ಟೈಗರ್ ನಾಯಿ ಗುಬ್ಬಚ್ಚೀನ ತಿನ್ತಾ ಇದ್ದಾಗ ಮಾಡ್ತಿತ್ತಲ್ಲ ಹಾಗೆ"

"ಹುಂ ಹುಂ. ಹೌದು... ಆಮೇಲೆ?"

"ಆಮೇಲೆ ಆ ಶಬ್ದ ನಿಂತುಹೋಯ್ತು. ಮತ್ತೆ ಹುಲ್ಲಿನಲ್ಲಿ ಸರಸರ ಅಂತ ಕೇಳಿಸ್ತು."

"ಹುಲಿ ನಿನ್ಕಡೆ ಬರ್ತಾ ಇತ್ತಾ— ನಿನ್ನೂ ತಿನ್ನೋಕೆ?

"ಇಲ್ಲ, ಬೇರೆ ದಿಕ್ಕಿಗೆ ಹೋಯ್ತು ಅನ್ನಿಸ್ತು."

"ಮರದಿಂದ ಇಳಿದ್‌ಬಿಟ್ಯಾ?"

"ಛ್ಹ! ಅಗ್ಲೇ ಇಳಿದು ಬಿಡೋಕಾಗುತ್ತಾ ಮರೀ? ಹುಲಿಯ ಸಹವಾಸ, ಹೇಗೋ ಏನೋ, ಎಲ್ಲಿ ಹುಲ್ಲಿನಲ್ಲಿ ಅವಿತುಕೊಂಡು ಕೂತಿರ್ತಾ ಇತ್ತೋ ಕಾಯ್ತಾ. ನಿಜವಾಗಿ ದೂರ ಹೋಯ್ತು ಅಂತ ಖಚಿತ ಮಾಡಿಕೋಬೇಕೋ ಇಲ್ವೋ?"

"ಮಾಡ್ಕೊಬೇಕು."

"ಸರಿ ಮತ್ತೆ. ಶಾಂಭಟ್ರು 'ಸದ್ಯ, ಹೋದ ಅಂತ ಕಾಣಿಸುತ್ತೆ, ಮಹಾರಾಯ, ಹಳ್ಳದ ನೀರು ಕುಡಿಯೋಕೆ. ಇನ್ನು ಇಳಿಯೋಣ' ಅಂತ ಪಿಸಿಮಾತಿನಲ್ಲಿ ಕೇಳಿದ ಮೇಲೆ ನಾವು ಮರದಿಂದ ಇಳಿದದ್ದು. ಆ ಮೇಲೂ ಭಟ್ರು ಹೇಳಿದ ಹಾಗೆ ಶಬ್ದ ಮಾಡದೆ ಹೆಜ್ಜೆ ಮೇಲೆ ಹೆಜ್ಜೆ ಹಾಕ್ತಾ ಸ್ವಲ್ಪ ದೂರ ನಡೀತಾ ಇದ್ವಿ."

"ಹುಲಿ ಹಿಡ್ಕೊಳ್‌ಲಿಲ್ವಾ?"

"ಇಲ್ಲ."

"ಆಮೇಲೆ ಒಂದು ಸಿಂಹ ಸಿಕ್ತಾ?"

"ಇಲ್ಲ ಸದ್ಯ."

"ಆಮೇಲೆ ಅಮ್ಮನ ಊರು ಸಿಕ್ತಾ?"

"ಹುಂ... ಹ್ಞಾ ಮರೆತೆ— ಅದಕ್ಕೆ ಮುಂಚೆ ಇನ್ನೊಂದು ಸಣ್ಣ ವಿಚಾರ ಮಾತ್ರ ನಡೀತು, ಕಾಳಿಂಗಂದು."

"ಕಾಳಿಂಗಂದು ಅಂದ್ರೆ?"

"ಕಾಳಿಂಗ ಅಂದ್ರೆ, ಕಾಳಿಂಗ ಸರ್ಪ. ನಮ್ಮ ಕಡೆ ಕಾಡುಗಳಲ್ಲಿ ಇರುತ್ತೆ. ಭಾರಿ ಹಾವು. ಈ ರೂಪು ಇದೆಯಲ್ಲ ಹರಿಸ್ಯನು ಅದಿ, ಇದಕ್ಕೂ ಉದ್ದವಾಗಿರುತ್ತೆ ಒಂದೊಂದು. ಕಪ್ಪಗಿರುತ್ತೆ. ಭಾರಿ ಹೆಡೆ..."

"ಕಾಳಿಂಗ ಸರ್ಪ ಅಂದ್ರೆ ನಂಗೆ ಗೊತ್ತು. ಕೃಷ್ಣ ತುಳಿದ್ನಲ್ಲ ಅಂಥಾದಾ?"

"ಹುಂ, ಆದ್ರೆ ಅಷ್ಟೊಂದು ಹೆಡೆ ಇರೋದಿಲ್ಲ, ಒಂದೇ."

"ಕಾಳಿಂಗ ಸರ್ಪ ಬಂದು ನಿನ್ನ ಕಚ್ಚಿ ಬಿಡ್ತಾ?"

"ಕಚ್ಚಿಬಿಟ್ಟಿದ್ರೆ, ನಿನ್ನ ಮುತ್ತಾತಾನೂ ಇರ್ತಾ ಇರಲಿಲ್ಲ. ಮರಿಮಗ ನೀನೂ ಇರ್ತಾ



ಇರಲಿಲ್ಲ— ಹುಟ್ತಾಲೇ ಇರಲಿಲ್ಲ. ಛ್ಹ! ಅದು ಕಚ್ಚಿತು ಅಂದ್ರೆ ಆಗೇ ಹೋಯ್ತು, ಅಲ್ಲೇ ಆ ಕ್ಷಣದಲ್ಲೇ ಬಿದ್ದು ಬಾಯಿ ಜೊಲ್ಲು ನೊರೆ ಬಂದು ಫಿನಾ!"

"ಅಂದ್ರೆ ಸತ್ತೋಗೋದು— ಹಾ ಅಂತ."

"ಹುಂ. ಅಂಥ ಹಾವು ಏನು ಮಾಡುತ್ತೆ ಅಂದ್ರೆ ಮರದ ಕೊಂಬೆಗಳಿಂದ ಜೋತು ಬಿದ್ದಿರುತ್ತಂತೆ. ಏನಾದ್ರೂ ಸಣ್ಣ ಪ್ರಾಣಿ, ಸಣ್ಣ ಮೊಲಗಿಲ ಅಂಥಾದ್ದು ಇಂಥಾದ್ದು ಕೆಳಗೆ ಕಾಣಿಸ್ತು ಅಂದ್ರೆ ಧುಪ್ ಅಂತ ಅದರ ಮೇಲೆ— ಹೆಬ್ಬಾವಿನ ಹಾಗೆ— ಬಿದ್ದು, ಸುತ್ತಿಕೊಂಡು ಕಚ್ಚಿ ಸಾಯಿಸಿ ನುಂಗಿ ಬಿಡುತ್ತಂತೆ. ಮನುಷ್ಯರೋ ಜಾನುವಾರೋ ಕೆಳಗೆ ಹೋಗ್ತಿದ್ರೆ, ತೂಗಾಡ್ತಾ ಇರೋ ಹಾವು ಹಾಗೇ ಜೋರಾಗಿ ಬೀಸಿ ಕಚ್ಚಿಬಿಡುತ್ತಂತೆ. ಅದೇನೋ

ಒಬ್ಬೊಬ್ರು ಒಂದೊಂದು ತರಹ ಹೇಳ್ತಾರೆ ಅನ್ನು, ನಿಜ ನಂಗೆ ಸರಿಯಾಗಿ ಗೊತ್ತಿಲ್ಲ. ಆಗಂತೂ ಆ ವಿಚಾರಾನೇ ಗೊತ್ತಿರಲಿಲ್ಲ. ಆದ್ರೆ ಆಗ ನಡೆದದ್ದು ಹೇಳ್ತೀನಿ ಕೇಳು. ನಾವು ಮೆಲ್ಲಗೆ ಸದ್ದಿಲ್ದೆ ಸುಮಾರಾದ ಕತ್ತಲೇಲಿ ಹೋಗ್ತಾ ಇದ್ವೋ ಇಲ್ವೋ, ನಾನು ಯಥಾ-ಪ್ರಕಾರ ಹಿಂದೆ ಬಿದ್ದಿದ್ದೆ. ಮೊದ್ಲೇ ಅವರದ್ದು ಉದ್ದನೆ ಕಾಲು ನಡಗೆ, ನನ್ನದು ಚೋಟು ಕಾಲು. ಈಗಂತೂ ಮುಂದೆ ನಡೆಯೋದಕ್ಕೇ ಆಗೋದಿಲ್ಲ ಅನ್ನೋ ಅಷ್ಟು ನೋವು, ಹೇಗೋ ಕಾಲು ಎಳೆದೂ ಎಳೆದೂ ಹಾಕ್ತಾ ಇದ್ದೆ – ಅಪ್ಪನ್ನ ನೆನಸಿಕೊಂಡು ನೆನಸಿಕೊಂಡು. ಇಲ್ದೆ ಇದ್ರೆ ಆಗ್ತಾಲೇ ಇರಲಿಲ್ಲವೇನೋ. ಅಂದ ಮೇಲೆ ಸುಮಾರಾಗೇ ಹಿಂದೆ ಬಿದ್ದಿದ್ದೆ ಅನ್ನು. ಆ ದೊಡ್ಡೋರಿಗಿಂತ. ಅವರ ಜತೆ ಸೇರಿಕೋಬೇಕು ಅಂತ ಇದ್ದಬಿದ್ದ ಬಲಾನೆಲ್ಲ ಬಿಟ್ಟು ಆದಷ್ಟು ಬೇಗ ನಡೆಯೋಕೆ, ಓಡೋಕೆ ಶುರು ಮಾಡಿ ಹೋಗ್ತಾ ಇದ್ದೆ. ಆಗ ಏನಾಯ್ತು ಅಂತೀಯಾ ?"

"ಏನೂ ? ಹುಲಿ ಮತ್ತೆ ಬಂತಾ ?"

"ಉಹುಂ, ಉಹುಂ, ಹುಲಿ ಹೊರಟೇ ಹೋಗಿತ್ತಲ್ಲ."

"ಮತ್ತೇ ?" ಮಗು ಮುತ್ತಾತನ ತೊಡೆಯು ಮೇಲೇ ಇನ್ನೂ ಹತ್ತಿರ ಸರಿದುಕೊಂಡ,

"ನನ್ನ ಬೆನ್ನಿನ ಹಿಂದೇ ಧಾಪ್ ಅಂತ ಶಬ್ದ ಕೇಳಿಸ್ತು..."

"ಆಂ !"

"ಅಷ್ಟು ಹೆದರ್ಕೋಬೇಡ."

"ಅದೇನು ಮುತ್ತಾತಾ, ಧಾಪ್ ಅಂತಲ್ಲ ?"

"ಕೇಳು, ಹೇಳ್ತೀನಿ. ಏನೋ ಭಾರವಾದ್ದು ಮೇಲ್ಗಡೆಯಿಂದ ನೆಲಕ್ಕೆ ಬಿದ್ದ ಹಾಗೆ."

"ದೆವ್ವಾನಾ, ಪಿಶಾಚೀನಾ, ಸರ್ಪಾನಾ ?"

"ಅದೇನು ಅಂತ ಹಿಂತಿರುಗಿ ನೋಡುವಷ್ಟ-ರಲ್ಲೇ ಶಾಂಭಟ್ರು. 'ಓಡು ! ಓಡು ! ಮುಂದೆ ಎಲ್ಲಿಗಾದ್ರೂ !' ಅಂತ ಕೂಗಿಕೊಂಡದ್ದು ಕೇಳಿಸ್ತು. ನಾನು ಏನೂ ಯೋಚಿಸದೇನೇ ಕಂಪಿಕಿತ್ತ ದಿಕ್ಕಾಪಾಲಾಗಿ– ಅದೆಲ್ಲಿತ್ತೊ ನಂಗೆ ಅಷ್ಟು ಶಕ್ತಿ ಇನ್ನೂ. ಪ್ರಾಣಭಯ ಅಂದ್ರೆ ಬರುತ್ತೇನೋ."

"ಅವ್ರು ಎಲ್ಲ ಓಡಿ ಹೋಗಿಬಿಟ್ರು ?"

"ಯಾರು ನೋಡಿದೋರು ಅವರನ್ನು. ನನ್ನ ಪಾಡಿಗೆ ನಾನು ಓಡ್ತಾ ಇದ್ದೆ. ಆಮೇಲೆ ಎಷ್ಟೋ ದೂರ ಹೋಗಿ ಇನ್ನೂ ಓಡಲಾರದೆ ನಿಂತು ನೋಡ್ತೀನಿ, ಅವರೆಲ್ಲೂ ಕಾಣಿಸ್ತಾನೇ ಇಲ್ಲ, ಎಷ್ಟೆಷ್ಟು ನೋಡಿದ್ರೂ. ಮಂಗರ ಮಾಯ ಆಗಿಬಿಟ್ಟಿದ್ರು. ಕತ್ತಲು ಬೇರೆ. 'ಶಾಂಭಟ್ರೇ ! ಶಾಂಭಟ್ರೇ !' ಅಂತ ಜೋರಾಗಿ ಕೂಗಿಕೊಂಡೆ. ಎಡಗಡೆಯಿಂದ 'ಹೋಯ್ ! ಹೋಯ್ ! ಇಲ್ಲಿ ಬಾ !' ಅಂತ ದೂರದಿಂದ ಕೇಳಿಸ್ತು. ಆ ದಿಕ್ಕಿನಲ್ಲೇ 'ನಿಂತ್ಕೊಳ್ಳಿ ! ಬಂದೆ ! ಬಂದೆ !' ಅಂತ ಕೂಗ್ತಾ ಹೋಗಿ ಅವರನ್ನು ಸೇರಿಕೊಂಡೆ. ಹೋಗಿದ್ದ ಜೀವ ಮತ್ತೆ ಬಂದ ಹಾಗಾಯ್ತು. ಶಾಂಭಟ್ರು ನನ್ನನ್ನು ನೋಡಿ, 'ನೀನು ಇವತ್ತು ಬಲ ಮಗ್ಗುಲಲ್ಲಿ ಎದ್ದಿದ್ದೆ, ಬದುಕಿಕೊಂಡೆ. ಅದೃಷ್ಟ ಚೆನ್ನಾಗಿತ್ತು. ಇಲ್ದೆ ಇದ್ರೆ ಹಾಗೆ ಕಾಳಿಂಗ ಇನ್ನೇನು ಮೇಲೇ ಬಿದ್ದೂ ತಪ್ಪಿಸಿಕೊಳ್ಳೋದು ಅಂದ್ರೇ !' ಅಂತ ಆ ಕಾಳಿಂಗ ಸರ್ಪದ ವಿಚಾರನ– ನಾನು ಆಗ್ಲೇ ನಿಂಗೆ ಹೇಳಿದ್ನಲ್ಲಾ ಅಂಥಾದ್ದನ್ನು ಹೇಳ್ತಾ ನಡೆದರು, ಮುಂದೆ ಮುಂದೆ. ನಾನು ಆಮೇಲೆ ಅವರ ಜತೆ ಬಿಡಲೇ ಇಲ್ಲ."

"ಆಮೇಲೆ ಹಾವು ಹರ್ಕೊಂಡು ಹೊರಟು ಹೋಯ್ತಾ ?"

"ಯಾರಿಗೆ ಗೊತ್ತಪ್ಪಾ. ಅದನ್ನು ಯಾರು ನೋಡಿದರು. ಧೈರ್ಯ ಅಷ್ಟು ಎಲ್ಲಿತ್ತು– ತಪ್ಪಿಸಿಕೊಂಡರೆ ಸಾಕು ಅಂತ ಇರೋವಾಗ."

"ಹಾವು ನಿನ್ ಹತ್ರಾನೇ ಯಾಕ್ ಬಿತ್ತು ಮುತ್ತಾತಾ ಧಾಪ್ ಅಂತಾ ?"

"ಏನೋ. ನಾನೂ ಒಂದು ಪುಟ್ಟ ಪ್ರಾಣಿ ಅಂತಾಲೇ ಮೈಮೇಲೆ ಬೀಳೋದಕ್ಕೆ ಹೋಗಿ ನಾನು ಕೂದಲೆಳೇಲಿ ತಪ್ಪಿಸಿಕೊಂಡೆನೋ ಹೇಗೊ," ಮುತ್ತಾತ ನಕ್ಕರು. "ಅಥವಾ ಶಾಂಭಟ್ರು ಹೇಳಿದ ಹಾಗೆ ಅದೆಲ್ಲೋ ಹೊಟ್ಟೆಗೆ ಏನೋ ತಿಂದು ಕೊಂಬೆ ಮೇಲೆ ಹರೀತಾ ಜಾರಿ ಬಿದ್ದಿರಬಹುದು. ಒಂದೊಂದು ಸಲ ಹಾಗೂ ಆಗುತ್ತಂತಲ್ಲ. ಶಾಂಭಟ್ರು ಇನ್ನೂ ಏನಂ-

ದ್ರ್ರೋದ್ರೆ, ಅದು ಹಾಗೆ ತಿಂದಿದ್ದರಿಂದಲೇ ಹೊಟ್ಟೆ ಭಾರ ಆಗಿ ಚುರುಕಾಗಿರಲಿಲ್ಲ, ಅಟ್ಟಿಸಿಕೊಂಡೂ ಬರಲಿಲ್ಲ. ಇಲ್ದೆ ಇದ್ರೆ ನನ್ನ ಆಟ ಆಗಿಹೋಗ್ತಾ ಇತ್ತು ಅಂತ."

"ಆಮೇಲೆ ಇನ್ನೊಂದು ಕಾಳಿಂಗ ಸರ್ಪ ಬಿತ್ತಾ, ಧ್ಯಾಪ್ ಅಂತ, ನಿನ್ ಮೇಲೆ ?"

"ಇಲ್ಲ–ಸದ್ಯ ಇಲ್ಲಾಪ್ಪಾ, ಇನ್ನಷ್ಟು ದೂರ ನಡೆದ ಮೇಲೆ ಆ ದೊಡ್ಡ ಕಾಡೇ ಆಗಿಹೋಯ್ತು."

"ಅಮ್ಮನೂರು ಸಿಕ್ಕಿಬಿಡ್ತಾ?"

"ಹುಂ ಅನ್ನು. ಕಾಡಾದ ಮೇಲೆ ಸ್ವಲ್ಪ ದೂರ ಬಯಲು, ಅದಾದ ಮೇಲೆ ಗದ್ದೆ ಬಯಲು. ಗದ್ದೆ ಬದುವಿನ ಮೇಲೆ, ಅಂದ್ರೆ ಸುತ್ತ ಕಟ್ಟಿದ್ದ ದಿಂಡಿನ ಮೇಲೆ, ನಡೆದು ದಾಟಿದರೇ ಅಮ್ಮ ಇದ್ದೂರು. ಊರು ಬಂತೋ ಇಲ್ವೋ ಶಾಂಭಟ್ರಿಗೆ ಹೇಳಿ ಅಮ್ಮನ ಮನೆಗೆ, ಅಂದ್ರೆ ನಮ್ಮ ಸೋದರಮಾವನ ಮನೆಗೆ, ಓಡಿದೆ–ಅಂಥ ಕಾಲು ನೋವು ನಿಂತೇ ಹೋಗಿತ್ತೇನೋ ಅನ್ನೋ ಹಾಗೆ. ಅದು ಆಗ ಗೊತ್ತಾಗಿದ್ರಲ್ವೆ."

"ಅಮ್ಮ ನಿನ್ನ ಕಂಡು ಓಡಿಬಂದು ಎತ್ಕೊಂಬಿಟ್ರಾ?"

"ಊಹ್ಞು ! ನಂಗೆ ಎತ್ತಿಸಿಕೊಳ್ಳೋ ವಯಸ್ಸು ಆಗಿಹೋಗಿತ್ತಲ್ಲ ಮರೀ, ಅಲ್ದೆ ಆಗ ತೀರ ಚಿಕ್ಕ ಮಕ್ಕಳನ್ನೇ ಎತ್ಕೋತಾ ಇದ್ದದ್ದು."

"ಮತ್ತೆ, ನೀನೇ ಓಡಿಹೋಗಿ ಅಮ್ಮನ್ನ ತಬ್ಕೊಂಬಿಟ್ಯಾ ಬಲವಾಗಿ ?"

"ಹಾಗೂ ಮಾಡೋಣಾಗಿರಲಿಲ್ಲ. ಅಮ್ಮ ಮಡಿ ಹೆಂಗಸು, ಮಡೀಲಿ ಇರ್ತಾ ಇದ್ರು."

"ಮತ್ತೆ, ನೀನೇನ್ ಮಾಡ್ದೆ?"

"ಓಡಿ ಹೋದ್ನಲ್ಲ. ನಮ್ಮ ಮನೆ ಹಳೇ ಹಂಚು, ಮಣ್ಣಿನ ಗೋಡೆ, ಎತ್ತರ ಜಗಲೀದು. ಹೋದೋನೇ ಒಂದೇ ಸಮ ಹಾರಿಹಾರ್ತಾ ಮೆಟ್ಟಿಲು ಹತ್ತಿಹೋದೆ. ಬಾಗಿಲಿಗೆ ಹೋದ ಕೂಡ್ಲೆ ಅಮ್ಮ ಅಲ್ಲೇ ಹಜಾರದಲ್ಲಿ ಕಂಡ್ರು–ಸೀರೆಯುಟ್ಟು ಬುಡ್ಡಿ ಜಳಕಿಸಲ್ಲಿ: ದೇವರಿಗೆ ಹೂಬತ್ತಿ, ಗೆಜ್ಜೆವಸ್ತ್ರ ಮಾಡ್ತಾ ಕೂತ್ಕೊಂಡಿದ್ರು. 'ಅಮ್ಮಾ! ಬಂದೇ!' ಅಂತಾನೇ ಆತುರದಿಂದ ಒಳಕ್ಕೆ ನುಗ್ಗಿದೆ. ಕಾಲು ಎತ್ತರದ ಹೊಸ್ತಿಲಿಗೆ ತಾಗಿ ಧಡಾರ್ ಅಂತ ಅನಾಮತ್ತು ಬಿದ್ದುಬಿಟ್ಟೆ, ದೇವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ ಹಾಗೆ. ಹಜಾರದ ಕಲ್ಲು ಮಣ್ಣಿನ ಸಗಣಿ ಸಾರಿಸಿದ ಉಬ್ಬು ತಗ್ಗು ಒರಟು ನೆಲದ ಮೇಲೆ. ಅವುಚಿಕೊಂಡಿದ್ದ ಸೌತೆಕಾಯಿ ಬಿದ್ದು ಒಡೆದು ಚೂರಾಯ್ತು. ಆದ್ರೂ ಕೂಡ್ಲೇ ಮೇಲೆದ್ದು ಸೌತೆಕಾಯಿ ಚೂರು ಆರಿಸಿಕೊಂಡು ಜೋಡಿಸ್ತಾ, 'ಅಮ್ಮಾ ನಿಂಗೆ ತಂದೆ, ಇಗೊ. ನಿಂಗೆ ಇಷ್ಟ ಅಲ್ವಾ?' ಅಂತ ಅವಳ ಮುಂದೆ ಹಿಡಿದೆ, ಕೆಳಗೆ ನೆಲದ ಮೇಲೆ ಇಟ್ಟೆ–ಹಲ್ಲು ಕಿರಿದು ನಗ್ತಾ. ಅಷ್ಟು ಸಂತೋಷ ಆಗಿತ್ತು ನಂಗೆ !"

"ಅಮ್ಮ 'ಕೊಡು' ಅಂತ ಇಸ್ಕೊಂಡ್ರಾ,



"ನಮ್ಮ ಕಾಲದಲ್ಲೂ ಇಂತಾ ಡ್ರೆಸ್ ಇದ್ದಿದ್ರೆ ನೀನು ಈಗಾಗಲೇ ಇನ್ನೂ ಐದು ವರ್ಷ ದೊಡ್ಡವಳಿರುತ್ತಿದ್ದೀ...."

ತಗೊಂಡ್ರಾ?"

"ಇಸ್ಕೊಳ್ಳೋದೆಲ್ಲಿ, ಮುಟ್ಟೋಹಾಗಿರಲಿಲ್ವಲ್ಲ. ಅವಳು ನೆಲದ ಮೇಲಿದ್ದದ್ದನ್ನು ತಗೊಳ್ಳಲೂ ಇಲ್ಲ."

"ಯಾಕೆ ಮುತ್ತಾತಾ?"

"ಅವಳು ಗರಬಡಿದು, ಅಂದ್ರೆ ಛಳಕು ಹೊಡೆದು, ಕೈಯಿ, ಕಾಲು, ಬಾಯಿ ಆಡಿಸೋಡಕ್ಕೆ ಆಗ್ದೇ ಇದ್ದೋರ ಹಾಗೆ ಮಾತೇ ಆಡದೆ ಸುಮ್ಮನೆ ನನ್ನನ್ನೇ ಒಂದೇ ಸಮನೆ ನೋಡ್ತಾ ಇದ್ದುಬಿಟ್ಟಿದ್ಲು, ಕೆಳಗಿನಿಂದ ಮೇಲೆ ಮೇಲಿನಿಂದ ಕೆಳಗೆ– ಕುಂಟುಗಾಲಲ್ಲಿ ನಿಂತಿದ್ದ ನನ್ನ."

"ಯಾಕೆ ?"

"ನಾನು ಹಾಗೆ ಬಂದು ಬಿಟ್ಟಿದ್ನಲ್ಲ, ಅದಕ್ಕೇ. ಇನ್ನು ಯಾತಕ್ಕೆ?"

"ಆಮೇಲೆ, ಏನು ಮಾಡಿದ್ರು ಅಮ್ಮ ?"

"ಮಾತು ಬಂದಾಗ ಒದ್ದೆ ಕಣ್ಣಿಂದ, 'ಅಯ್ಯೋ, ಮುಂಡೆದೇ ! ನಿನ್ನ ಯಾರು ನೋಡಬೌದೋ, ನೋಡಿ ಹೊಟ್ಟೆ ಓಡ್ಸೋದಿಲ್ಲವಲ್ಲೋ!—ನಿನ್ ಕಾಲು ಬುರುಡೆಗೆ ಊದ್ಕೊಂಡು ಸೌತೇಕಾಯಿ ಆಗಿಬಿಟ್ಟಯಲ್ಲೋ? ಈ ಧೂಳೋ, ಈ ಮೈತುಂಬ ಗಾಯಗಳೋ, ಬೆನ್ನಿಗೆ ಹತ್ತಿಕೊಂಡಿರೋ ಹೊಟ್ಟೆನೋ. ನೀನೇ ತಿನ್ನಬಾರದಾಗಿತ್ತೇನೋ, ಈ ಸೌತೇಕಾಯಾದ್ರೂ,' ಅಂತ ಅಂದ್ಲು. ನಾನು 'ಎಲ್ಲಮ್ಮಾ, ಏನಾಗಿದೆಯಮ್ಮಾ?' ಅಂತ ನನ್ನನ್ನು ನೋಡಿಕೊಂಡೆ. ಆಗ಼್ೇ ನಂಗೆ ನನ್ನ ಅವತಾರ ಗೊತ್ತಾದ್ದು, ಕಾಲು ಊದಿದ್ದು, ಇಲ್ಲಿ ಬಿದ್ದಾಗ ಮಂಡಿ ಮೊಳಕೈ ತರಿದಿದ್ದದ್ದೂ ಎಲ್ಲ. ಧೂಳು ಮುಚ್ಚಿದ್ದದ್ದೂ, ಮುಳ್ಳು ಚುಚ್ಚಿ ಕಾಲು ಕುಂಟಾಗಿದ್ದದ್ದು, ಮರ ಹತ್ತುವಾಗ ಪಕ್ಕೆ ತರಿದಿದ್ದೂ ರಕ್ತ ಒಸರಿದ್ದೂ ಸರಿಯೇ ಸರಿಯಲ್ಲ."

"ಆಮೇಲೆ?"

"ಆಮೇಲೇನು, ಅಮ್ಮ ಹೂಬತ್ತಿ ಕೆಲಸಾನ ಅಲ್ಲೆ ಬಿಟ್ಟು 'ಸದ್ಯ ಕೈಕಾಲು ತೊಳಕೊ, ಒಂದು ತುತ್ತು ಅನ್ನ ತಿನ್ನು ಬಾ' ಅಂತ ಅನ್ತಾ, ಸೌತೇಕಾಯಿ ಎತ್ತಿಕೊಂಡು ಅಡಿಗೆ ಮನೆಗೆ ಹೋದಳು. ಅಷ್ಟರಲ್ಲಿ ಒಳಗಿನಿಂದ ಮಾವ, ಅತ್ತೆ, ಮಕ್ಳು, ಬಂದು ಸುತ್ತಿಕೊಂಡ್ರು..."

"ಆಮೇಲೆ ಅಮ್ಮ ಸೌತೇಕಾಯಿ ಹೆಚ್ಚಿ ಹೋಳುಮಾಡಿ ಕೊಟ್ರಾ, ಅವರೂ ತಿಂದ್ರಾ?"

"ಇಲ್ಲ. ಇನ್ನೇನೇನೋ ಮಾತುಕಥೇಲಿ ಅದು ಮರೆತೇಹೋಯ್ತು. ಮುಂದೆಯೂ ತಿನ್ನಲೇ ಇಲ್ಲ."

"ಯಾಕೆ?"

"ಯಾಕೇಂದ್ರೆ ಅವತ್ತು ರಾತ್ರಿಯೇ ನಂಗೆ ವಿಪರೀತ ಜ್ವರ ಬಂದುಬಿಡ್ತು, ಇನ್ನೂ ಎರಡು ಮೂರು ದಿನ ಕಾಯ್ತಾ ಇತ್ತು. ಬರಿ ಗಂಜಿ ಕುಡೀತಾ ಇದ್ದೆ ಆಗ. ಇನ್ನೇನೂ ತಿನ್ನೋಹಾಗಿರಲಿಲ್ಲವಲ್ಲ."

"ಡಾಕ್ಟ್ರು ಬಂದು ಇಂಜಕ್ಷನ್ ಕೊಟ್ರಾ?"

"ಆಗ ಅದೆಲ್ಲ ಇರಲಿಲ್ಲ. ಹಳ್ಳೀಲಿ ರಂಗಶೆಟ್ರು ಅಂತ ಇದ್ರು, ಅವರ ಹತ್ರ ಕುಪ್ಪೆ ಮಾತ್ರೆ ಅಂತ ಕಪ್ಪನೆ ಉಂಡೆ ಇತ್ತು. ಅದ್ರಿಂದ ನಮ್ಮ ಗಂಧ ಅರೆಯೋ ಸಾಣೆಕಲ್ಲಿನ ಮೇಲೆ ಮೂರು ಗೆರೆ, ಆ ಕುಪ್ಪೆ ಮಾತ್ರೆಯಿಂದ ಮೂರು ಗೆರೆ ಹಾಕಿದ್ರು. ಅಮ್ಮ ಒಂದೊಂದು ಗೆರೆಗೂ ಜೇನು ತುಪ್ಪ ಹಾಕಿ ಕಲಸಿ ನಂಗೆ ನೆಕ್ಕಿಸ್ತಾ ಇದ್ರು, ಅಷ್ಟೆ."

"ಜ್ವರ ಹೊರಟೋಯ್ತಾ?"

"ಓ, ಓಡಿಹೋಯ್ತು ಜ್ವರಗಿರ ಎಲ್ಲ. ಅಮ್ಮನ ಕೈಯಿನ ಔಷಧಿ ಅಲ್ವಾ? ಈಗ ಅವಳ ಹತ್ರ ಇರಲಿಲ್ವಾ ನಾನು?"

"ಆಮೇಲೆ ?"

"ಆಮೇಲೇನೂ ಇಲ್ಲ. ಕತೆ ಕಾಡಿಗೆ ಹೋಯ್ತು" ಎನ್ನುತ್ತ ಕೈಯಾಡಿಸಿ ಮರಿಮಗನನ್ನು ತೊಡೆಯಿಂದ ಇಳಿಸಿ "ಆಡಿಕೊ ಹೋಗು" ಎಂದ್ರರು. ✡



# ಸುಭಾಷಿತರತ್ನಗಳು

ಅವಶ್ಯಂಭಾವಿನೋ ಭಾವಾ ಭವಂತಿ ಮಹತಾಮಪಿ ।
ನಗ್ನತ್ವಂ ನೀಲಕಂಠಸ್ಯ ಮಹಾಹಿಶಯನಂ ಹರೇಃ ॥

—ಹಿತೋಪದೇಶ

ಮಹಾತ್ಮರಿಗೆ ಕೂಡ ಅವಶ್ಯವಾಗಿ ಆಗಬೇಕಾದ ಪಾಡುಗಳು ಆಗಿಯೇ ತೀರುತ್ತವೆ. ಶಿವ ದಿಗಂಬರ; ವಿಷ್ಣು ಶೇಷಶಾಯಿ.

*

ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ ।
ನ ಹಿ ಸಿಂಹಸ್ಯ ಸುಪ್ತಸ್ಯ ಪ್ರವಿಶಂತಿ ಮುಖೇ ಮೃಗಾಃ ॥

—ಪಂಚತಂತ್ರ

ಪ್ರಯತ್ನದಿಂದ ಕಾರ್ಯಗಳು ಸಿದ್ಧಿಸುತ್ತವೆಯೇ ವಿನಾ ಬರಿ ಬಯಕೆಗಳಿಂದಲ್ಲ. ನಿದ್ರಾವಸ್ಥೆಯಲ್ಲಿರುವ ಸಿಂಹದ ಬಾಯಲ್ಲಿ ಮೃಗಗಳು ತಾವಾಗಿಯೇ ಬಂದು ಬೀಳುವುದಿಲ್ಲ.

*

ಪ್ರಾಮಾಣ್ಯಬುದ್ಧಿಃ ಸ್ತೋತ್ರೇಷು ದೇವತಾಬುದ್ಧಿರಾತ್ಮನಿ।
ಕೀಟಬುದ್ಧಿರ್ಮನುಷ್ಯೇಷು ನೂತನಾಯಾಃ ಶ್ರಿಯಃ ಫಲಮ್ ॥

—ಕಲಿವಿಡಂಬನ

ತನ್ನ ಹೊಗಳಿಕೆಯನ್ನು ನಂಬುವುದು, ತನ್ನನ್ನು ದೇವತೆಯೆಂದು ಭಾವಿಸುವುದು—ಇದೆಲ್ಲ ನೂತನ ಐಶ್ವರ್ಯದ ಫಲ.

*

ಯಥಾ ಹಿ ಪುರುಷೋ ಭಾರಂ ಶಿರಸಾ ಗುರುಮುದ್ವಹನ್ ।
ತಂ ಸ್ಕಂಧೇನ ಸ ಆಧತ್ತೇ ತಥಾ ಸರ್ವಾಃ ಪ್ರತಿಕ್ರಿಯಾಃ ॥

-ಭಾಗವತ

ಪುರುಷನು ತಲೆಯಲ್ಲಿ ದೊಡ್ಡ ಭಾರವನ್ನು ಹೊತ್ತು, ಸಾಕಾದಾಗ ಅದನ್ನು ಹೆಗಲಿಗೆ ಸರಿಸುತ್ತಾನೆ. ಮಾಡುವ ಎಲ್ಲ ಪ್ರತೀಕಾರಗಳೂ ಹಾಗೆಯೇ.

ಭಾರತದ ಪ್ರಥಮ ಸ್ವಾತಂತ್ರ್ಯ
ಸಂಗ್ರಾಮದಲ್ಲಿಯ ಒಂದು ಅಮರ ಪುಟ

# ಸಹೃದಯಿ ಕ್ರಾಂತಿಕಾರಿ

ಮೂಲ ಮರಾಠಿ: ಪ್ರಭಾಕರ ಚಂದಾವರಕರ
ಕನ್ನಡಕ್ಕೆ: ವೈ. ಆರ್. ಮೊಳಗಿಮನಿ

ಫೆಬ್ರುವರಿ ೧೮೫೮. ಕಾನಪುರ-ಲಖನೌ ಮಾರ್ಗದಲ್ಲಿರುವ ಬ್ರಿಟಿಶ್ ಸೈನ್ಯದ ಬಿಡಾರ. ಮಧ್ಯಾಹ್ನ ಎರಡು ಗಂಟೆಯ ಸಮಯ. ಸಾರ್ಜಂಟ್ ಫಾಬ್ಲರ್ ಮೈಕೇಲ್ ತನ್ನ ಬಿಡಾರದಲ್ಲಿ ಕುಳಿತು ಹೇಗೆ ಮುಂದುವರಿಯಬೇಕೆಂಬ ವಿಚಾರದಲ್ಲಿ ತಲ್ಲೀನನಾಗಿದ್ದನು. ಏಕೆಂದರೆ, ಲಖನೌ ಇನ್ನೂ ಕ್ರಾಂತಿಕಾರಿಗಳ ವಶದಲ್ಲಿಯೇ ಇತ್ತು. ಲಖನೌನಲ್ಲಿದ್ದ ಬ್ರಿಟಿಶ್ ಛಾವಣಿಯಲ್ಲಿ ಸುಮಾರು ನೂರಕ್ಕಿಂತಲೂ ಹೆಚ್ಚು ಜನ ಆಂಗ್ಲ ಸ್ತ್ರೀ-ಪುರುಷರು, ಮಕ್ಕಳು ಕ್ರಾಂತಿಕಾರಿಗಳ ವಶದಲ್ಲಿ ಸಿಕ್ಕುಬಿದ್ದಿದ್ದರು. ಇವರೆಲ್ಲರೂ ಅಸಹಾಯಕರಾಗಿ, ತಮ್ಮನ್ನು ರಕ್ಷಿಸಲೋಸುಗ ಕಾನಪುರ ಕಡೆಯಿಂದ ಬರಲಿರುವ ಬ್ರಿಟಿಶ್ ಸೈನ್ಯದ ಕಡೆಗೇ ಕಣ್ಣಿಟ್ಟು ಕುಳಿತಿದ್ದರು. ಸಾರ್ಜಂಟ್ ಮೈಕೇಲನ ನಾಯಕತ್ವದಲ್ಲಿದ್ದ ಬ್ರಿಟಿಶ್ ಸೈನ್ಯದ ತುಕಡಿಯೊಂದು ಮೇಲಿನಿಂದ ಆಜ್ಞೆ ಬರುವದನ್ನೇ ಕಾಯುತ್ತಿತ್ತು; ಸ್ವಲ್ಪ ಹೊತ್ತು ವಿಶ್ರಮಿಸಿ ರಾತ್ರಿಯಲ್ಲಾಗಲಿ ನಸುಕಿನಲ್ಲಾಗಲಿ ಲಖನೌನೆಡೆಗೆ ಮುಂದುವರಿಯುವ ವಿಚಾರದಲ್ಲಿತ್ತು.

"ತಾಜಾ... ಗರಮ್-ಗರಮ್... ಪ್ಲಮ್ ಕೇಕ್ ಬೇಕೆ? ಮೊದಲು ತಿಂದು ನೋಡಿ ಅನಂತರ ಹಣ ಕೊಡಿರಿ...!" ಕೇಕ್ ಮಾರುವವನ ಧ್ವನಿ ಸಾರ್ಜಂಟ್ ಮೈಕೇಲನ ಕಿವಿಗೂ ಬಿತ್ತು. ಆದರೆ ಈಗ ಛಾವಣಿಯಲ್ಲಿ ಕೇಕ್ ಮಾರಲು ಬಂದಿರುವವನಿಗಿಂತಲೂ ಅವನ ಸಿಹಿಯಾದ ಮಾತುಗಳಿಂದ, ನಿರರ್ಗಳವಾದ ಇಂಗ್ಲಿಷ್ ಉಚ್ಚಾರದಿಂದ ಮೈಕೇಲ್ ಪ್ರಭಾವಿತನಾಗಿದ್ದ. ಅವನಾರೆಂದು ತಿಳಿಯುವ ಕುತೂಹಲದಿಂದ ಮೈಕೇಲ್ ಕೇಕ್ ಮಾರುವವನನ್ನು ತನ್ನೆದುರು ಹಾಜರಪಡಿಸುವಂತೆ ಆಜ್ಞಾಪಿಸಿದ.

ತುಸು ಸಮಯದಲ್ಲಿ ಕೇಕ್ ಮಾರುವ ಇಬ್ಬರನ್ನು ಮೈಕೇಲ್ ಸಾಹೇಬನ ಎದುರು ಹಾಜರಪಡಿಸಲಾಯಿತು. ಒಬ್ಬ ತಲೆಯ ಮೇಲೆ ಬುಟ್ಟಿ ಹೊತ್ತಿದ್ದ, ಇನ್ನೊಬ್ಬನ ಕೆಂಪು ಬಣ್ಣದ ನಿಲುವು ಆಕರ್ಷಕವಾಗಿತ್ತು. ಅವನ ಕೈಯಲ್ಲಿ ಬಿಸಿ ಬಿಸಿಯಾದ ತಾಜಾ ಪ್ಲಮ್ ಕೇಕ್‌ಗಳಿದ್ದವು ಈ ಆಕರ್ಷಕ ನಿಲುವಿನ ಸುಂದರ ಯುವಕನನ್ನೇ ಮೈಕೇಲ್ ಸಾಹೇಬ ದಿಟ್ಟಿಸಿ ನೋಡತೊಡಗಿದ. ಆ ಯುವಕ ಸ್ಫುಟವಾದ ಇಂಗ್ಲಿಷಿನಲ್ಲಿ ಹೇಳಿದ: "ಸಾಹೇಬರೇ, ನನ್ನ ಕೇಕ್ ತಿಂದಾದರೂ ನೋಡಿರಿ! ಆಮೇಲೆ ದುಡ್ಡು ಕೊಡಿ...! ಬಿಸಿ ಬಿಸಿಯಾದ ಕೇಕು; ತಾಜಾ ಇವೆ...ಖರೀದಿಸುವ ಕೃಪೆ ಮಾಡ-

(ಕೃಪೆ: ಲೋಕಪ್ರಭಾ)

ಬೇಕು!" ಅವನ ಆ ಅಸ್ಖಲಿತ ಮಾತು, ಸ್ಪಷ್ಟವಾದ ಇಂಗ್ಲಿಷ್ ಉಚ್ಚಾರಗಳಿಂದ ಮೈಕೇಲ್ ಮಂತ್ರಮುಗ್ಧನಾದ. ಅವನ ಮನಸ್ಸಿನಲ್ಲಿ ಏನೋ ಸಂಶಯ ಮೂಡಿತು. ಎದುರಿಗಿರುವ ಕುರ್ಚಿಯ ಕಡೆಗೆ ಬೊಟ್ಟು ಮಾಡಿ ಕುಳಿತುಕೊಳ್ಳಲು ಹೇಳಿ, ಅವನು ಕುಳಿತುಕೊಂಡ ನಂತರ, "ನಿನ್ನ ಹೆಸರೇನು ?" ಎಂದು ಕೇಳಿದ.

"ಜಿಮ್ ಗ್ರೀನ್, ಇವನು ನನ್ನ ಸಂಗಡಿಗ ಮಿಕಿ. ನಾವು ಭಾರತೀಯ ಕ್ರೈಸ್ತರು."

"ಈ ಛಾವಣಿಯಲ್ಲಿ ವಸ್ತುಗಳನ್ನು ಮಾರಾಟ ಮಾಡಲು ಅನುಮತಿ ಪತ್ರ ನಿಮ್ಮೊಡನಿದೆಯೇ?" ಮೈಕೇಲ್ ಗಂಭೀರವಾಣಿಯಲ್ಲಿ ವಿಚಾರಿಸಿದ.

"ಇದೆ, ಇದೋ ನೋಡಿ!" ಅವನು ತನ್ನ ಹತ್ತಿರವಿದ್ದ ಅನುಮತಿಪತ್ರವನ್ನು ತೆಗೆದು ತೋರಿಸಿದ. ಮೈಕೇಲ್ ಅವನ್ನು ತನ್ನ ಕೈಯಲ್ಲಿ ತೆಗೆದುಕೊಂಡ. ಅನುಮತಿ ಪತ್ರದ ಮೇಲೆ ಬ್ರಿಗೇಡಿಯರ್ ಜಾರ್ಜ್ ಹೋಪ್‌ನ ಮೊಹರು, ರುಜು ಇತ್ತು.

ಅನುಮತಿ ಪತ್ರ ನೋಡುತ್ತಲೇ ಮೈಕೇಲನ ಮನಸ್ಸಿಗೆ ನೆಮ್ಮದಿಯಾಯಿತು. ಆದರೆ ಜಿಮ್ ಗ್ರೀನ್ ಶುದ್ಧ ಹಾಗೂ ಸ್ಪಷ್ಟವಾದ ಇಂಗ್ಲಿಷ್ ಮಾತಾಡುವ ಬಗ್ಗೆ ಕುತೂಹಲ ವ್ಯಕ್ತಪಡಿಸಿ, "ಇದನ್ನೆಲ್ಲಿ ಕಲಿತೆ?" ಎಂದು ಮೈಕೇಲ್ ಕೇಳಿದ. ಅದಕ್ಕುತ್ತರವಾಗಿ ಜಿಮ್ ಗ್ರೀನ್, "ನನ್ನ ತಂದೆಯವರ ಇಡೀ ಜೀವಮಾನ ಬ್ರಿಟಿಷ್ ಛಾವಣಿಯಲ್ಲಿ ನೌಕರಿ ಮಾಡುವವರಲ್ಲಿಯೇ ಕಳೆದಿದೆ. ನಾನು ಯಾವಾಗಲೂ ಅವರ ಹತ್ತಿರವೇ ಇರುತ್ತಿದ್ದೆನಾದ್ದರಿಂದ ಇಂಗ್ಲಿಷ್ ನನಗೆ ಹುಟ್ಟಿನೊಂದಿಗೇ ಮೈಗೂಡಿ ಬಂದಿದೆ."

ಮೈಕೇಲನ ಟೇಬಲ್ ಮೇಲಿನ ವರ್ತಮಾನ ಪತ್ರ ನೋಡುತ್ತಲೇ ಜಿಮ್, "ನಾನು ಸ್ವಲ್ಪ ಪೇಪರ್ ನೋಡಬೇಕಿತ್ತಲ್ಲ?" ಎಂದು ಕೇಳಿ ಒಪ್ಪಿಗೆ ಪಡೆದ.

ಜಿಮ್, ಆ ಇಂಗ್ಲಿಷ್ ವೃತ್ತಪತ್ರವನ್ನು ಲಗುಬಗೆಯಿಂದ ತೆಗೆದುಕೊಂಡು ಓದತೊಡಗಿದ. ೧೮೫೭ರಲ್ಲಿ ಹೊತ್ತಿಕೊಂಡ ಕ್ರಾಂತಿಯ ಕಿಚ್ಚು ಎಲ್ಲ ಕಡೆಗೂ ಹರಡಿಕೊಂಡಿತ್ತು. ಭಾರತದಲ್ಲಿಯ ಈ ಕ್ರಾಂತಿಯ ಪ್ರಭಾವ ಇಂಗ್ಲಂಡಿನಲ್ಲಿ ಯಾವ ರೀತಿ ಪ್ರತಿಕ್ರಿಯೆಯನ್ನುಂಟುಮಾಡಿತ್ತು? ಈ ಬಗ್ಗೆ ಇಂಗ್ಲಿಷ್ ಪತ್ರಿಕೆಗಳ ವಿಮರ್ಶೆ ಏನು? ಅಭಿಪ್ರಾಯವೇನು? ಮುಂತಾದವುಗಳನ್ನು ತಿಳಿದುಕೊಳ್ಳಲು ಜಿಮ್ ಕಾತರನಾಗಿದ್ದ. ಸ್ವಲ್ಪ ಹೊತ್ತಿನಲ್ಲಿ ಅವನು ಇಡೀ ವೃತ್ತಪತ್ರವನ್ನು ಓದಿ ಮುಗಿಸಿದ.

## ಅವನು ಗುಪ್ತಚಾರನೆ?

ವೃತ್ತಪತ್ರ ಓದುವದು ಮುಗಿದ ನಂತರ ಅವನು ಮೈಕೇಲ್‌ಸಾಹೇಬನ ಜೊತೆಗೆ, ಬ್ರಿಟಿಷರ ಸೈನ್ಯಶಕ್ತಿ ಅಲ್ಲದೇ ಸದ್ಯದ ಲಖನೌನಲ್ಲಿನ ಪರಿಸ್ಥಿತಿ ಮುಂತಾದ ವಿಷಯಗಳ ಬಗೆಗೆ ಚರ್ಚೆ ಮಾಡಿದ. ಅವನ ಗಹನವಾದ ವಿಚಾರ ಹಾಗೂ ಬುದ್ಧಿಶಕ್ತಿಯನ್ನು ಕಂಡು ಮೈಕೇಲ್ ಹರ್ಷಿತನಾದ. ಮೈಕೇಲನಲ್ಲಿ ಈಗ ಜಿಮ್ಮನ ವಿಷಯವಾಗಿ ಒಂದು ರೀತಿಯ ಆತ್ಮೀಯತೆ ಮೂಡಲಾರಂಭಿಸಿತು. ಆಂತರಿಕ ಬೆಸುಗೆ ಗಾಢವಾಗತೊಡಗಿತು. ಮೈಕೇಲ್ ಕೆಲ ಕೇಕ್‌ಗಳನ್ನು ಕೊಂಡುಕೊಂಡ. ನಂತರ ಜಿಮ್ ತನ್ನ ಸಂಗಡಿಗನೊಂದಿಗೆ ಹೊರಟುಹೋದ.

ಜಿಮ್ ಗ್ರೀನ್ ಅಲ್ಪಾವಧಿಯಲ್ಲಿಯೇ ಮೈಕೇಲನ ಮೇಲೆ ಎಂಥ ಜಾದೂ ಮಾಡಿದ್ದನೆಂದರೆ, ಅವನು ಹೊರಟು ಹೋಗುತ್ತಲೇ ಮೈಕೇಲ್ ತನ್ನ ಹಾಸುಗೆಯ ಮೇಲೆ ಉರುಳುತ್ತ ಜಿಮ್ಮನ ವಿಷಯವಾಗಿಯೇ ವಿಚಾರ ಮಾಡಲಾರಂಭಿಸಿದ. ಮೈಕೇಲನ ಸೈನಿಕ ಜೀವನದಲ್ಲಿ ಅವನಿಗೆ ಭೇಟಿಯಾದ ಪ್ರಥಮ ಭಾರತೀಯನೆಂದರೆ ಜಿಮ್. ಅವನು ಇಂಗ್ಲಿಷ್ ಭಾಷೆಯನ್ನು ಮಾತ್ರವಲ್ಲ, ಬ್ರಿಟಿಷರ ಸುಂದರ ಆಚಾರ ವಿಚಾರಗಳನ್ನೂ ಮನನಮಾಡಿಕೊಂಡಿದ್ದ.

ಮಧ್ಯಾಹ್ನ ಛಾವಣಿಯಲ್ಲಿ 'ಪ್ಲಮ್ ಕೇಕ್' ಮಾರುತ್ತಿದ್ದ ಜಿಮ್ ಗುಪ್ತಚಾರನಿದ್ದು, ಆ ಕಾರಣದಿಂದ ಅವನನ್ನು ಬಂಧಿಸಲಾಗಿದ್ದು, ಅವನಿಗೆ ಗಲ್ಲು ಶಿಕ್ಷೆ ವಿಧಿಸಲ್ಪಟ್ಟಿದೆ; ಮರುದಿನ ಮುಂಜಾನೆಯೆ ಮರಣ ದಂಡನೆಯಾಗಲಿದೆ, ಎಂಬ ಸಮಾಚಾರ ಅದೇ ರಾತ್ರಿ ಮೈಕೇಲನಿಗೆ

ಬಂತು. ಆದರೆ ಇಷ್ಟೊಂದು ಸುಸಂಸ್ಕೃತ ಇಂಗ್ಲೀಷ್ ಮಾತಾಡುವ ಯುವಕ ಜಿಮ್ ಗುಪ್ತಚಾರನೆಂದು ನಂಬುವುದು ಮೈಕೇಲನಿಗೆ ಕಷ್ಟವಾಯಿತು.

ತುಸು ಸಮಯದಲ್ಲಿಯೇ ಜಿಮ್ ಹಾಗೂ ಅವನ ಸಂಗಾತಿ ಮಿಕಿ ಇವರನ್ನು ಬಂಧಿಸಿ ಮೈಕೇಲ್ ಸಾಹೇಬನ ಬಿಡಾರಕ್ಕೆ ತರಲಾಯಿತು. ಅಲ್ಲದೇ ಮುಂಜಾವಿನವರೆಗೂ ಆ ಇಬ್ಬರ ಮೇಲೂ ಕಾವಲಾಗಿ ಎಚ್ಚರವಿರುವ ಹೊಣೆಯನ್ನು ಮೈಕೇಲನಿಗೆ ಬಿಡಲಾಗಿತ್ತು.

ಬಂಧಿಸಲ್ಪಟ್ಟ ಇಬ್ಬರನ್ನು ನೋಡುತ್ತಲೇ ಬ್ರಿಟಿಷ್ ಸೈನಿಕರು ಬೇಗನೆ ಪಟ್ಟಣಕ್ಕೆ ಹೋಗಿ ಹಂದಿಯ ಮಾಂಸವನ್ನು ತರಲು ಅನುಮತಿ ಕೇಳಿದರು. ವಿದ್ರೋಹದ ಆಪಾದನೆಯ ಮೇಲೆ ಯಾವುದೇ ಭಾರತೀಯ ಮುಸಲ್ಮಾನನಿಗೆ ಗಲ್ಲು ಶಿಕ್ಷೆಯಾಗುವದಿದ್ದರೆ, ಅವನಿಗೆ ಹಂದಿಯ ಮಾಂಸವನ್ನು ಒತ್ತಾಯದಿಂದ ತಿನ್ನಿಸಿ, ನಂತರ ಮರಣ ದಂಡನೆ ನೀಡಲಾಗುವ ಪರಿಪಾಠ ಬ್ರಿಟಿಷ್ ಸೈನ್ಯದಲ್ಲಿತ್ತು.

ಆದರೆ ಮೈಕೇಲ್ ಸಭ್ಯ, ಸುಶಿಕ್ಷಿತ, ಸುಸಂಸ್ಕೃತ. ಜಿಮ್ ಗ್ರೀನನ ಬಗೆಗೆ ಗೆಳೆತನ ಸಂಬಂಧದ ಸದ್ಭಾವನೆಗಳು ಅವನ ಹೃದಯದಲ್ಲಿ ತುಂಬಿದ್ದವು. ಮೈಕೇಲನಿಗೆ ತನ್ನ ಸೈನಿಕರ ಈ ಬೇಡಿಕೆಯಿಂದ ಸಿಟ್ಟು ಬಂತು. ಅವನು ಸಿಟ್ಟಿಗೆದ್ದು ಗರ್ಜಿಸಿದ: "ಎಚ್ಚರಿಕೆ! ಯಾರೇ ಆಗಲಿ ಬಂಧಿತರ ವಿಷಯವಾಗಿ ಅಸಭ್ಯವಾಗಿ ವರ್ತಿಸಿದರೆ ಕಠಿಣ ಶಿಕ್ಷೆಗೆ ಗುರಿಪಡಿಸಲಾಗುವದು!"

## ಯಾರು ನೀನು?

ಮೈಕೇಲ್ ಸಾಹೇಬನು ಸೈನಿಕರಿಗೆ ಈ ರೀತಿ ಕಠೋರವಾಗಿ ಅಜ್ಞಾಪಿಸುತ್ತಲೇ, ಇಲ್ಲಿಯವರೆಗೂ ಮ್ಲಾನವಾಗಿದ್ದ ಜಿಮ್ಮನ ಮುಖ ಮತ್ತೆ ಪ್ರಸನ್ನವಾಯಿತು. ಚತುರ ಮೈಕೇಲನಿಗೆ ಈ ಬದಲಾವಣೆ ಕಾಣದೇ ಇರಲಿಲ್ಲ. ಜಿಮ್ಮನ ಪ್ರಸನ್ನ ಆಕರ್ಷಕ ನಿಲುವಿನೆಡೆಗೆ ಮೈಕೇಲನ ದೃಷ್ಟಿ ಕೇಂದ್ರೀಕೃತವಾಯಿತು. ಇಬ್ಬರ ದೃಷ್ಟಿಗಳು ಕೂಡುತ್ತಲೇ ಜಿಮ್, ಅಂತಹ ವೇಳೆಯಲ್ಲಿಯೂ ಅತ್ಯಂತ ಭಾವಪೂರ್ಣವಾದ ಶಬ್ದಗಳಲ್ಲಿ ಮೈಕೇಲನ ಸದ್ವರ್ತನೆಯನ್ನು ಶ್ಲಾಘಿಸಿ ಧನ್ಯವಾದಗಳನ್ನು ಅರ್ಪಿಸಿಬಿಟ್ಟ. ಆಗ ಮೈಕೇಲ್ ಅಭಿಮಾನದಿಂದ ಪ್ರತಿಯಾಗಿ ಅಭಿನಂದನೆಗಳನ್ನು ಸಲ್ಲಿಸಿ ಬಂಧಿತರ ಕೈಕೋಳಗಳನ್ನು ತೆಗೆದ. ಇದರಿಂದ ಅವರಿಗೆ ಕೊನೆಯ ಪ್ರಾರ್ಥನೆ ಮಾಡಲು ಅನುಕೂಲವಾಯಿತು. ಮೈಕೇಲ್‌ನ ಈ ಉಪಕಾರವನ್ನು ಪುನಃ ಸ್ಮರಿಸಿ ಜಿಮ್ ಅಲ್ಲಾನ ಕೊನೆಯ ಪ್ರಾರ್ಥನೆ (ನಮಾಜ)ಯಲ್ಲಿ ಮಗ್ನನಾದ. ಪ್ರಾರ್ಥನೆ ಮುಗಿಯುತ್ತಲೇ ಇವರ ಸಲುವಾಗಿಯೇ ಮೈಕೇಲ್ ಸಾಹೇಬ ವಿಶೇಷ ಭೋಜನದ ಏರ್ಪಾಡು ಮಾಡಿದ್ದ. ಊಟ ಮುಗಿದ ನಂತರ ಹುಕ್ಕಾ ಸೇದುವ ವ್ಯವಸ್ಥೆಯನ್ನೂ ಮಾಡಲಾಗಿದ್ದಿತು. ಜಿಮ್ ಹುಕ್ಕಾ ಸೇದುತ್ತಿರುವಾಗ ಮೈಕೇಲ್ ಅವನನ್ನು ಅತೀ ಕಳಕಳಿಯಿಂದ ವಿಚಾರಿಸಿದ: "ಜಿಮ್ ನೀನು ನಿಜವಾಗಿಯೂ ಗುಪ್ತಚಾರನೆ? ನನ್ನ ಛಾವಣಿಯಲ್ಲಿ ಬರಲು ನಿನಗೆ ನಿಜವಾದ ಕಾರಣವೇನು?"

"ನಿಜ ಹೇಳಬೇಕೆಂದರೆ, ಗುಪ್ತಚಾರನೆಂಬ ಪದದ ಅರ್ಥಕ್ಕೆ ತಕ್ಕಂತೆ ನಾನು ಗುಪ್ತಚಾರನಲ್ಲ. ಆದರೆ ಬೇಗಮ್ ಸಾಹೇಬರ ಸೈನ್ಯದಲ್ಲಿ ಒಬ್ಬ ಉಚ್ಚ ಪದಾಧಿಕಾರಿಯಾಗಿದ್ದೇನೆ. ನಾನು ಅವರ ಸೈನ್ಯದಲ್ಲಿ ಮುಖ್ಯ ಇಂಜಿನಿಯರ್ ಇದ್ದು, ಲಖನೌನ ಮೇಲೆ ದಂಡೆತ್ತಿ ಬರುವ ಬ್ರಿಟಿಷ್ ಸೈನ್ಯವು ಎಷ್ಟಿದೆ? ಅದರಲ್ಲಿ ಯಾವ ಯಾವ ಪ್ರಕಾರದ ಶಸ್ತ್ರಾಸ್ತ್ರಗಳಿವೆ? ಬ್ರಿಟಿಷರ ಆಕ್ರಮಣದ ವ್ಯವಸ್ಥೆ ಹೇಗಿದೆ? ಇದನ್ನೆಲ್ಲ ತಿಳಿದುಕೊಳ್ಳುವ ಉದ್ದೇಶದಿಂದ ಮಾತ್ರ ಬಂದಿದ್ದೆ. ಅಷ್ಟೆ ಅಲ್ಲ, ನಾನು ಈ ನನ್ನ ಕೆಲಸ ಪೂರೈಸಿಕೊಂಡು ಸೂರ್ಯೋದಯಕ್ಕೆ ಮುನ್ನ ಲಖನೌ ಮುಟ್ಟಬೇಕಿತ್ತು. ಆದರೆ ದುರ್ಭಾಗ್ಯ, ನನ್ನ ಬೆನ್ನು ಬಿಡಲಿಲ್ಲ. ಇದೇ ಛಾವಣಿಯಲ್ಲಿ ಬಂಧಿಸಲಾದ ಒಬ್ಬ ಮನುಷ್ಯ ತನ್ನ ಪ್ರಾಣವನ್ನು ಉಳಿಸಿಕೊಳ್ಳಲೋಸುಗ ನನ್ನ ರಹಸ್ಯವನ್ನು ಬಯಲು ಮಾಡಿ ಎಲ್ಲವನ್ನೂ ನಾಶ ಮಾಡಿಬಿಟ್ಟ!" ಜಿಮ್ ಎದೆಗುಂದದೆ ಹೇಳಿದ.

ಜಿಮ್ ಹಾಗೂ ಮೈಕೇಲ್ ಪರಸ್ಪರ ಶತ್ರುಗಳಾಗಿದ್ದರೂ ಈಗ ಅವರಿಬ್ಬರ ಮಾತುಕತೆ

ಆತ್ಮೀಯತೆಯುಂಟಾಗಿತ್ತು. ಮೈಕೇಲನಿಗೆ ಜಿಪರ್ ಇನ್ನು ಕೆಲವೇ ತಾಸುಗಳ ಸಂಗಾತಿಯಾಗಿದ್ದ. ಮೈಕೇಲನ ಹೃದಯ ಕಳವಳಗೊಂಡಿತು. ಜಿಪ್ರನ ಕಥೆಯನ್ನು ತಿಳಿದುಕೊಳ್ಳುವ ಕುತೂಹಲ ಹೆಚ್ಚತೊಡಗಿತು. ಸಾಹೇಬ ಅವನ ಜೀವನ ವೃತ್ತಾಂತವನ್ನು ಬರೆದುಕೊಡಲು ಅತ್ಯಂತ ನಮ್ರತೆಯಿಂದ ಕೇಳಿಕೊಂಡ. ಆ ಜೀವನ ವೃತ್ತಾಂತವನ್ನು ಸ್ಕಾಟ್‌ಲಂಡಿನಲ್ಲಿರುವ ತನ್ನ ಗೆಳೆಯರಿಗೆ 'ಸಂದರ್ಶನ ದಾಖಲೆ'ಯಾಗಿ ಕಳುಹಿಸಿಕೊಡುವ ಇಚ್ಛೆಯನ್ನು ಮೈಕೇಲ್ ವ್ಯಕ್ತಪಡಿಸಿದ.

ಮೈಕೇಲನ ಸ್ನೇಹಮಯ, ಸೌಜನ್ಯಪೂರ್ಣ ನಡೆನುಡಿಗಳಿಂದ ಜಿಪರ್ ತನ್ನನ್ನೇ ತಾನು ಮರೆತುಬಿಟ್ಟಿದ್ದ. ಆತ ಕೃತಜ್ಞತೆಯ ಅಡಕೊತ್ತಿನಲ್ಲಿ ಸಿಕ್ಕಿ ಹಾಕಿಕೊಂಡಿದ್ದ. ಹೀಗಾಗಿ ಅವನು ಮೈಕೇಲನ ಆಗ್ರಹವನ್ನು ತಳ್ಳಿಹಾಕಲಿಲ್ಲ. ಮೈಕೇಲ್ ಮಾಡಿದ ಉಪಕಾರವನ್ನು ಈ ರೀತಿಯಾದರೂ ತೀರಿಸುವ ಅವಕಾಶಕ್ಕಾಗಿ ಸಂತಸಗೊಂಡ. ಕೆಲವೇ ತಾಸುಗಳಲ್ಲಿ ತನ್ನನ್ನು ಗುಂಡಿನೇಟಿನಿಂದ ಕೊಲ್ಲುವರೆಂಬುದನ್ನೂ ಪೂರ್ತಿಯಾಗಿ ಮರೆತು, ಸಾಹೇಬ ಕೊಟ್ಟ ಸಲಕರಣೆಯಿಂದ ತನ್ನ ಜೀವನ ಚರಿತ್ರೆಯನ್ನು ಬರೆಯಲುದ್ಯುಕ್ತನಾದ.

*

"ಸ್ವಾಮೀ ನನ್ನ ಈ ಕರ್ಮಕಥೆಯನ್ನು ಸ್ಕಾಟ್‌ಲಂಡಿನ ತಮ್ಮ ಮಿತ್ರರಿಗೆ ಕಳುಹಿಸಿಕೊಡುವ ತಮ್ಮ ಮನೋಭಿಲಾಷೆಯನ್ನು ವ್ಯಕ್ತಪಡಿಸಿದ್ದೀರಷ್ಟೆ. ಇಂಗ್ಲಂಡಿನ ನಿವಾಸಿಗಳು (ಸ್ಕಾಟ್‌ಲಂಡ್ ನಾನು ಇಂಗ್ಲಂಡಿನ ಒಂದು ಭಾಗವೆನ್ನುತ್ತೇನೆ.) ನ್ಯಾಯವಂತರೂ ದಯಾಳುಗಳೂ ಆಗಿರುವದರಿಂದ ನನ್ನಂತಹ, ದೇವರ ಅತಿ ಕನಿಷ್ಠ ಸೇವಕನ ಬಗ್ಗೆ ಅವರ ಹೃದಯದಲ್ಲಿ ಕಿಂಚಿತ್ತಾದರೂ ಸದ್ಭಾವನೆ ಮೂಡಿಸುವಲ್ಲಿ ನನ್ನ ಈ ಕರ್ಮಕಥೆ ಯಶಸ್ವಿಯಾದರೆ ಸಾಕು. ಇಂಗ್ಲಿಷ್ ಜನರ ಪರಿಚಯ ನನಗಿದೆ. ಏಕೆಂದರೆ ಲಂಡನ್, ಎಡಿನ್‌ಬರೊಗಳಲ್ಲಿ ನನ್ನ ಅನೇಕ ಮಿತ್ರರಿದ್ದಾರೆ. ನಾನೂ ಎರಡು ಸಲ ಆ ಸ್ಥಳಗಳಿಗೆ ಹೋಗಿ ಬಂದಿದ್ದೇನೆ.

ನನ್ನ ನಿಜವಾದ ಹೆಸರು ಮಹಮ್ಮದ ಅಲೀಖಾನ್. ನನ್ನ ಜನನವಾದದ್ದು ರೋಹಿಲಖಂಡದಲ್ಲಿಯ ಒಂದು ಕುಲೀನ ಮನೆತನದಲ್ಲಿ. ಬರೇಲಿಯ ಕಾಲೇಜಿನಲ್ಲಿಯೇ ನನ್ನ ಶಿಕ್ಷಣವನ್ನು ಪೂರ್ತಿಗೊಳಿಸಿದ್ದರಿಂದ ಇಂಗ್ಲಿಷ್ ಹಾಗೂ ಇತರ ವಿಷಯಗಳ ಮೇಲೆ ನಾನು ಚೆನ್ನಾಗಿಯೇ ಪ್ರಭುತ್ವ ಸ್ಥಾಪಿಸಿಕೊಂಡೆ. ಅನಂತರ ರುಡಕೀಯ ಸರಕಾರೀ ಇಂಜಿನಿಯರಿಂಗ್ ಕಾಲೇಜಿನಲ್ಲಿ ಶಿಕ್ಷಣವನ್ನು ಮುಂದುವರಿಸಿದೆ. ಇಷ್ಟೇ ಅಲ್ಲ, ನನ್ನ ಬ್ರಿಟಿಷ್ ಸಹಪಾಠಿಗಳಿಗಿಂತಲೂ ಹೆಚ್ಚು ಗುಣಗಳನ್ನು ಪಡೆದು ತೇರ್ಗಡೆಯಾದೆ. ನಂತರ ಈಸ್ಟ್ ಇಂಡಿಯಾ ಕಂಪನಿಯಲ್ಲಿ ನೌಕರಿ ಮಾಡಬೇಕೆಂದು ನನ್ನ ಮನೀಷೆಯಾಗಿತ್ತು. ಆದರೆ ನನಗೆ ಸಿಕ್ಕ ನೌಕರಿಯೆಂದರೆ, ಒಬ್ಬ ದೇಶೀ ಕಮಿಶನ್ಡ ಅಧಿಕಾರಿಯದು. ನಾನು ಹೆಸರಿಗೆ ಮಾತ್ರ ಜಮಾದಾರ. ಆದರೆ ನನ್ನನ್ನು ದೂರ ನಿರ್ಜನ ಪರ್ವತ ಪ್ರದೇಶಕ್ಕೆ ಕಳಿಸಲಾಯಿತು.

## ಇಂಗ್ಲಂಡಿಗೆ ಹೋದೆ

ದುರ್ದೈವವೆಂದರೆ, ಪಾಶವೀ ಶಕ್ತಿಗಳ ವಿನಾ ಬೇರೇನೂ ಗೊತ್ತಿಲ್ಲದಂಥ ಒಬ್ಬ ಬ್ರಿಟಿಷ್ ಅಧಿಕಾರಿಯ ಕೈಕೆಳಗೆ ಕೆಲಸ ಮಾಡಬೇಕಾಗಿ ಬಂತು. ನನಗೆ ಗೊತ್ತಿರುವ ಮಟ್ಟಿಗೆ ಅವನೊಬ್ಬ ಅಶಿಕ್ಷಿತ, ಸ್ವಾರ್ಥಿ ಹಾಗೂ ನಿರ್ದಯಿಯಾದ ಅಧಿಕಾರಿ ಅವನಿಗೆ ತಾಂತ್ರಿಕ ಜ್ಞಾನದ ಗಂಧವೂ ಇರಲಿಲ್ಲ. ಇಂಥ ಬ್ರಿಟಿಷ್ ಅಧಿಕಾರಿಗಳ ಬಗ್ಗೆ ಭಾರತೀಯರ ಮನದಲ್ಲಿ ಅಸಂತೋಷ ಪ್ರತಿಫಲಿಸುವದು ಸಹಜವೇ ! ಎಲ್ಲಿಯವರೆಗೆ ಭಾರತದಲ್ಲಿರುವ ಬ್ರಿಟಿಷರು ಇಲ್ಲಿಯ ಜನರ ಭಾಷೆಯನ್ನು ಕಲಿಯುವದಿಲ್ಲವೋ, ಇವರೊಂದಿಗೆ ಬೆರತು ವ್ಯವಹರಿಸುವದಿಲ್ಲವೋ, ಅಲ್ಲಿಯವರೆಗೆ ಈ ರೀತಿಯ ಭಾವನೆಗಳೂ ಸಹಿತ ಹೆಚ್ಚುತ್ತಲೇ ಹೋಗುತ್ತವೆ.

ವಾಸ್ತವವಾಗಿ ನಾನು ಈ ಕಂಪನಿಯಲ್ಲಿ ಕೆಲಸಕ್ಕೆ ಸೇರಿದ್ದು ಕೇವಲ ಸಂಬಳಕ್ಕಾಗಿ ಅಲ್ಲ, ಸ್ವಂತ ಒಬ್ಬ ಬಲಶಾಲಿ [illegible] ಅಧಿಕಾರ [illegible]
[illegible]

ದಲ್ಲಿಯೇ ಇಂಥ ಒಬ್ಬ ದುಷ್ಟ ಮನುಷ್ಯನ ಕೈಕೆಳಗೆ ಕೆಲಸಮಾಡುವ ದುರದೃಷ್ಟ ಒದಗಿತು. ಆವನ ಬಗ್ಗೆ ನನ್ನ ಮನದಲ್ಲಿ ತಿರಸ್ಕಾರವೇ ಹೆಚ್ಚಾಗಿದ್ದಿತು. ಆ ನನ್ನ ಮನೋಭಾವ ನನ್ನ ಸ್ಥಾನಕ್ಕೆ ಭೂಷಣವಾಗಿರಲಿಲ್ಲ. ಇದನ್ನು ನಾನು ನನ್ನ ತಂದೆಯುವರಿಗೆ ಪತ್ರ ಬರೆದು ತಿಳಿಸಿ ನೌಕರಿಯನ್ನೇ ಬಿಡುವ ವಿಚಾರವನ್ನು ವ್ಯಕ್ತಪಡಿಸಿ ಅನುಮತಿ ಕೇಳಿದೆ. ತಂದೆಯುವರ ಉತ್ತರದಿಂದ ನನಗೆ ಸಮಾಧಾನವಾಯಿತು. ನಾನು ಕೂಡಲೇ ಕೆಲಸಕ್ಕೆ ರಾಜೀನಾಮೆಯನ್ನಿತ್ತು ಮನೆಗೆ ಬಂದೆ.

ಆ ನಂತರ ನಾನು ಲಖನೌನ ಶಹಾ ಕುಸರುದ್ದೀನರಲ್ಲಿ ಸೇವೆ ಸಲ್ಲಿಸಲು ನಿಶ್ಚಯಿಸಿದೆ. ಆದರೆ ನೇಪಾಳದ ರಾಣಾ ಜಂಗ ಬಹಾದ್ದೂರ ಈಗ ಗೋರಖಪುರಕ್ಕ ಬಂದಿದ್ದು, ಅವರು ಸಧ್ಯದಲ್ಲಿಯೇ ಇಂಗ್ಲೆಂಡಿಗೆ ಹೋಗುವವನಿದ್ದಾರೆಂದು ತಿಳಿದುಬಂತು. ಅವನಿಗೆ ಇಂಗ್ಲೀಷಿನ ಒಳ್ಳೆಯ ಪರಿಜ್ಞಾನವಿರುವ ಬುದ್ಧಿವಂತ ಮಂತ್ರಿ ಬೇಕಾಗಿದ್ದಾನೆಂದೂ ತಿಳಿಯಿತು. ಅರ್ಜಿ ಗುಜರಾಯಿಸಿದೆ. ಅರ್ಜಿಯೊಂದಿಗೆ ರಾಜಮಹಾರಾಜರ, ಬ್ರಿಟಿಷ್ ಅಧಿಕಾರಿಗಳ ಶಿಫಾರಸು ಪತ್ರಗಳನ್ನೂ ಲಗತ್ತಿಸಿದೆ. ನನ್ನ ಅರ್ಜಿಯು ಸ್ವೀಕರಿಸಲ್ಪಟ್ಟು, ನನ್ನನ್ನು ನೇಪಾಳದ ಜಂಗ ಬಹಾದ್ದೂರರಲ್ಲಿ ಮಂತ್ರಿಪದವಿಗೆ ನೇಮಕ ಮಾಡಲಾಯಿತು. ಹೀಗೆ ನಾನು ಜಂಗ ಬಹಾದ್ದೂರರ ಜೊತೆಯಲ್ಲಿ ಪ್ರಥಮವಾಗಿ ಇಂಗ್ಲೆಂಡ್ ಪ್ರವಾಸ ಮಾಡಿದೆ. ಇದೇ ವೇಳೆಗೆ ಎಡಿನ್‌ಬರೋಗೆ ಹೋದಾಗ, ಬ್ರಿಟಿಷರ, '೯೩ ಹಾಯ್‌ಲ್ಯಾಂಡರ್ಸ್' ಸುಸಜ್ಜಿತ ಸೇನೆಯನ್ನೂ ನೋಡಿದೆವು. ಈ ಸೇನೆ ನೇಪಾಳದ ರಾಣಾ ಜಂಗ ಬಹಾದ್ದೂರರ ಗೌರವಾರ್ಥ ವಂದನೆ ಸಲ್ಲಿಸಿತು. ಮುಂದೊಂದು ದಿನ ನಾನು ನನ್ನ ದೇಶದಲ್ಲಿಯೇ ಇದೇ ಸೈನಿಕ ಭಾವಣೆಯಲ್ಲಿ ಸೆರೆಯಾಳಾಗುತ್ತೇನೆಂಬ ಕಲ್ಪನೆಯೂ ನನಗಾಗ ಇದ್ದಿರಲಿಲ್ಲ.

ಭಾರತಕ್ಕೆ ತಿರುಗಿ ಬಂದ ನತರ, ೧೮೫೪ರವರೆಗೂ, ನನಗೆ ಭಾರತದಲ್ಲಿಯ ಅನೇಕ ರಾಜಮಹಾರಾಜರ ದರಬಾರುಗಳಲ್ಲಿ ಅನೇಕ ಜವಾಬ್ದಾರಿಯುತ ಕೆಲಸಗಳನ್ನು ಮಾಡುವ ಅವಕಾಶ ದೊರಕಿತು. ಇದೇ ವೇಳೆಗೆ ಒಬ್ಬ ಹಿರಿಯ ಕ್ರಾಂತಿಕಾರಿ ಅಜಿಮುಲ್ಲಾಖಾನರ ಜೊತೆಗೆ ಪುನಃ ಇಂಗ್ಲೆಂಡಿಗೆ ಹೋಗುವ ಸಂದರ್ಭವೂ ಬಂತು. ಅಜಿಮುಲ್ಲಾಖಾನ ಪೇಶ್ವೆಯ ಉತ್ತರಾಧಿಕಾರಿಯಾದ ನಾನಾಸಾಹೇಬರ ವಕೀಲಿ ಪತ್ರ ತೆಗೆದುಕೊಂಡು ಇಂಗ್ಲೆಂಡಿಗೆ ಹೊರಟಿದ್ದರು. ಅಜಿಮುಲ್ಲಾಖಾನರಿಗೂ ಇಂಗ್ಲಿಷಿನ ಉತ್ತಮ ಜ್ಞಾನವಿದ್ದಿತು. ತಾವು ಇಂಗ್ಲೆಂಡಿಗೆ ಹೋಗಿ ಲಾರ್ಡ್ ಡಾಲ್‌ಹೌಸಿಯುವರು ನಾನಾಸಾಹೇಬ ಪೇಶ್ವೆಯ ಪೆನ್ಶನ್ ವಿಚಾರವಾಗಿ ನೀಡಿದ ನಿರ್ಣಯವನ್ನು ತಮ್ಮ ಬುದ್ಧಿಚಾತುರ್ಯದಿಂದ ಸಹಜವಾಗಿ ಬದಲಿಸುತ್ತೇನೆಂಬ ಆತ್ಮವಿಶ್ವಾಸವೂ ಅವರಿಗಿತ್ತು.

ಕಾರ್ಯ ಸಫಲತೆಯ ಸಲುವಾಗಿ ಇಂಗ್ಲೆಂಡಿನಲ್ಲಿ ಅತಿ ಪ್ರಸಿದ್ಧ ವಕೀಲರನ್ನು ಹಿಡಿಯಬೇಕಾದ್ದರಿಂದ ಮತ್ತು ಸಮಯ ಬಂದರೆ ಹಿರಿಯ ಬ್ರಿಟಿಷ್ ಅಧಿಕಾರಿಗಳಿಗೆ ಲಂಚ, ಬಕ್ಷೀಸು ಕೊಡುವದಕ್ಕಾಗಿ ನಮ್ಮ ಬಳಿ ಸಾಕಷ್ಟು ಹಣವಿತ್ತು. ಸುಮಾರು ಐದು ಸಾವಿರ ಪೌಂಡುಗಳಷ್ಟು ಖರ್ಚು ಮಾಡಿಯೂ ನಮ್ಮ ರಾಜನೈತಿಕ ಕಾರ್ಯದ ಉದ್ದೇಶ ಸಫಲವಾಗಲಿಲ್ಲ. ಕೊನೆಗೆ ಖುಸ್ತೂನಿಯಾ ಮಾರ್ಗವಾಗಿ ಭಾರತಕ್ಕೆ ಹಿಂದಿರುಗುವ ವಿಚಾರ ಮಾಡಿದೆವು.

**ರಶಿಯನ್ ಸ್ಫೂರ್ತಿ**

ಮೊದಲು ಖುಸ್ತೂನಿಯಾ ಹಾಗೂ ಅಲ್ಲಿಂದ ಕ್ರಿಮಿಯಾದವರೆಗೂ ಹೋದೆವು. ಜೂನ್ ೧೮ ರಂದು ಅಲ್ಲಿನ ಯುದ್ಧದಲ್ಲಿ ಬ್ರಿಟಿಷರ ಸೋಲನ್ನೂ, ಸೈನ್ಯದಲ್ಲಾದ ಕೋಲಾಹಲವನ್ನೂ ಕಣ್ಣಾರೆ ಕಂಡೆ. ಅಲ್ಲದೇ ಸೇಬಾಸ್ತಪೋಲ್‌ನ ಯುದ್ಧಭೂಮಿಗೆ ಹೋಗಿ ಅಲ್ಲಿಯ ಪರಿಸ್ಥಿತಿಯನ್ನೂ ಗಮನಿಸಿದೆ.

ಕ್ರಿಮಿಯಾದಿಂದ ಖುಸ್ತೂನಿಯಾಕ್ಕೆ ಬರುತ್ತಲೇ ನಮಗೆ ಕೆಲ ರಶಿಯನ್ ದೂತರು ಭೇಟಿಯಾದರು. ಅವರು ನಿಜವಾಗಿಯೂ ರಶಿಯದ ದೂತರಿದ್ದರೋ ಅಥವಾ ಆ ರೀತಿ ನಕಲೀ ವೇಷ ಧರಿಸಿದ್ದರೋ ಅವರಿಗೇ ಗೊತ್ತು. ಈ ರಶಿಯನ್ ದೂತರು ನೀವು ಭಾರತಕ್ಕೆ

ಹಿಂದಿರುಗಿದ ನಂತರ ಕಂಪನೀ ಸರಕಾರವನ್ನು ಕಿತ್ತೊಗೆಯುವ ಪ್ರಯತ್ನ ಮಾಡಿದಲ್ಲಿ ನಮಗೆ ಯುದ್ಧ ಸಾಮಗ್ರಿಗಳ ಸಹಾಯ ಮಾಡುವ-ದಾಗಿ ತಿಳಿಸಿದರು. ಅವರ ಹೇಳಿಕೆಯಂತೆ ಭಾರತಕ್ಕೆ ಹಿಂದಿರುಗಿದ ನಂತರ ಈ ಪ್ರಯತ್ನ ಮಾಡಬೇಕೆಂಬ ವಿಚಾರ ಆಗ ಮೊಟ್ಟ ಮೊದಲು ನಮ್ಮ ಮನಸ್ಸಿನಲ್ಲಿ ಮೂಡಿತು.

"ನಾವಿಬ್ಬರೂ ವಿಚಾರ ವಿನಿಮಯ ಮಾಡಿ ಪ್ರಯತ್ನಿಸುವ ದೃಢ ನಿಶ್ಚಯವನ್ನು ಮಾಡಿ-ದೆವು... ಅಲ್ಲಾನಿಗೆ ಸಾವಿರ ಸಲ ನಮಿಸಿದರೂ ಕಡಿಮೆಯೇ. ಕಾರಣ, ನಾವು ಕೈಹಾಕಿದ ಕಾರ್ಯದಲ್ಲಿ ಸಾಕಷ್ಟು ಯಶಸ್ಸು ದೊರಕಿತು. ಕಂಪನಿಗೆ ಭಾರತದಲ್ಲಿ ಕೊಳ್ಳೆ ದರೋಡೆಯ ಸಲುವಾಗಿ ಕೊಟ್ಟ ಅಧಿಕಾರವನ್ನು ರದ್ದು-ಗೊಳಿಸಲಾಯಿತೆಂಬುದನ್ನು ನಾನು ಈ ದಿನವೇ ನಿಮ್ಮ ಹತ್ತಿರ ವೃತ್ತಪತ್ರಿಕೆಯಲ್ಲಿ ಓದಿದ್ದೇನೆ. ನಾವು ಒಂದು ವೇಳೆ ಭಾರತವನ್ನು ಬ್ರಿಟಿಷ್ ಆಳ್ವಿಕೆಯಿಂದ ಮುಕ್ತಗೊಳಿಸದೇ ಹೋದರೂ ಒಂದು ಆಸೆ ಇದೆ, ಅದೇನೆಂದರೆ ಭಾರತಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನ ಕಾನೂನು ಬರಬಹುದು. ಕೊಲೆ, ಸುಲಿಗೆ ಹಾಗೂ ದರೋಡೆಗಳನ್ನು ಮಾಡುವ ಈ ಕಂಪನಿ ಸರಕಾರಕ್ಕಿಂತಲೂ ಅದು ನಿಜವಾಗಿಯೂ ಶ್ರೇಷ್ಠ ದರ್ಜೆಯದಾಗಿರ ಬಹುದು, ಒಳ್ಳೆಯದಾಗಿರಬಹುದು. ಈ ದೇಶದಲ್ಲಿಯ ನನ್ನ ಅಸಂಖ್ಯ ಬಂಧುಗಳಿಗೆ ತಮ್ಮ ಭವಿಷ್ಯವನ್ನು ಉಜ್ವಲಗೊಳಿಸುವ ಸಮಯ ಸಿಗಬಹುದು. ಆದರೆ... ಇದನ್ನೆಲ್ಲ ನೋಡಲು ನಾನು ಜೀವಂತವಿರುವುದಿಲ್ಲವಲ್ಲ!

"ಸಾಹೇಬರೇ, ತಮ್ಮ ಕೃಪಾಕಟಾಕ್ಷಕ್ಕಾಗಿ ತಮ್ಮನ್ನು ಸಂತೋಷಪಡಿಸುತ್ತಿಲ್ಲ. ಮೊದಲಿ ನಿಂದಲೂ ತಮ್ಮ ಕೃಪೆ ನನಗೆ ಲಭಿಸಿದೆ. ನನ್ನ ಸಲುವಾಗಿ ತಮ್ಮ ಕೈಲಾದ ಸಹಾಯವನ್ನೆಲ್ಲ ಮಾಡಿದ್ದೀರಿ. ಇದಕ್ಕಿಂತಲೂ ಹೆಚ್ಚಿಗೆ ತಮ್ಮ ಕರ್ತವ್ಯವನ್ನು ಬದಿಗೊತ್ತುವದು ಅನುಚಿತ ವೆನಿಸುತ್ತದೆ. ನನ್ನ ಅಪರಾಧಕ್ಕಾಗಿ ದೇಹ-ದಂಡನೆಯಾಗುವದೆಂದು ನನಗೆ ಗೊತ್ತು. ಆದರೂ ನನ್ನ ಬಗ್ಗೆ ದಯೆ ಸದ್ಭಾವನೆಗಳನ್ನು ಇಲ್ಲಿಯು ವರೆಗೆ ತೋರಿಸಿದ ಪುದ ನನಗೆ ಮಾ-

ಗಿದೆ, ವಾಸ್ತವವಾಗಿ ನಿಮ್ಮ ಬಿಡಾರವನ್ನು ಪ್ರವೇಶಿಸುವ ಮೊದಲು ನಿಮ್ಮ ಬಗ್ಗೆ ನನ್ನ ಮನಸ್ಸಿನಲ್ಲಿ ಕೇವಲ ದ್ವೇಷ, ಅಸೂಯೆಗಳಂಥ ಭಾವನೆಗಳೇ ತುಂಬಿದ್ದವು. ಆದರೆ ಈಗಿನ ವಿದ್ರೋಹದ ಪರಿಸ್ಥಿತಿಯಲ್ಲಿ ಇಂಥ ಹೊಲಸು ಭಾವನೆಗಳಿಗೆ ಮನಸ್ಸಿನಲ್ಲಿ ಎಡೆ ಮಾಡಿಕೊಟ್ಟಿ ದ್ದಕ್ಕೆ ನನಗೇ ನಾಚಿಕೆಯಾಗುತ್ತಿದೆ...!

## ಮಾನವೀಯತೆಗೊಂದು ಸವಾಲು

"ಈ ರೀತಿಯಾಗಿ ಲಜ್ಜಿತನಾಗಿರುವ ಮೇಲಿನ ಪ್ರಸಂಗ ಎರಡನೆಯದು. ಇದಕ್ಕಿಂತಲೂ ಮೊದಲಿನ ಒಂದು ಘಟನೆ ನೆನಪಿಗೆ ಬರುತ್ತದೆ. ಅದು ಕಾನಪುರದಲ್ಲಿ ಕರ್ನಲ್ ನೇಪಿ-ಯರನು ಗಂಗಾ ನದಿಯ ದಡದಲ್ಲಿಯ ಹಿಂದೂ ಮಂದಿರಗಳನ್ನು ನಾಶಮಾಡುತ್ತಿದ್ದಾಗ. ಆಗ ಅಲ್ಲಿಯ ಪೂಜಾರಿಗಳ ಒಂದು ಪ್ರತಿನಿಧಿ ಮಂಡಳಿ ಹಿಂದೂ ದೇವಾಲಯಗಳನ್ನು ಕೆಡವಬಾರದೆಂದು ಕರ್ನಲ್ ನೇಪಿ-ಯರರನ್ನು ಭೇಟಿಯಾಗಲು ಹೋಗಿತ್ತು. ಅವರನ್ನು ಭೇಟಿಯಾದಾಗ ಆ ಗುಂಪಿನ ಮುಂದಿನ ಸಾಲಿನಲ್ಲಿ ನಾನೂ ನಿಂತಿದ್ದೆ. ಆಗ ಕರ್ನಲ್ ನೇಪಿಯರ್, ಮಂಡಳಿಯನ್ನುದ್ದೇಶಿಸಿ, 'ನಿಮ್ಮೆಲ್ಲರ ಕಣ್ಣೆದುರಿನಲ್ಲಿಯೇ ಬ್ರಿಟಿಷ್ ಸ್ತ್ರೀ-ಪುರುಷರು, ಮಕ್ಕಳು ನಿರ್ದಯವಾಗಿ ಕೊಲೆ ಮಾಡಲ್ಪಟ್ಟರೂ ನಿಮ್ಮಲ್ಲಿಯ ಯಾರೂ ಅದರ ವಿರುದ್ಧ ಮಾತನಾಡಲಿಲ್ಲವೇಕೆ? ಅವರ ಮೇಲೆ ದಯೆದೋರಲು ಯಾರಾದರೂ ವಿನಂತಿಸಿ ಕೊಳ್ಳಲಿಲ್ಲವೇಕೆ? ನಿಮ್ಮಲ್ಲಿ ಯಾರೇ ಆಗಲಿ ಈ ರೀತಿ ಮಾಡಿದ್ದಿದ್ದರೆ ನಾನು ಮಂದಿರಗಳನ್ನು ನಾಶಮಾಡುವದನ್ನು ನಿಲ್ಲಿಸುತ್ತೇನೆ,' ಅಂದ.

"ಕರ್ನಲ್ ನೇಪಿಯರನ ನ್ಯಾಯಪೂರ್ಣ ಭಾಷಣದಿಂದ ಎಲ್ಲ ಪೂಜಾರಿಗಳೂ ಚಕಾರ-ವೆತ್ತದೇ ಹೊರನಡೆದರು. ನಾನು ಸಹಿತ ಲಜ್ಜಿತ-ನಾಗಿ ಮುಖ ತಗ್ಗಿಸಿ ಅಲ್ಲಿಂದ ಕಾಲ್ತೆಗೆದೆ."

*

ಮಹಮ್ಮದ ಅಲೀಖಾನ ತನ್ನ ಜೀವನ ಕಥೆ-ಯನ್ನು ಪೂರ್ತಿಗೊಳಿಸಿ ಮೈಕೇಲನ ಕೈಗಿತ್ತ. ಅದನ್ನು ಪೂರ್ತಿ ಓದಿ ನೋಡಿದ ಮೈಕೇಲ್

"ಬಂಡಾಯ ಪ್ರಾರಂಭವಾಗುತ್ತಲೇ ನೀನು ಕಾನಪುರದಲ್ಲಿಯೇ ಇದ್ದೆಯೇನು? ದಯವಿಟ್ಟು ಈ ಪ್ರಶ್ನೆಗೂ ಉತ್ತರ ಬರೆದರೆ ನನಗೆ ನೆಮ್ಮದಿಯೆನಿಸುವದು," ಎಂದು ಬಿನ್ನವಿಸಿದ.

ಮಹಮ್ಮದ ಅಲಿಖಾನ ಮತ್ತೆ ಬರೆಯಲು ಪ್ರಾರಂಭ ಮಾಡಿದ. "ಅಲ್ಲಾನಿಗೆ ಸಾವಿರ ಧನ್ಯವಾದಗಳು. ಆಗ ನಾನು ಕಾನಪುರದಲ್ಲಿ ಇದ್ದಿದ್ದಿಲ್ಲ, ರೋಹಿಲಖಂಡದಲ್ಲಿರುವ ನಮ್ಮ ಮನೆಯಲ್ಲಿದ್ದೆ. ಪ್ರತ್ಯಕ್ಷ ಯುದ್ಧದಲ್ಲಿ ನನ್ನ ಕೈಗಳು ಯಾರ ರಕ್ತದಿಂದಲೂ ಕಳಂಕಿತವಾಗಿಲ್ಲ. ಇನ್ನು ಮೇಲೆ ಬಂಡಾಯ ಏಳಬಹುದು ಎಂಬುದು ಮೊದಲೇ ತಿಳಿದಿತ್ತು. ಆದ್ದರಿಂದ ನನ್ನ ಹೆಂಡತಿ, ಮಕ್ಕಳನ್ನು ಸುರಕ್ಷಿತವಾದ ಸ್ಥಳಕ್ಕೆ ಸಾಗಿಸುವ ಸಲುವಾಗಿ ನನ್ನ ಊರಿಗೆ ಅವರನ್ನು ಕರೆದುಕೊಂಡು ಹೋಗಿದ್ದೆ. ಮೀರತ, ಬರೇಲಿಗಳಲ್ಲಿ ಬಂಡಾಯ ಶುರುವಾದದ್ದು ನಮ್ಮ ಊರಲ್ಲಿಯೇ ನನಗೆ ತಿಳಿಯಿತು. ದಿಲ್ಲಿಯಲ್ಲಿ ಚೀಫ್ ಇಂಜನಿಯರ್ ಎಂದು ನನ್ನ ನೇಮಕವಾಗಿತ್ತು. ಕಂಪನಿಯ ಇಂಜನೀಯರರ ವಿಭಾಗವೊಂದು ಬಂಡಾಯಗಾರರನ್ನು ಕೂಡಿಕೊಂಡು ರುಡಕಿಯಿಂದ ಮೀರತ್ತಿಗೆ ನಡೆದಿತ್ತು.

"ಅವರೊಂದಿಗೆ ಸಂರಕ್ಷಣ ಸಾಮುಗ್ರಿಗಳ ವ್ಯವಸ್ಥೆ ಮಾಡುವ ವಿಶೇಷ ಕೆಲಸದ ಮೇಲೆ ಹೋಗಲು ನನಗೆ ಆದೇಶ ಬಂದಿತ್ತು. ೧೮೫೭ ನೇ ಸಪ್ಟೆಂಬರ್‌ನಲ್ಲಿ ದಿಲ್ಲಿಯನ್ನು ಮತ್ತೊಮ್ಮೆ ಸಂಪೂರ್ಣವಾಗಿ ಬ್ರಿಟಿಶರು ಆಕ್ರಮಿಸುವವರೆಗೂ ನಾನು ದಿಲ್ಲಿಯಲ್ಲಿಯೇ ಇದ್ದೆ. ಅದಾದ ನಂತರ ಮಾತ್ರ ನಾನು ಇದ್ದ ಬಿದ್ದ ಎಲ್ಲ ಸೈನ್ಯವನ್ನು ಕೂಡಿಸಿಕೊಂಡು ಲಖನೌ ನೆಡೆಗೆ ನಡೆದೆ. ಮಥುರೆಗೆ ತಿರುಗಿ ಬರುವ ಸೈನ್ಯದ ಸಲುವಾಗಿ ನಾನು ನಾವೆಗಳಿಂದ ವಿಶೇಷ ಸೇತುವೆಯೊಂದನ್ನು ತಯಾರಿಸಿದೆ. ಆ ವೇಳೆಯಲ್ಲಿ ನಮ್ಮ ಹತ್ತಿರ ಮೂವತ್ತು ಸಾವಿರ ಸಿದ್ಧ ಸೈನ್ಯವಿತ್ತು.

"ಲಖನೌಗೆ ಬರುತ್ತಲೂ ಪುನಃ ನನ್ನನ್ನು ಚೀಫ್ ಇಂಜನಿಯರ್ ಎಂತಲೇ ನೇಮಕ ಮಾಡಿದರು. ನವೆಂಬರ್ ತಿಂಗಳಿನಲ್ಲಿ ರೆಸಿಡೆನ್ಸಿ ಉಳಿಸಿಕೊಳ್ಳುವ ಸಲುವಾಗಿ ಬ್ರಿಟಿಷ್ ಸೈನ್ಯ ಬಿರುಸಿನಿಂದಲೇ ಯುದ್ಧ ನಡೆಸಿತು. ಆಗ ನಾನು ಲಖನೌನಲ್ಲಿದ್ದೆ. ಸಿಕಂದರಾಬಾದಿನಲ್ಲಿ ನಡೆದ ಭೀಕರ ಕಾಳಗವನ್ನು ಪ್ರತ್ಯಕ್ಷ ನೋಡಿದ್ದೆ. ಅಲ್ಲದೇ ಹಿಂದಿನ ರಾತ್ರಿಯೇ ದಂಡೆತ್ತಿ ಹೋಗುವ ವ್ಯವಸ್ಥೆಯನ್ನೂ ನಾನೇ ಮಾಡಿದ್ದೆ. ಸಿಕಂದರಾಬಾದನ್ನು ಬ್ರಿಟಿಷರು ಸ್ವಾಧೀನಪಡಿಸಿಕೊಳ್ಳುವದನ್ನು ನಾನು ಶಹನ್‌ಜಫದಿಂದ ನೋಡಿದೆ. ವಾಸ್ತವವಾಗಿ ಸಿಕಂದರಾಬಾದ ರಕ್ಷಣೆಯ ಸಲುವಾಗಿ ಮೂರು ಸಾವಿರ ಸೈನಿಕರಿದ್ದರೂ ದುರ್ದೈವದಿಂದ ಇವರಲ್ಲಿ ಯಾರೂ ಜೀವಂತವಾಗಿ ಉಳಿಯಲಿಲ್ಲ. ಹಿಂದಿನ ರಾತ್ರಿಯವರೆಗೂ ಹಸಿರು ಧ್ವಜ ಹಾರಾಡುತ್ತಿದ್ದ ಧ್ವಜಸ್ತಂಭದ ಮೇಲೆ ಮರುದಿನ ಬೇರೆ ಬಾವುಟವಿರುವದನ್ನು ನೋಡಿ ನನ್ನ ಸರ್ವಾಂಗವೂ ಕಂಪಿಸುತ್ತಿತ್ತು. ಆದರೆ ಕೇವಲ ಹಲ್ಲು



(ಸೇವೆಯಿಂದ ವಜಾ ಆದವರು)

"ಸಾರ್, ನನ್ನನ್ನು ನಂಬಿಕೊಂಡು ಎಂಟು ಜನ ಮನೆಯಲ್ಲಿದ್ದಾರೆ ಸಾರ್..."

"ಅದಾದ್ರೆ ಪರವಾ ಇಲ್ಲವೆ, ನನ್ನನ್ನು ಯಾರೂ ನಂಬೋದೇ ಇಲ್ಲಾಂತಾರೆ, ಅದಕ್ಕೇನು ಹೇಳ್ತೀರಿ?"...

ಕಡಿಯುವ ವಿನಾ ಬೇರೆ ಏನನ್ನೂ ಮಾಡಲು ನನಗೆ ಸಾಧ್ಯವಿರಲಿಲ್ಲ. ಇನ್ನು ಮೇಲೆ ಏನೂ ಉಪಯೋಗವಿಲ್ಲ ಎಲ್ಲವೂ ಮುಗಿದಿದೆ ಎಂದು ನನಗೆ ಮನವರಿಕೆಯಾಯಿತು. ಕೊನೆಗೆ ಶಹನ್ ಜಫ ಕಡೆಗಿರುವ ತೋಫುಗಳ ಬಾಯಿಗಳನ್ನು ಸಿಕಂದರಾಬಾದಿನ ಕಡೆಗೆ ತಿರುಗಿಸಿ ಗುಂಡು ಹಾರಿಸಲು ನಾನೆ ಆದೇಶಿಸಿದೆ.

"ಲಖನೌದ ಬಾಹ್ಯ ಹಾಗೂ ಆಂತರಿಕ ಸುರ-ಕ್ಷತೆಯ ಬಗ್ಗೆ ನಾನು ಮಾಡಿದ ವ್ಯವಸ್ಥೆಯನ್ನು ನೀವು ಲಖನೌಗೆ ಹೋದ ಮೇಲೆ ನೋಡ-ಬಹುದು. ಅಲ್ಲದೇ ಒಂದು ವೇಳೆ ನಮ್ಮ ತೋಫುದಾರರು ಸೈನಿಕರು ತಮ್ಮ ಪ್ರಾಣದ ಹಂಗು ತೊರೆದು, ತಮ್ಮ ತಮ್ಮ ಸ್ಥಾನಗಳಿಂದ ಕದಲದೇ ಧೈರ್ಯದಿಂದ ಯುದ್ಧ ಮಾಡಿದರೆ ಲಖನೌ ನಿಮ್ಮ ಕೈವಶವಾಗುವುದು ಬಹಳ ಕಠಿಣ. ಇಷ್ಟೇ ಅಲ್ಲದೆ ಈ ಕೆಲಸದಲ್ಲಿ ನಿಮ್ಮ ಅಸಂಖ್ಯಾತ ಸೈನಿಕರೂ ಬಲಿಯಾಗಬಹುದು."

## ಅವನು ದೌರ್ಬಲ್ಯವನ್ನು ಗೆದ್ದನು

ಮುಹಮ್ಮದ ಅಲೀಖಾನನ ಜೊತೆ ಹರಟುತ್ತ ಕುಳಿತ ಮೈಕೇಲನಿಗೆ ರಾತ್ರಿ ಹೇಗೆ ಕಳೆಯಿತೆಂದೆಂಬುದೇ ತಿಳಿಯಲಿಲ್ಲ. ಸೂರ್ಯೋದಯ-ವಾಗುತ್ತಿತ್ತು. ಅಲೀಖಾನ ತನ್ನ ಪ್ರಾತಃ-ಪ್ರಾರ್ಥನೆಯನ್ನು ಮುಗಿಸಿದ. ಇಡೀ ರಾತ್ರಿ-ಯನ್ನು ನಿದ್ರೆ ಇಲ್ಲದೇ ಕಳೆದಿದ್ದರೂ ಅವನು ಸ್ವಲ್ಪವೂ ದುರ್ಬಲನಾದಂತೆ ಕಂಡು ಬರಲಿಲ್ಲ. ಅವನ ಮನಸ್ಸು ವಿಚಲಿತವಾಗಿರಲಿಲ್ಲ. ಆದರೆ ಮೈಕೇಲ್ ಸಾಹೇಬನ ಜೊತೆ ಮಾತನಾಡು-ವಾಗ ಯಾವಾಗಲಾದರೂ ತನ್ನ ಹೆಂಡತಿ ಹಾಗೂ ಇಬ್ಬರು ಮಕ್ಕಳ ವಿಷಯ ಬಂದಾಗ ಮಾತ್ರ ಅವನ ಕಂಠ ತುಂಬಿ ಬರುತ್ತಿತ್ತು. ಆದರೆ ಇದೆಲ್ಲವೂ ಕ್ಷಣ ಮಾತ್ರ! ಮೈಕೇಲನಿಗೂ ಅವನ ಈ ಧೀರೋದಾತ್ತ ಸಹನಶೀಲತೆಯನ್ನು ಕಂಡು ಆಶ್ಚರ್ಯವೆನಿಸಿತು.

ಎಲ್ಲವೂ ಮುಗಿದ ನಂತರ ಮುಹಮ್ಮದ ಅಲೀಖಾನ ತನ್ನ ತಲೆ ಮೇಲಿನ ಕೂದಲಿನ ಗಂಟನ್ನು ಬಿಚ್ಚಿದ. ಅದರೊಳಗಿಂದ ಒಂದು ಬಂಗಾರದ ಉಂಗುರವನ್ನು ತೆಗೆದು ಅದನ್ನು ಮೈಕೇಲನ ಕೈಲಿಡುತ್ತ ಗದ್ಗದಿತ ಸ್ವರದಲ್ಲಿ, "ಸಾಹೇಬರೇ, ಈಗ ತಮಗೆ ಕೊಡಲು ನನ್ನ ಹತ್ತಿರ ಬೇರೇನೂ ಇಲ್ಲ. ನನ್ನನ್ನು ಬಂಧಿಸಿ-ದಾಗಲೂ ಸಹಿತ ಉಚ್ಚ ಉದಾತ್ತ ಭಾವನೆ-ಗಳಿಂದ, ಮಾನವೀಯ ಮಮತೆ, ಪ್ರೇಮ— ಸದ್ಭಾವನೆಗಳಿಂದ ಸತ್ಕರಿಸಿ ನನ್ನನ್ನು ಉಪಕೃತ-ನನ್ನಾಗಿ ಮಾಡಿದ್ದೀರಿ. ಆ ಪ್ರೀತಿಗೆ ಪ್ರತಿಯಾಗಿ ಇದನ್ನು ಸ್ವೀಕರಿಸಿ. ಖುಸ್ತುನಿಯಾದಲ್ಲಿ ಒಬ್ಬ ಸತ್ಪುರುಷ ನನಗೆ ಈ ಉಂಗುರವನ್ನು ಕೊಟ್ಟ. ಈ ಉಂಗುರ ಯಾರ ಬಳಿಯಲ್ಲಿರುವುದೋ ಅವರಿಗೆ ಅಮಂಗಳ, ಅನಿಷ್ಟಗಳು ಸಂಭವಿಸ-ಲಾರವು. ತಾವು ಈಗ ಲಖನೌ ಮೇಲೆ ದಂಡೆತ್ತಿ ಹೊರಟಿರುವಿರಿ. ಈ ಉಂಗುರ-ವನ್ನು ತಮ್ಮ ಹತ್ತಿರ ಇಟ್ಟುಕೊಳ್ಳಬೇಕು. ಇದರಿಂದ ತಮಗೆ ಯಾವದೇ ಕಷ್ಟಗಳು ಬರ-ಲಾರವು," ಎಂದು ಹೇಳಿದ ಅಲೀಖಾನ.

ಇಬ್ಬರ ಸಂಭಾಷಣೆಯೂ ಮುಗಿಯಿತು. ಹೊರಗಡೆ ಬ್ರಿಟಿಷ್ ಸೈನಿಕರು ಮುಹಮ್ಮದ ಅಲೀಖಾನನನ್ನು ಕರೆದುಕೊಂಡು ಹೋಗಲು ನಿಂತಿದ್ದರು. ಮೈಕೇಲ್ ಅತೀ ದುಃಖಭರಿತ ಹೃದಯದಿಂದ ಅಲೀಖಾನನನ್ನು ನಿರ್ವಾಹ ವಿಲ್ಲದೇ ಸೈನಿಕರಿಗೆ ಒಪ್ಪಿಸಿದ. ಅಲೀಖಾನನು ಹೋದ ಮೇಲೆ ಮೈಕೇಲ್ ಎಷ್ಟೋ ಹೊತ್ತು ಅದೇ ದಿಕ್ಕಿನತ್ತ ನೋಡುತ್ತಲೇ ನಿಂತಿದ್ದ. ಆದರೆ ಈಗ ಅವನು ಲಖನೌ ಮೇಲೆ ದಂಡೆತ್ತಿ ಹೋಗ-ಬೇಕಾದ ವೇಳೆ ಸಮೀಪಿಸುತ್ತಿತ್ತು.

ತನ್ನ ಸೈನ್ಯದೊಂದಿಗೆ ಲಖನೌನೆಡೆಗೆ ನಡೆದ ಮೈಕೇಲನಿಗೆ, ಕಾನ್ಪುರ— ಲಖನೌ ದಾರಿಯ [illegible] ಒಂದು ಗಿಡಕ್ಕೆ ಮುಹಮ್ಮದ ಅಲೀಖಾನ ಹಾಗೂ ಅವನ ಸಂಗಡಿಗರ ಶವಗಳು ನೇತಾಡುತ್ತಿರುವುದು ಕಾಣಿಸಿತು. ಮುಹಮ್ಮದ ಅಲೀಖಾನನ ಮುಖಮುದ್ರೆ [illegible] ಸುಂದರವೂ ಶಾಂತವೂ ಆಗಿತ್ತು. ✡

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ

# ರಂಜಾಳ ಹರಿ ಶೆಣೈ

ಜಿ. ಟಿ. ನಾರಾಯಣರಾವ್

ಕಾಲ ೧೯೩೭ರಷ್ಟು ಹಿಂದೆ. ಸ್ಥಳ ಕೊಡಗು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್ ಮಿಡಲ್; ಸ್ಕೂಲಿನ ಮೊದಲನೆಯ ತರಗತಿ. ಅಂದು ಇದನ್ನು ಫಸ್ಟ್ ಫಾರ್ಮ್ ಎಂದು ಕರೆಯುತ್ತಿದ್ದರು. ಈ ತರಗತಿಯ ವಿದ್ಯಾರ್ಥಿಗಳ ಪೈಕಿ ನಾನೂ ಒಬ್ಬನಾಗಿದ್ದೆ.

ಮೊದಲ ದಿವಸದ ಮೊದಲ ಪಾಠ. ಆ ತನಕ 'ಒಬ್ಬ ಉಪಾಧ್ಯಾಯ ಒಂದು ತರಗತಿ' ಸಂಬಂಧದಲ್ಲಿ ಬೆಳೆದು ಬಂದಿದ್ದ ನಮಗೆ ಈಗ 'ಒಂದು ವಿಷಯ ಒಬ್ಬ ಉಪಾಧ್ಯಾಯ' ಎಂಬ ನೂತನ ಸಂಬಂಧ ಬರಲಿದೆ ಎಂದು ತಿಳಿದು ಹೊಸತನ್ನು ಸ್ವಾಗತಿಸಲು ಕುತೂಹಲ, ಸಂಭ್ರಮಗಳಿಂದ ಸಿದ್ಧರಾಗಿದ್ದೆವು. ತರಗತಿಯ ೪೦—೫೦ ಸಿಡಿಮದ್ದುಗಳೂ ಸದ್ದಿಲ್ಲದೆ ಕಾಯುತ್ತಿದ್ದುದೊಂದು ವಿಶೇಷ ಅನುಭವವೇ ಸೈ.

ಎರಡನೆಯ ಗಂಟೆಯ ನಾದ ನಮಗೆ ಕೇಳಬೇಕು, ಅವರು ತರಗತಿಯ ಒಳಕ್ಕೆ ಕಾಲಿಡಬೇಕು– ಇದು ಅಂದು ಮಾತ್ರವಲ್ಲ, ಸದಾಸಹಜವಾಗಿ ಅವರು ಪಾಲಿಸಿಕೊಂಡು ಬಂದ ಕಾಲನಿಷ್ಠೆ.

ಬಿಳೀ ಕಚ್ಚೆ ಪಂಚೆ, ಮೇಲೆ ನೀಳವಾದ ಮುಚ್ಚು ಕೋಟು, ತಲೆಯನ್ನು ಅಮುಕಿ ಹಿಡಿದಿದ್ದ ಬಿಳೀ ಮುಂಡಾಸು ಇಷ್ಟು ಅವರ ಹೊರ ಉಡುಪು. ದೊಡ್ಡ ಆಳು. ಒಂದು ಪಾರ್ಶ್ವಕ್ಕೆ ವಾಲಿ ನಡೆಯುತ್ತಿದ್ದಂತೆ ಅನ್ನಿಸುತ್ತಿತ್ತು. ಮೊದಲ ನೋಟಕ್ಕೆ ಭಯಮಿಶ್ರಿತ ಗೌರವ ಮೂಡಿಸುವಂಥ ಗಂಭೀರ ವ್ಯಕ್ತಿತ್ವ.

ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಮೂರು ತಲೆಮಾರಿನ ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡಿ, ತಮ್ಮ ಸಮಗ್ರ ವ್ಯಕ್ತಿತ್ವನ್ನೂ ಶಿಕ್ಷಣಕ್ಷೇತ್ರಕ್ಕೆ ಧಾರೆ ಎರೆದು, ಚಿಂತನೆ ನಡೆ ನುಡಿಗಳಿಂದ ಸಾವಿರಾರು ಎಳೆಯರ ಬದುಕಿನ ಮೇಲೆ ಎಂದೂ ಮಾಸದ ಮೊಹರೊತ್ತಿ 'ಶ್ರೇಷ್ಠನಾದ ಪುರುಷ ಯಾವುದನ್ನು ಆಚರಿಸುವನೋ ಅದನ್ನೇ ಇತರ ಜನರೂ ಅನುಸರಿಸುತ್ತಾರೆ' ಎಂಬ ಗೀತೋಕ್ತಿಗೆ ಜೀವಂತ ಜ್ವಲಂತ ನಿದರ್ಶನವಾಗಿ ಬದುಕಿ ಬಾಳಿಹೋದ ಮಹಾನುಭಾವರವರು. ಅವರೇ ರಂಜಾಳ ಹರಿ ಶೆಣೈ (೧೮೯೨_೧೯೭೭), ವಿದ್ಯಾರ್ಥಿಗಳ ಬಾಯಿಯಲ್ಲಿ ಶೆಣೈ ಮಾಸ್ತರರು.

೨

ಮುಂದಿನ ಆರು ವರ್ಷಗಳ ಕಾಲ, ಅಂದರೆ ಆರನೆಯ ಫಾರ್ಮ್ (ಎಸ್. ಎಸ್. ಎಲ್. ಸಿ.) ದಾಟುವವರೆಗೂ, ಅವರು ನಮ್ಮ ಗುರುಗಳಾಗಿ ಪ್ರಧಾನತಃ ಗಣಿತವನ್ನು ಬೋಧಿಸಿದರು. ಕೆಲವೊಂದು ತರಗತಿಗಳಲ್ಲಿ ಇಂಗ್ಲಿಷನ್ನು ಸಹ ಪಾಠ ಮಾಡಿದ್ದರು. ಅಂದು ಶಿಕ್ಷಣ ಮಾಧ್ಯಮ ಇಂಗ್ಲಿಷ್. ಎಲ್ಲಿವರೆಗೆ ಎಂದರೆ ಖುದ್ದು ಕನ್ನಡವನ್ನು ಕೂಡ ಇಂಗ್ಲಿಷಿನಲ್ಲಿ ವಿವರಿಸುವುದು ಅಪರೂಪವಾಗಿರಲಿಲ್ಲ; ಕನ್ನಡವನ್ನು ಮಾರುಕಟ್ಟೆ ವ್ಯವಹಾರಕ್ಕಿಂತ ಆಚೆ ಬಳಸತಕ್ಕದ್ದಲ್ಲವೆಂಬ ಭಾವನೆ ಜನಸಾಮಾನ್ಯರಲ್ಲಿ ಕೂಡ ವ್ಯಾಪಕವಾಗಿ ಪ್ರಚಲಿತವಾಗಿದ್ದ ಆ ದಿನಗಳಂದು ಶೆಣೈ ಮಾಸ್ತರರು ಗಣಿತ ಹಾಗಿರಲಿ, ಸಾಕ್ಷಾತ್ ಇಂಗ್ಲಿಷನ್ನೇ ಕನ್ನಡದಲ್ಲಿ ವಿವರಿಸಿ ಬೋಧನೆಯನ್ನು ಹೊಸ ಧಾಟಿಯಲ್ಲಿ ಹಾಡಿದರು. ಇದರಿಂದ ವಿಷಯ ನಮಗೆ ಚೆನ್ನಾಗಿ ಮನದಟ್ಟಾಗುವುದರ ಜೊತೆಗೆ ಉಭಯ ಭಾಷೆಗಳಲ್ಲಿ ಕೈಯಾಡಿಸಲು ಸಾಕಷ್ಟು ಧೈರ್ಯ ಕೂಡ ಒದಗಿತು.

"ಬೋಧನ ಕ್ರಮದಲ್ಲಿ ಈ ಹಾದಿ ಹಿಡಿಯಲು ನಿಮಗೆ ಹೇಗೆ ಪ್ರೇರಣೆ ಬಂತು?" ಎಂಬುದಾಗಿ ಈಚೆಗೆ (೧೯೭೩) ನಾನವರನ್ನು ಪ್ರಶ್ನಿಸಿದ್ದೆ. ಅವರು ನೀಡಿದ ಉತ್ತರದ ಸಾರಾಂಶವಿದು: "ಪಂಜೆ ಮಂಗೇಶರಾಯರು (೧೮೭೪—೧೯೩೭) ನಮ್ಮ ಮುಖ್ಯೋಪಾಧ್ಯಾಯರಾಗಿದ್ದುದು ಸರಿಯಷ್ಟೆ. ಅವರು 'ತಿಂಡಿಯಲ್ಲಿ ರುಚಿ ಇದ್ದರೆ ಮಕ್ಕಳು ಸಹಜವಾಗಿ ಬಾಯಾಡಿಸಿ ತಿನ್ನುವಂತೆ, ಬಣ್ಣದ ಒಡವೆಗಳು ಹರಡಿದ್ದರೆ ಅವನ್ನು ತಾವಾಗಿ ಕೈಯಾಡಿಸಿ ಎತ್ತಿಕೊಳ್ಳುವಂತೆ, ಉಪಾಧ್ಯಾಯನ ಮನಸ್ಸು ಚಿಕ್ಕವರ ಮನಸ್ಸಿಗೆ ಎಟುಕುವಂತೆ ರಂಜಕವಾಗಿದ್ದರೆ ಶಿಕ್ಷಣವು ಸೊಗಸಾಗುವುದು, ಸುಲಭವಾಗುವುದು' ಎಂಬ ತತ್ತ್ವವನ್ನು ಅನುಷ್ಠಾನಕ್ಕೆ ತಂದಿದ್ದ ಮಹನೀಯರು ನನಗಿಂತ ೧೮ ವರ್ಷ ಹಿರಿಯರಾಗಿದ್ದ ಆ ಸಫಲ ಕರ್ಮಯೋಗಿಯ ಪ್ರಭಾವ ನನ್ನ ಮೇಲಾದದ್ದು ನಿರೀಕ್ಷಿತವೇ. ನನ್ನ ಮನೆ ಮಾತು ಕೊಂಕಣಿ. ವಿದ್ಯಾಭ್ಯಾಸ ನಡೆದದ್ದು ಇಂಗ್ಲಿಷ್ ಮಾಧ್ಯಮದಲ್ಲಿ. ದ್ವಿತೀಯ ಭಾಷೆ ಸಂಸ್ಕೃತ. ಮುಂದೆ ಉಪಾಧ್ಯಾಯ ವೃತ್ತಿಯಲ್ಲಿ ಕಲಿಸುತ್ತಿದ್ದುದು ಇಂಗ್ಲಿಷ್ ಹಾಗೂ ಗಣಿತ ವಿಷಯಗಳನ್ನು.



ಇಲ್ಲಿಯೂ ಮಾಧ್ಯಮ ಇಂಗ್ಲಿಷೇ. ಹೀಗಾಗಿ ನನಗೆ ಕನ್ನಡವನ್ನು ಶಾಸ್ತ್ರೀಯವಾಗಿ ಓದುವ ಮತ್ತು ಕಲಿಯುವ ಅವಕಾಶ ಎಂದೂ ಒದಗಲೇ ಇಲ್ಲ. ನನ್ನ ಕನ್ನಡದ ಮಟ್ಟ ವ್ಯಾವಹಾರಿಕ ಜೀವನಕ್ಕೆ ಸಾಕಾಗುವಷ್ಟು ಮಾತ್ರ ಇತ್ತು ಅಷ್ಟೆ. ಪಂಜೆಯವರು ನಮ್ಮ ಶಾಲೆಗೆ ಬಂದ ಬಳಿಕ ಅವರ ನಿತ್ಯ ಒಡನಾಟದಲ್ಲಿ ನನಗೆ ಕನ್ನಡದ ನಿಜವಾದ ಚೆಲುವನ್ನು ಕೇಳಿ ಆನಂದಿಸಲು ಸದವಕಾಶ ಒದಗಿತು. ಇದರಿಂದಾಗಿ ಕನ್ನಡವನ್ನು ಕುರಿತು ನನ್ನಲ್ಲಿ ಗೌರವ ಕುತೂಹಲಗಳು ಮಿಡಿದುವು. ಇದರ ಜೊತೆಗೆ-ಮಕ್ಕಳಿಗೆ ವಿದ್ಯಾಬೋಧನೆ ಹೇಗೆ ನಡೆಯಬೇಕು ಎನ್ನುವ ವಿಚಾರ ನಮ್ಮೀರ್ವರಲ್ಲಿಯೂ ಒಮ್ಮತ ವಿತ್ತು. ಅಂದರೆ ಪ್ರತ್ಯಕ್ಷಬೋಧನೆ ನಡೆಯ ಬೇಕಿತ್ತು. ಸ್ವಾನುಭವದಿಂದಲೂ ಸ್ವಂತ ಪರಿಸರದ ವೀಕ್ಷಣೆಯಿಂದಲೂ ವಿದ್ಯಾರ್ಥಿ ವಿವಿಧ ಜ್ಞಾನ-ಪ್ರಕಾರಗಳಿಗೆ ಪ್ರವೇಶ ಪಡೆಯಬೇಕು ಎಂಬುದು ಅವರದು ಹೇಗೊ ಹಾಗೆ ನನ್ನದೂ ಅಭಿಪ್ರಾಯ. ಅಂದಿನ ಗಣಿತ ಪುಸ್ತಕಗಳಲ್ಲಿ ಇರುತ್ತಿದ್ದ ಉದಾಹರಣೆಗಳೆಲ್ಲವೂ ಇಂಗ್ಲೆಂಡಿನ ಜೀವನಕ್ಕೆ ಸಂಬಂಧಿಸಿದವು. ಆ ಪುಸ್ತಕಗಳೆಲ್ಲವೂ ಅಲ್ಲಿನ-ವಾಗಿದ್ದುದೇ ಇದರ ಕಾರಣ. ಹೀಗಾಗಿ ನಮ್ಮ ಮಾರುಕಟ್ಟೆ ವಹಿವಾಟುಗಳು, ನಮಗೆ ಎದುರಾಗುವ ಪರಿಸರದ ವಿಶಿಷ್ಟ ಸಮಸ್ಯೆಗಳು ಇವಾವು-ದಕ್ಕೂ ಅವುಗಳಲ್ಲಿ ಅವಕಾಶವಿರಲಿಲ್ಲ. ಆದ್ದರಿಂದ ನಾನೇ ಹೊಸ ಹೊಸ ಸನ್ನಿವೇಶಗಳನ್ನು ಸೃಜಿಸಿ ಕೊಂಡು ಸ್ಥಳೀಯ ವಿದ್ಯಮಾನಗಳ ಉದಾಹರಣೆ ಗಳನ್ನು ನೀಡುತ್ತ ಲೆಕ್ಕ ಪಾಠ ಮಾಡುವು ದಿತ್ತು. ಪಂಜೆಯವರ ಒಡನಾಟದಿಂದ ನನ್ನಲ್ಲಿ ಹೊಸತೊಂದು ಆಸೆ ಅಂಕುರಿಸಿತು— ಕನ್ನಡ ದಲ್ಲಿ ಲೆಕ್ಕ ಪಾಠ ಮಾಡಬೇಕೆಂಬುದೇ ಆ ಆಸೆ. ಅದೇ ವೇಳೆ (೧೯೨೨) ಮದ್ರಾಸಿನ ಎಸ್. ಎಸ್. ಎಲ್. ಸಿ. ಬೋರ್ಡ್ ಹೊಸ-ತೊಂದು ಆಜ್ಞೆ ಹೊರಡಿಸಿ ಮಾತೃಭಾಷೆಯ ಮೂಲಕ ಭಾಷೇತರ ಪಾಠಗಳನ್ನು ಕಲಿಸಲು ಮನ್ನಣೆ ನೀಡಿತು. ಇದರ ಅನುಸಾರ ನಾನು ೧೯೨೨ರಲ್ಲಿ ಎರಡನೆಯ ಫಾರ್ಮಿನಲ್ಲಿ ಕನ್ನಡ ಮಾಧ್ಯಮದ ಮೂಲಕ ಗಣಿತ ಪಾಠವನ್ನು ಪ್ರಾರಂಭಿಸಿದೆ. ಈ ತಂಡದೊಡನೆ ನಾನು ಮೇಲಿನ ತರಗತಿಗಳಿಗೆ ಕ್ರಮವಾಗಿ ಸಾಗಿ ೧೯೩೩ರಲ್ಲಿ ನಮ್ಮ ಶಾಲೆಯ ಕನ್ನಡ ಮಾಧ್ಯಮದ ಲಘುಗಣಿತ ವಿದ್ಯಾರ್ಥಿಗಳನ್ನು ಮದ್ರಾಸು ಎಸ್. ಎಸ್. ಎಲ್. ಸಿ. ಪರೀಕ್ಷೆ ಬರೆಯಲು ಕಳಿಸಿದೆ. ಈ ಪ್ರಯೋಗ ಕನ್ನಡ ನಾಡಿನಲ್ಲಿ ಜರುಗಿದ ಪ್ರಥಮ ಪ್ರಯತ್ನ. ಅದು ತುಂಬ ಯಶಸ್ವಿ ಆಯಿತು. ಈ ಹೊಸ ಅನುಭವದಿಂದ ಉದ್ದೀಪ್ತನಾದ ನಾನು ಮುಂದೆ ಕೆಲವು ವರ್ಷಗಳ ತರುವಾಯ, ೧೯೩೯-೪೧ರ ಅವಧಿಯಲ್ಲಿ, ಹೊಸ ಗಣಿತ ಪುಸ್ತಕಗಳನ್ನೂ (ಮೂರು, ನಾಲ್ಕು ಮತ್ತು ಐದನೆಯ ತರಗತಿ-ಗಳಿಗೆ) ಮತ್ತು ಆ ಬಳಿಕ ಒಂದರಿಂದ ಮೂರ-ನೆಯ ಫಾರ್ಮುಗಳ ಉಪಯೋಗಕ್ಕಾಗಿ 'ಸಾಮಾನ್ಯ ವಿಜ್ಞಾನ' ಪಠ್ಯಪುಸ್ತಕಗಳನ್ನೂ ಬರೆದೆ. ಮಂಗಳೂರಿನ ಓರ್ವ ಪ್ರಕಾಶಕರು ಅವನ್ನು ಪ್ರಕಟಿಸಿದರು. ಇದೇ ಅವಧಿಯಲ್ಲಿ ಮಡಿಕೇರಿಯ ಒಬ್ಬ ಪ್ರಕಾಶಕರು ನಾನು ಬರೆದಿದ್ದ ಒಂದನೆಯ, ಎರಡನೆಯ ಮತ್ತು ಮೂರನೆಯ ಫಾರ್ಮುಗಳ ಗಣಿತಪಾಠ ಪುಸ್ತಕ-ಗಳನ್ನು ಪ್ರಕಟಿಸಿದ್ದರು. ಹೈಸ್ಕೂಲ್ ತರಗತಿ-ಗಳ ಉಪಯೋಗಕ್ಕಾಗಿ ಕನ್ನಡ ಮಾಧ್ಯಮದಲ್ಲಿ ಲಘುಗಣಿತ ಪುಸ್ತಕಗಳನ್ನು ಪ್ರಕಟಿಸಲು ಇಚ್ಛಿ-ಸಿದ ಪ್ರಕಾಶಕರು ಯಾರೂ ನನಗೆ ನೆರವಾಗಲಿಲ್ಲ. ಕಾರಣವೇನೆಂದರೆ ಆಗಿನ ಕಾಲದಲ್ಲಿ (೧೯೩೩) ಇತರ ಯಾವ ಶಾಲೆಯಲ್ಲಿಯೂ ಈ ಮಾಧ್ಯಮ ಬಳಕೆಗೆ ಬಂದಿರಲಿಲ್ಲ."

೩

೧೮೯೭ರ ಜುಲೈ ೯ ರಂದು ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದಲ್ಲಿ ರಂಜಾಳ ಉಪೇಂದ್ರ ಶೆಣೈಯವರ ಮಗನಾಗಿ ಜನಿಸಿದ ಹರಿ ಶೆಣೈ-ಯವರು ತೀರ ಎಳವೆಯಲ್ಲಿಯೇ ತಂದೆಯನ್ನು ಕಳೆದುಕೊಂಡು ತಮ್ಮ ಮೂವರು ಸಹೋದರರ ಸಮೇತ ಅಜ್ಜ ವಾಮನ ಶೆಣೈಯವರ ಉಡಿ-ಯಲ್ಲಿ ಬೆಳೆದರು. ಆರ್ಥಿಕವಾಗಿ ದುರ್ಬಲರಾಗಿದ್ದ ಈ ವೃದ್ಧರ ನೆರಳಿನಲ್ಲಿ ಪ್ರಾಥಮಿಕ ಶಿಕ್ಷಣ-ವೇನೋ ಅಂತೂ ಇಂತೂ ಊರಲ್ಲೇ ಮುಗಿ-

ಯಿತು. ಮುಂದಿನ ಮಜಲು ದೂರದ ಮಂಗಳೂರಿನಲ್ಲಿ ಮಾತ್ರ ಲಭ್ಯವಿತ್ತು–ಅದು ಶ್ರೀಮಂತರಿಗೆ ಮಾತ್ರ ಮೀಸಲಾಗಿದ್ದ 'ವಿಲಾಸ ಸಾಮಗ್ರಿ'. ಹರಿ ಶೆಣೈಯವರ ವಿದ್ಯಾಭ್ಯಾಸ ಅಲ್ಲಿಗೇ ಮೊಟಕಾಗಿಹೋಗುವುದು ಅನಿವಾರ್ಯವಾಗಿತ್ತು. ಆದರೆ ಆ ತರುಣ ಪ್ರತಿಭೆ ಎಂಥ ಕೋಡುವ ಕುಳಿನಲ್ಲಿಯೂ ಸಟೆದು ನಿಲ್ಲಬಲ್ಲ ತಾಕತ್ತನ್ನು ಪಡೆದು ಬಂದಿತ್ತು. ಬಡತನವೊ ಅರೆಹೊಟ್ಟೆಯೊ ಅಂತೂ ಇವರು ಮಂಗಳೂರು ಶಹರನ್ನು ಏರಿಯೇ ಏರಿದರು. ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಉತ್ತಮಾಂಕಗಳೂ ಉತ್ತಮ ಸ್ಥಾನವೂ ಬಂದುವು. ಸ್ವಪ್ರಯತ್ನದಿಂದ ಇವರು ಸ್ಥಳೀಯ ಸಾರ್ವಜನಿಕ ನ್ಯಾಸವೊಂದರಿಂದ ವಿದ್ಯಾರ್ಥಿ ವೇತನವನ್ನು ಸಾಲ ರೂಪದಲ್ಲಿ ಗಳಿಸಿ ಬೆಂಗಳೂರಿಗೆ ತೆರಳಿದರು. ಅಲ್ಲಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಮುಗಿಸಿ ಒಡನೆ ಉಪಾಧ್ಯಾಯ ವೃತ್ತಿಯನ್ನು ಸ್ವೀಕರಿಸಿದರು. ಮುಂದೆ ಮದ್ರಾಸಿನ ಉಪಾಧ್ಯಾಯ ತರಬೇತಿ ಕಾಲೇಜನ್ನು ಸೇರಿ ಎಲ್. ಟಿ. ಡಿಗ್ರಿಯನ್ನು ಪಡೆದು ತಮ್ಮ ವೃತ್ತಿಗೆ ಪೂರ್ಣಾರ್ಹತೆಯನ್ನು ಗಳಿಸಿದರು.

ವಿದ್ಯಾಭ್ಯಾಸ ಮುಗಿಯುವಾಗಲೇ ಇವರನ್ನು ಹಿರಿಯ ಸಂಸಾರದ ಭಾರ ಮತ್ತು ಆ ತನಕ ಮಾಡಿದ ಸಾಲದ ಹೊರೆ ಪ್ರಬಲವಾಗಿ ಜಗ್ಗತೊಡಗಿದ್ದುವು. ಕೈಗೆ ದೊರೆಯುತ್ತಿದ್ದ ಬಲು ಕಡಿಮೆ ತಲಬಿನಿಂದ (ಪ್ರಾಯಶಃ ತಿಂಗಳಿಗೆ ರೂಪಾಯಿ ಇಪ್ಪತ್ತು ಕೂಡ ಇದ್ದಿರಲಾರದು) ಆರ್ಥಿಕ ಹಾಗೂ ಮಾನಸಿಕ ಸಮತೋಲವನ್ನು ಕಾದಿಟ್ಟುಕೊಳ್ಳುವುದೇ ಪರಮ ಸಾಹಸವಾಗಿತ್ತು. ಹುಟ್ಟು ಆಶಾವಾದಿ ಮತ್ತು ಗುರಿಸಾಧನೆಯಲ್ಲಿ ಮಹಾ ಛಲವಂತ ಆಗಿದ್ದ ಹರಿ ಶೆಣೈಯವರು ಈ ತಾತ್ಕಾಲಿಕ ಪೀಡನೆಗಳಿಂದ ವಿಚಲಿತರಾಗಲಿಲ್ಲ, ಅವುಗಳಿಗೆ ಒಳದಾರಿ ಒಡಪುಗಳನ್ನು ಹುಡುಕುವತ್ತ ಮನಸ್ಸನ್ನು ಹರಿಯಗೊಡಲಿಲ್ಲ. ಬದಲು, ಅವುಗಳಿಂದ ಸತ್ತ್ವ ಪೋಷಣೆ ಹೀರಿ ತ್ರಿವಿಕ್ರಮನಾಗಿ ಬೆಳೆದರು: ಉತ್ತಮ ಉಪಾಧ್ಯಾಯನಾಗಿ, ಸಮರ್ಥ ಪ್ರಯೋಗಪಟುವಾಗಿ, ಶ್ರೇಷ್ಠ ಮಾನವನಾಗಿ.

೪

"ಒಬ್ಬ ಹಾಲು ಮಾರಾಟಗಾರ ೨೫ ಸೇರು ಹಾಲನ್ನು ರೂಪಾಯಿಗೆ ೩ ಸೇರಿನಂತೆ ಕೊಂಡು ಅದಕ್ಕೆ ೭ ಸೇರು ನೀರನ್ನು ಬೆರೆಸಿ ಈ ಮಿಶ್ರಣವನ್ನು ರೂಪಾಯಿಗೆ ೨⅔ ಸೇರಿನಂತೆ ಮಾರಿದರೆ ಅವನು ಗಳಿಸಿದ ಲಾಭದ ಸೇಕಡ ಪ್ರಮಾಣ ಎಷ್ಟು?" ಈ ಮಾದರಿಯ ಪ್ರಶ್ನೆಗಳು ಅಂದಿನ ಸಾಮಾನ್ಯ ಗಣಿತ ಪಠ್ಯಪುಸ್ತಕಗಳಲ್ಲಿ ಇರುತ್ತಿದ್ದುದು ವಾಡಿಕೆ. ಶೆಣೈ ಮಾಸ್ತರರು ಇಂಥವನ್ನು ಎಂದೂ ಪಾಠ ಮಾಡುತ್ತಿರಲಿಲ್ಲ. "ನೀವು ಮೋಸಗಾರಿಕೆಯ ಹಿಕ್ಮತ್ತುಗಳಿಂದ ಸೇಕಡ ಗಣನೆಗಳಲ್ಲಿ ಪರಿಣತರಾಗುವುದು ಖಂಡಿತ ಬೇಡ, ನಾನೇ ತಯಾರಿಸಿರುವ ಪ್ರಶ್ನೆಗಳ ಮೂಲಕ ಸೇಕಡ ಗಣನೆಗಳ ತಂತ್ರವನ್ನು ಹೇಳಿಕೊಡುತ್ತೇನೆ" ಎಂದು ಹೇಳಿ ಬದುಕಿನಿಂದ ಆಯ್ದ ಒಳ್ಳೆಯ ಉದಾಹರಣೆಗಳ ಮೂಲಕ ಪಾಠ ಕಲಿಸುತ್ತಿದ್ದರು. ಉತ್ತಮ ಉಪಾಧ್ಯಾಯ ತಾನು ಕಲಿಸುವ ವಿಷಯದ ಮೂಲಕ ಸುಸಂಸ್ಕೃತ ಜೀವನದತ್ತ ವಿದ್ಯಾರ್ಥಿಗಳನ್ನು ಕೊಂಡೊಯ್ಯಬೇಕು ಎಂದು ಅವರು ದೃಢವಾಗಿ ನಂಬಿ ಆಚರಣೆಗೆ ತಂದಿದ್ದ ಹಿರಿಯರು.

ಮಾತೃಭಾಷೆಯ ಮೂಲಕವೇ ವಿದ್ಯಾರ್ಥಿಗಳಿಗೆ ಬೋಧನೆ ನಡೆಯಬೇಕು ಎಂಬುದನ್ನು ಶೆಣೈಯವರು ೧೯೨೦ರಷ್ಟು ಹಿಂದೆಯೇ ಕಂಡುಕೊಂಡು ಆ ದಿಶೆಯಲ್ಲಿ ಪ್ರಯೋಗಗಳನ್ನು ನಡೆಸಿದರು. ಖುದ್ದು ಪಂಜೆಯವರಿಂದಲೇ ಪ್ರಭಾವಿತರಾದ ಶೆಣೈ ಮಾಸ್ತರರು (೧೯೨೨–೨೯ರ ಅವಧಿಯಲ್ಲಿ ಪಂಜೆಯವರು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದರು) ಇಂದು ನಾವೇನು ನಯೀ ತಾಲೀಮ್ ಇಲ್ಲವೇ ನವೀನ ಶಿಕ್ಷಣ ಕ್ರಮವೆಂದು ಕರೆಯುತ್ತೇವೋ ಇದನ್ನು ಅಂದೇ ರೂಢಿಗೆ ತಂದಿದ್ದರು. ವಿಷಯ ಯಾವುದೇ ಇರಲಿ, ಪಾಠ ಯಾವುದೇ ಆಗಲಿ ಅದನ್ನು ನಮ್ಮ (ವಿದ್ಯಾರ್ಥಿಗಳ) ಅನುಭವ ಹಾಗೂ ನಿತ್ಯ ಚಟುವಟಿಕೆಗಳ ಸುತ್ತ ಎಳೆ ಎಳೆಯಾಗಿ ಅರಳುವಂತೆ ಮಾಡಿ ಅದರ ಸ್ವಾರಸ್ಯವನ್ನು ನಾವು ಪೂರ್ಣವಾಗಿ

ಆಸ್ವಾದಿಸುವಂತೆ ಮಾಡುತ್ತಿದ್ದ ಪ್ರಯೋಗ ಕುಶಲಿಗಳಿವರು.

ಚಿಕ್ಕಂದಿನಲ್ಲಿಯೂ ಮುಂದೆ ವಯೋಕಾಲದಲ್ಲಿಯೂ ತುಂಬು ಸಂಸಾರವನ್ನು ನಿರ್ವಹಿಸಬೇಕಾಗಿ ಬಂದದ್ದರಿಂದ ಶೆಣೈ ಮಾಸ್ತರರು ಎಂದೂ ಶ್ರೀಮಂತರಾಗಲಿಲ್ಲ. ಅವರು ಮನಸ್ಸು ಮಾಡಿದ್ದರೆ, ಮಡಿಕೇರಿಯಂಥ ಕಾಫೀ ಧಣಿಗಳ ರಾಜಾಧಿರಾಜರ ನಾಡಿನಲ್ಲಿ, ಖಾಸಗಿ ಪಾಠ ಹೇಳಿ ಅರಮನೆ ಕಟ್ಟಿಸಬಹುದಾಗಿತ್ತು, ಬೆಳ್ಳಿ ತಾಟಿನಲ್ಲಿ ಉಣ್ಣಬಹುದಾಗಿತ್ತು, ಸುಪ್ಪತ್ತಿಗೆಯಲ್ಲಿ ಹೊರಳಬಹುದಾಗಿತ್ತು. ಆದರೆ ಅವರೆಂದೂ ಈ ಆಮಿಷಗಳಿಗೆ ಬಲಿಯಾಗಲಿಲ್ಲ. ಉಪಾಧ್ಯಾಯನಾದ ತಾನು ಎಂದೂ ಹಣದ ಹಮ್ಮಿಗೆ ಅಥವಾ ದರ್ಪದ ಬಿಮ್ಮಿಗೆ ಬಗ್ಗತಕ್ಕದ್ದಲ್ಲ ಎಂದು ಅವರು ದೃಢವಾಗಿ ನಂಬಿದ್ದರು. "ನಾನು ಸ್ವಂತೇಚ್ಛೆಯಿಂದ ಉಪಾಧ್ಯಾಯನಾದವ, ಸನ್ನಿವೇಶದ ಅನಿವಾರ್ಯತೆಯಿಂದ ಅಲ್ಲ. ಇನ್ನೊಮ್ಮೆ ಈ ಬದುಕನ್ನು ಬಾಳುವ ಸದವಕಾಶವನ್ನು ಭಗವಂತ ನನಗೆ ಅನುಗ್ರಹಿಸಿದ್ದಾದರೆ ಪುನಃ ನಾನು ಉಪಾಧ್ಯಾಯನೇ ಆಗಿರಲು ಇಷ್ಟಪಡುತ್ತೇನೆ"—ಇದು ಅವರ ಜೀವನ ಸಂಗೀತದ ಪಲ್ಲವಿ.

ಶಿ

ಅವರ ಶಿಸ್ತಿನ ಮಾದರಿ ನೋಡಿ: ಈಗ ಬಳ್ಳಾರಿಯ ವೈದ್ಯಕೀಯ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿರುವ ಡಾ. ಆರ್. ಎಚ್. ಎಸ್. ಶೆಣೈಯವರು ನಮ್ಮ ಶೆಣೈ ಮಾಸ್ತರರ ಮಗ; ನಾವಿಬ್ಬರೂ ಒಡನಾಡಿಗಳು ಮತ್ತು ಒಡನೋದಿಗಳು. ತರಗತಿಯಲ್ಲಿ ಎಂದೂ ತಂದೆ ತನ್ನ ಮಗನಿಗೆ ಒಲುಮೆ ರಿಯಾಯತಿ ತೋರಿಸಿದ್ದು ಇರಲೇ ಇಲ್ಲ. ಒಂದು ಶುಕ್ರವಾರ ಮಗ (ವಿದ್ಯಾರ್ಥಿ) ತಂದೆಯ (ಉಪಾಧ್ಯಾಯ) ತರಗತಿಗೆ ತಡವಾಗಿ ಬಂದ. ಆ ಮೊದಲೇ ಹಾಜರಿ ಕರೆದು ಮುಗಿದುಹೋಗಿತ್ತು; ಮಗರಾಯನಿಗೆ ಗೈರುಹಾಜರಿ ಮೊಹರು ಬಿದ್ದಿತ್ತು. ಇದನ್ನು ಅರಿತ ಮಗ ಮನೆಯಲ್ಲಿ ತಾಯಿಯ 'ನ್ಯಾಯಾಲಯ' ದಲ್ಲಿ ತಂದೆಯ ವಿರುದ್ಧ ದಾವೆ ದಾಖಲು ಮಾಡಿದ: ಶುಕ್ರವಾರದ ಸಂತೆ ವ್ಯಾಪಾರಕ್ಕಾಗಿ ಖುದ್ದು ತಂದೆಯೇ ತನ್ನನ್ನು ಮಾರುಕಟ್ಟೆಗೆ ಕಳಿಸಿದ್ದರಿಂದ ತರಗತಿ ತಲುಪಲು ತಡವಾಯಿತು. ಆದ್ದರಿಂದ ತಂದೆ ತನ್ನ ಹೆಸರಿನೆದುರು ಗೈರುಹಾಜರಿ ಗುರುತು ಮಾಡಿದ್ದು ತಪ್ಪು, ಅದು ರದ್ದಾಗಬೇಕು ಎಂಬುದು ಫಿರ್ಯಾದಿದಾರನ ಅಹವಾಲು. ತಾಯಿ ಇದನ್ನು ಎತ್ತಿ ಹಿಡಿದು ತಂದೆಯ 'ಉಚ್ಚ ನ್ಯಾಯಾಲಯ'ಕ್ಕೆ ಆಚರಣೆಗಾಗಿ ರವಾನಿಸಿದರು. 'ಉಚ್ಚ ನ್ಯಾಯಾಲಯ' ಇದನ್ನು ತಳ್ಳಿಹಾಕಿತು: "ಶಾಲೆಯಲ್ಲಿ ನನ್ನ ಮಗನಿಗೊಂದು ಕಾನೂನು; ಇತರರಿಗೊಂದು ಕಾನೂನು ಎಂಬ ನಿಲುವು ಸಿಂಧುವಲ್ಲ."

ಒಮ್ಮೆ ಒಬ್ಬ ವಿದ್ಯಾರ್ಥಿ ಪರೀಕ್ಷೆಯಲ್ಲಿ ಉತ್ತೀರ್ಣನಾದಾಗ ತನ್ನ ಕೃತಜ್ಞತೆಯ ದ್ಯೋತಕವಾಗಿ ಒಂದು ಬುಟ್ಟಿ ತುಂಬ ಕಿತ್ತಳೆ ಹಣ್ಣುಗಳನ್ನು ಕೊಂಡುತಂದು ಭಯಭಕ್ತಿ ಪೂರ್ವಕವಾಗಿ ಗುರುಗಳಿಗೆ ಅವರ ಮನೆಯಲ್ಲಿ ಅರ್ಪಿಸಿದ. ಆ ರಸಭರಿತ ಹಣ್ಣುಗಳು ಅತ್ಯಾಕರ್ಷಕವಾಗಿದ್ದುವು. ಮನೆಯಲ್ಲಿ ಅವನ್ನು ಚಪ್ಪರಿಸಿ ಸವಿಯ ಬಲ್ಲ ಎಳೆಯರು ಸಾಕಷ್ಟು ಮಂದಿ ಇದ್ದರು. ಆದರೆ ಶೆಣೈಮಾಸ್ತರರು ಸಾಂಕೇತಿಕವಾಗಿ ಒಂದು ಹಣ್ಣನ್ನು ಮಾತ್ರ ತೆಗೆದುಕೊಂಡು ಉಳಿದವನ್ನು ಆ ವಿದ್ಯಾರ್ಥಿಗೇ ಕೊಟ್ಟು, "ನಾನು ತೃಪ್ತನಾದೆ. ಇವನ್ನು ನೀನೂ ನಿನ್ನ ಮನೆಯವರೆಲ್ಲರೂ ತಿಂದು ಸಂತೋಷಪಡಬೇಕು," ಎಂದು ಹೇಳಿ ಕಳಿಸಿದರು.

೧೯೩೮ರ ಸುಮಾರಿಗೆ ಹರಿ ಶೆಣೈಯವರು ಅಖಿಲ ಭಾರತ ಮಟ್ಟದ ಪ್ರಬಂಧ ಸ್ಪರ್ಧೆಯೊಂದರಲ್ಲಿ ಭಾಗವಹಿಸಲು ಮುಂದಾದರು. ತರುಣ ಅನನುಭವಿ–ಅದೂ ಮಡಿಕೇರಿಯ ಮೂಲೆಯಲ್ಲಿರುವ ಈ ಉಪಾಧ್ಯಾಯಶಿಶು ಅಖಿಲ ಭಾರತ ವ್ಯಾಪ್ತಿಯಲ್ಲಿನ ಜ್ಞಾನದೈತ್ಯರ ಎದುರು ಸೆಣಸುವುದೆಂದರೇನು? ಸ್ವತಃ ಪಂಜೆಯವರಿಗೂ ಈ ತರುಣ ಸಹೋದ್ಯೋಗಿಯ ಉತ್ಸಾಹ ಅರ್ಥವಾಗಲಿಲ್ಲ. "ಸ್ಪರ್ಧೆಗೆ ಇಳಿಯುವುದು, ಶಕ್ತಿ ಮೀರಿ ಸೆಣಸುವುದು ನನ್ನ ಹೊಣೆ, ಸೋಲು ಗೆಲುವು ಅವನ ಇಚ್ಛೆ" ಎಂಬ ಸಮ-

ರ್ಪಣ ಭಾವದಿಂದ ಇವರು ಪ್ರಬಂಧ ಬರೆದು ಕಳಿಸಿಯೇಬಿಟ್ಟರು. ವಿಷಯ 'ಶಿಶು ಸಪ್ತಾಹದ ಮಹತ್ತ್ವ ಉಪಾಧ್ಯಾಯರಿಗೆ ಅರಿವಾಗುವಂತೆ ಮಾಡುವುದು ಹೇಗೆ?' ಪೈಸ್‌ರಾಯರ ಆ ಸುವರ್ಣ ಪದಕ (ಅಂದಿನ ೮ ಸೋವರಿನ್‌ಗಳು) ಶೆಣೈ ಮಾಸ್ತರರಿಗೆ ಪ್ರಥಮ ಬಹುಮಾನವಾಗಿ ಬಂದಾಗ ಪಂಜೆಯವರಿಗಾದ ಸಂತೋಷ ಸಂಭ್ರಮಗಳಿಗೆ ಎಣೆಯೇ ಇರಲಿಲ್ಲ.

ತನಗಿಂತ ೧೪ ವರ್ಷಗಳಷ್ಟು ಕಿರಿಯನಾದ ಈ ಉತ್ಸಾಹೀ ಉಪಾಧ್ಯಾಯನ ಬಗ್ಗೆ ಪಂಜೆಯವರಿಗೆ ಅಪಾರ ಪ್ರೀತಿ, ಅಭಿಮಾನ, ಗೌರವ. ಇದರ ಪ್ರತೀಕವೋ ಎಂಬಂತೆ ಶೆಣೈಮಾಸ್ತರರು ಒಂದು ವಿಶೇಷ ಘಟನೆಯನ್ನು ವರದಿ ಮಾಡಿದ್ದಾರೆ: "೧೯೨೩ರ ಫೆಬ್ರುವರಿ ತಿಂಗಳಿನಲ್ಲಿ ಒಂದು ಘಟನೆ ಸಂಭವಿಸಿತು. ಶಿವರಾತ್ರಿ ಮತ್ತು ಇತರ ಕಾರಣಗಳಿಂದಾಗಿ ಶಾಲೆಗೆ ನಾಲ್ಕು ದಿವಸ-

---

ರಂಜಾಳ ಹರಿ ಶೆಣಾಯಿಯವರು ನಾನು ಕುಂದಾಪುರ ಹೈಸ್ಕೂಲಿನಲ್ಲಿ ಐದನೇ ಫಾರ್ಮಿನಲ್ಲಿ ಓದುತ್ತಿದ್ದಾಗ, ೧೯೧೮–೧೯ ರ ವೇಳೆ, ನಮಗೆ ಉಪಾಧ್ಯಾಯರಾಗಿ ಬಂದರು. ನಾನಾಗ 'ಮೆತಮೆಟಿಕ್ಸ್' ವಿಭಾಗದ ವಿದ್ಯಾರ್ಥಿ. ಅವರು ನಮಗೆ ಅದರ ಶಿಕ್ಷಕರು. ಅವರ ಕಲಿಸುವಿಕೆ ಮಂದಟ್ಟಾಗುವ ರೀತಿಯದು. ಅವರ ತರಗತಿಯಲ್ಲಿ ಗದ್ದಲ ಗುಲ್ಲು ಇಲ್ಲ. ನಮಗೆ ಅವರ ಮೇಲೆ ಸ್ವಾಭಾವಿಕವಾದ ಗೌರವವಿತ್ತು. ಕಲಿಸಬಲ್ಲವರ ವಿಚಾರದಲ್ಲಿ ಇದು ಸ್ವಾಭಾವಿಕವೇ. ತಾಳ್ಮೆಯಿಂದ, ಪ್ರೀತಿಯಿಂದ ಪಾಠ ಹೇಳುತ್ತಿದ್ದ ಅವರ ನೆನಪು ನನಗೆ ಎಂದೂ ಹೋಗದು. ಆರನೆಯ ಫಾರ್ಮಿನಲ್ಲಿ, ನಮಗೆ ಹೆಡ್ಮಾಸ್ತರರಾಗಿದ್ದ ರಘುನಾಥರಾಯರೇ ಗಣಿತದ ಶಿಕ್ಷಕರಾದರು.

ಮುಂದೆ ಹರಿ ಶೆಣಾಯಿಯವರಿಗೆ ವರ್ಗವಾಯಿತು. ಅವರು ಮಡಿಕೇರಿಯ ಸರಕಾರಿ ಹಾಯ್‌ಸ್ಕೂಲಿಗೆ ಶಿಕ್ಷಕರಾಗಿ ಹೋದರು. ಆಗ ಅಲ್ಲಿ ಪಂಜೆ ಮಂಗೇಶರಾಯರು ಮುಖ್ಯ ಅಧ್ಯಾಪಕರಾಗಿದ್ದಿರಬೇಕು.

ಬಾಲಾ ದಿವಸಗಳು ಕಳೆದ ಬಳಿಕ ನಾನು ಕುಂದಾಪುರವನ್ನು ಬಿಟ್ಟೆ. ತಿರುಗಿ ನಾನು ಹರಿ ಶೆಣಾಯಿಯವರನ್ನು ಮುಖತಃ ಭೇಟಿಯಾದುದು ಕಡಿಮೆ. ೧೯೪೦ ರ ಸುಮಾರಿಗೆ ಅವರು ಮಡಿಕೇರಿಯಲ್ಲಿ ಹಿರಿಯ ಅಧ್ಯಾಪಕರಾಗಿದ್ದಾಗ ಒಮ್ಮೆ ಮಡಿಕೇರಿಗೆ ಹೋಗಿದ್ದೆ. ಅಂದು ಸಿ. ಪಿ. ಸಿ. ಮೋಟಾರು ಕಂಪೆನಿಯ ಜನರಲ್ ಮೇನೇಜರರಾದ ದಿ. ವಾಮನ ಕುಡ್ವರೊಡನೆ ನಮ್ಮಿಬ್ಬರನ್ನೂ ಶೆಣಾಯಿಯವರು ಮನೆಗೆ ಭೋಜನಕ್ಕೆ ಆಮಂತ್ರಿಸಿದ್ದರು. ಆ ಕಾಲಕ್ಕೆ ನಾನು ಅವರ ವಿದ್ಯಾರ್ಥಿ ಎಂಬುದು ಅವರಿಗೂ ನೆನಪಿತ್ತು. ಆದರೆ ನನ್ನನ್ನು ಒಬ್ಬ ಹಳೆಯ ಸ್ನೇಹಿತನಂತೆಯೇ ಕಂಡರು. ಸ್ವಚ್ಛಂದ ಮಾತನಾಡಿಸಿದರು.

೧೯೬೦ ರ ಸುಮಾರಿಗೆ, ಅವರ ಮಗ ಹುಬ್ಬಳ್ಳಿಯ ಕರ್ನಾಟಕ ಮೆಡಿಕಲ್ ಕಾಲೇಜಿನ ಡೀನರಾಗಿದ್ದಾಗ, ನಾನೊಂದು ಉಪನ್ಯಾಸಕ್ಕೆ ಹೋಗಿದ್ದೆ– ಅವರ ಕಾಲೇಜಿಗೇನೇ. ಆ ಸಂದರ್ಭದಲ್ಲಿ ನನ್ನ ಹಳೆಯ ಗುರುಗಳು ಮಗನ ಕಾಲೇಜಿನಲ್ಲಿ ಕಾಣಿಸಿಕೊಂಡಾಗ ನನಗಾದ ಆನಂದ, ಆಶ್ಚರ್ಯ ಸ್ವಲ್ಪವಲ್ಲ.

ಕಾಲ ಹೀಗೆ ಐದು ದಶಕಗಳ ತನಕ ಹಾದಿತ್ತಾದರೂ ನನಗೆ ಅವರ ಮೇಲಿನ ಗೌರವ ಮರೆತಿಲ್ಲ. ಅವರಿಗೆ, ಗಣಿತದಲ್ಲಿ ಬುದ್ಧಿವಂತನಲ್ಲದ, ನನ್ನ ಮೇಲಿನ ಪ್ರೀತಿ ವಾತ್ಸಲ್ಯಗಳು ಕ್ಷೀಣಿಸಿದ್ದಿಲ್ಲ. ಅದೊಂದು ಭಾಗ್ಯವಲ್ಲವೇ?

–ಶಿವರಾಮ ಕಾರಂತ

ಗಳ ಸಂತತ ರಜೆ ಸಿಕ್ಕಿತು. ಆಗ ಪಂಜೆಯವರು ಮಂಗಳೂರಿಗೆ ಹೋಗಬೇಕೆಂದು ತೀರ್ಮಾನಿಸಿದರು. ದಾರಿಯಲ್ಲಿ ಅವರು ನನ್ನ ಮನೆಗೆ ಬಂದು ತಿಜೋರಿಯ ಕೀಲಿಗಳನ್ನು ನನಗೆ ಕೊಟ್ಟು, 'ಪೆಟ್ಟಿಗೆಯಲ್ಲಿ ಸರಿಸುಮಾರು ೨,೨೦೦ ರೂಪಾಯಿಗಳು ಉಂಟು. ವಿವರ ಲೆಕ್ಕಪುಸ್ತಕದಲ್ಲಿ ಸರಿಯಾಗಿ ನಮೂದಿಸಲ್ಪಟ್ಟಿದೆ. ವಿದ್ಯಾರ್ಥಿಗಳ ಎಸ್. ಎಸ್. ಎಲ್. ಸಿ. ಪರೀಕ್ಷಾ ಶುಲ್ಕವೂ ಇದರಲ್ಲಿ ಸೇರಿದೆ. ರಜಾ ಮುಗಿದೊಡನೆ ಈ ಹಣವನ್ನು ಸರ್ಕಾರೀ ಖಜಾನೆಗೆ ಜಮಾಯಿಸಬೇಕು,' ಎಂದು ಹೇಳಿದರು. ಆ ಹಿಂದೆ ಒಂದೆರಡು ಸಾರಿ ಅವರು ಈ ರೀತಿ ಅನೌಪಚಾರಿಕವಾಗಿ ಕೆಲಸ ವಹಿಸಿ ಹೋದದ್ದುಂಟು. ಸರಿ, ಈ ಸಲವೂ ಹಾಗೆಯೇ, ಅಂದರೆ ಪೆಟ್ಟಿಗೆಯನ್ನು ತೆರೆಸಿ ಹಣ ಲೆಕ್ಕಮಾಡದೆ ನಾನು 'ಅಧಿಕಾರ' ವಹಿಸಿಕೊಂಡೆ. ರಜಾದಿವಸಗಳು ಮುಗಿದುವು. ಶಾಲೆ ಆರಂಭವಾದ ಬೆಳಗ್ಗೆ ನಾನು ಹೋಗಿ ಪೆಟ್ಟಿಗೆ ತೆರೆದು ನೋಡಿದಾಗ ಕಂಡದ್ದೇನು? ಒಂದು ದಂಬಡಿಯೂ ಅದರೊಳಗಿರಲಿಲ್ಲ! ಮೊದಲು ಪೋಲೀಸರಿಗೆ ದೂರಿತ್ತೆ. ಮಂಗಳೂರಿನಲ್ಲಿದ್ದ ಪಂಜೆಯವರಿಗೆ ತಾರಿನಿಂದ ಸುದ್ದಿ ತಿಳಿಸಿದೆ. ಅಂದೇ ಸಂಜೆ ಮಡಿಕೇರಿಗೆ ಧಾವಿಸಿ ಬಂದ ಪಂಜೆಯವರು 'ಅಧಿಕಾರ'ವನ್ನು ಮರುವಹಿಸಿಕೊಂಡರು. ಶಾಲೆಯಲ್ಲಿ ರಾತ್ರಿ ಕಾವಲು ಮಲಗುತ್ತಿದ್ದ ಪೇದೆ ಈ ಮೊಬಲಗನ್ನು ಲಪಟಾಯಿಸಿದ್ದ. ಪೋಲೀಸ್ ಕ್ರಮಗಳಿಂದ ನ್ಯಾಯಾಲಯದ ಮೂಲಕ ಈ ಹಣ ಹೇಗೂ ದೊರೆಯಿತೆನ್ನಿ. ಅಂದಿನ ಸುದಿನಗಳಲ್ಲಿ ಎರಡು ಸಾವಿರಕ್ಕೂ ಮಿಕ್ಕಿದ್ದ ಈ ಗಂಟೇನೂ ಸಾಮಾನ್ಯ ಮೊತ್ತವಲ್ಲ. ಅವರು ನಂಬಿಕೆಯಿಂದ ಇದನ್ನು ನನಗೆ ಒಪ್ಪಿಸಿದ್ದರು. ನಾನು ಅದೇ ನಂಬಿಕೆಯಿಂದ ಇದನ್ನು ಒಪ್ಪಿಕೊಂಡಿದ್ದೆ. ಹಣ ಕಾಣದಾದಾಗ ನನಗೆ ಪಂಜೆಯವರ ವಿಚಾರ ಶಂಕೆ ಮೂಡಬಹುದಿತ್ತು; ಮತ್ತು ಅವರಿಗೆ ನನ್ನ ಮೇಲೆಯೇ ಗುಮಾನಿ ಬರಬಹುದಿತ್ತು. ಆದರೆ ನಮ್ಮೀರ್ವರ ಅನ್ಯೋನ್ಯತೆಯು ನಡುವೆ ಇಂಥ ಯಾವ ಹುಳುಕಿಗೂ ನುಸುಳಲು ಎಡೆ ಇರಲಿಲ್ಲ."

೭

ಅವರ ವಿದ್ವತ್ತು, ದುಡಿಮೆ, ಉತ್ಸಾಹಗಳಿಗೆ ಅನುಗುಣವಾಗಿ ವೃತ್ತಿಯಲ್ಲಿ ಬಡ್ತಿಯಾಗಲಿ ಬದುಕಿನಲ್ಲಿ ಪ್ರಶಸ್ತಿಯಾಗಲಿ ಶೆಣೈ ಮಾಸ್ತರರಿಗೆ ಬರಲಿಲ್ಲ. ಎಂದೂ ಅವರು ಅದನ್ನು ಅರಸಿ ಸಾಗಲಿಲ್ಲ. ಪರತಂತ್ರ ಭಾರತದ ಬೆಂಗಾಡಿನಲ್ಲಿ ಕಮರಿ ಹೋದ ಅಸಂಖ್ಯಾತ ಪ್ರತಿಭೆಗಳ ಸಾಲಿಗೆ ಶೆಣೈ ಮಾಸ್ತರರೂ ಸೇರುತ್ತಾರೆ. ಅಂದ ಮಾತ್ರಕ್ಕೆ ಅವರಲ್ಲಿ ಯಾವುದೇ ವಿಧವಾದ ಕಹಿ ಭಾವನೆಗೆ ಅಥವಾ ಅತೃಪ್ತ ಮನಃಸ್ಥಿತಿಗೆ ಇನಿತೂ ಎಡೆ ಇರಲಿಲ್ಲ. ತೀರ ಈಚೆಗೆ (೧೯೭೬ರ ಕೊನೆಯಲ್ಲಿ) ಅವರು ಮೈಸೂರಿಗೆ ಬಂದಿದ್ದಾಗ ಈ ವಿಚಾರವನ್ನು ಅವರಲ್ಲಿ ನಾನು ಪ್ರಸ್ತಾಪಿಸಿದ್ದೆ. ಅವರಾಗ, "ನಾನು ಬಂಗಾರ ಕೂಡಿಡದೆ ಇರಬಹುದು. ಆದರೆ ನಾನು ಮುಟ್ಟಿದ್ದೆಲ್ಲ ಚಿನ್ನವಾಯಿತು. ಮೈದಾಸನಂಥ ಮಹಿಮಾನ್ವಿತ ವ್ಯಕ್ತಿ ನಾನಾದೆ ಎಂಬ ತೃಪ್ತಿ ನನಗಿದೆ," ಎಂದರು. ನಿಜ, ಶೆಣೈ ಮಾಸ್ತರರ ಶಿಷ್ಯಕೋಟಿ ಪ್ರಪಂಚಾದ್ಯಂತ ವಿವಿಧ ಕ್ಷೇತ್ರಗಳಲ್ಲಿ ಹರಡಿ ಹೋಗಿ ಅವರ ಮೈದಾಸ ಸ್ಪರ್ಶಕ್ಕೆ ಸಾಕ್ಷಿಯಾಗಿ ವಿರಾಜಿಸುತ್ತಿದೆ. ನಿಜವಾದ ಉಪಾಧ್ಯಾಯ ಇದಕ್ಕಿಂತ ಹೆಚ್ಚಿನ ಪ್ರಶಸ್ತಿ ಇನ್ನೇನನ್ನು ತಾನೇ ಬಯಸುತ್ತಾನೆ?

೧೯೭೭ ರ ಫೆಬ್ರುವರಿ ೨೦ ರಂದು ಅವರ ಅವಿಶ್ರಾಂತ ಜೀವ ಶಾಶ್ವತ ವಿಶ್ರಾಂತಿ ಪಡೆದಾಗ ಶೆಣೈ ಮಾಸ್ತರರನ್ನು ಬಲ್ಲ ಎಲ್ಲರೂ ಎತ್ತಿದ ಉದ್ಗಾರ ಒಂದೇ: "ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು, ಕತ್ತಲೆಯ ಮೊಡಕು ಮೂಲೆಗಳ ಸೇರದಿರು. ಭಾಸ್ಕರನನುಗ್ರಹವೆ ನೂತ್ನ ಜೀವನ ಸತ್ತ್ವ, ಮೃತ್ಯು ನಿನಗಲ್ಪತೆಯೊ–ಮಂಕುತಿಮ್ಮ." ✡



# ಬ್ರಿಟಾನಿಯಾ
# ಹಾಲು ಬಿಸ್ಕಿಟ್

**ಬೆಳೆಯುವ ಮಕ್ಕಳಿಗೆ ಸ್ವಾದಿಷ್ಟ ಸಂಗಾತಿ!**




ರುಚಿಕರ,
ಪುಷ್ಟಿಕರ
ಬ್ರಿಟಾನಿಯಾ
ಗ್ಲಾಕ್ಸೊ ಬಿಸ್ಕಿಟ್




ಲಿಂಟಾಸ್.BBC.GLX.36-172 KN

ಬ್ರಿಟಾನಿಯಾ ಬಿಸ್ಕಿಟ್ ಬಲು ಶ್ರೇಷ್ಠ

# ಬೆತ್ರಹಾಸ್ಲ!



ಜರ್ಮನ್ ಕಥೆ

೧೯೩೨. ಜರ್ಮನಿಯಲ್ಲಿ ಎಲ್ಲೆಡೆ ನಿರುದ್ಯೋಗ ತಾಂಡವವಾಡುತ್ತಿತ್ತು. 'ರೈನ್ ಹೌಸ್'ನಲ್ಲಿ ಒಂದು ವಾರದ ಮಟ್ಟಿಗೆ ಇದ್ದು, ಕೆಲಸ ಮುಗಿಸಿದಾಗ ನನ್ನ ಬಳಿ ಉಳಿದಿದ್ದು ಮೂರು ಮಾರ್ಕುಗಳು ಹಾಗೂ ಒಂದು ಚಿಕ್ಕ ಬಾಟಲ್ ವೈನ್ ಮಾತ್ರ. 'ರೈನ್ ಹೌಸ್' ಬಿಟ್ಟು ಹೊರಬಿದ್ದು ಚಿಕ್ಕ ಹೋಟೆಲೊಂದಕ್ಕೆ ಹೋದಾಗ ಕೊಳಾಯಿ ಕೆಲಸ ಮಾಡುವವನೊಬ್ಬನ ಪರಿಚಯವಾಯಿತು. ಅವನೂ ಈಗ ನನ್ನಂತೆಯೇ ನಿರುದ್ಯೋಗಿಯಾಗಿದ್ದ. ಇಬ್ಬರೂ ಸಮದುಃಖಭಾಗಿಗಳು. ಇಬ್ಬರೂ ಪರಸ್ಪರರ ಅನುಭವ ಹೇಳಿಕೊಂಡೆವು. ಹಾಗೆಯೆ ವೈನ್‌ಗಾಗಿ ಇಬ್ಬರಲ್ಲಿದ್ದ ಹಣವೂ ಖರ್ಚಾಯಿತು. ಜೇಬು ಬರಿದಾಯಿತು.

ಮೂಲ: ಅರ್ನ್ಸ್ಟ್ ಗ್ಲೀಸರ್
ಕನ್ನಡಕ್ಕೆ: ಲಕ್ಷ್ಮಿ ಎಸ್. ಮೂರ್ತಿ

ಮತ್ತೆ ರಸ್ತೆಗಿಳಿದೆ. ಹೊಟ್ಟೆಯೊಳಗಿದ್ದ ವೈನು ತಲೆಯಲ್ಲಿ ಕೆಲಸ ನಡೆಸಿತ್ತು. ತೂರಾಡುತ್ತಾ ನಡೆದಿದ್ದೆ. ಹಿಂದೆ ಕಾರು ಬರುತ್ತಿರುವುದು ಕಂಡು ಬೇಕೆಂದೆ ಅಡ್ಡ ನಿಂತೆ. ಚಾಲಕ ಬೈದಾಗ ದಾರಿ ಬಿಟ್ಟು ಜೋರಾಗಿ ನಗತೊಡಗಿದೆ. ನನ್ನ ಬಗ್ಗೆ ನನಗೇ ಹೆಮ್ಮೆ ಎನಿಸುತ್ತಿತ್ತು.

ಮಾರ್ಚ್ ತಂಗಾಳಿ ಬೀಸುತ್ತಿತ್ತು. ತಲೆ ಸ್ವಲ್ಪ ತಿಳಿಯಾಯಿತು. ರೈನ್ ನದಿಯ ಅಡ್ಡಗಟ್ಟೆಯ ಮೇಲೆ ನಿಂತೆ. ನದಿಯ ನೀರನ್ನು ನೋಡುತ್ತಾ ಮನಸ್ಸಿಗೆ ಉಲ್ಲಾಸವಾಯಿತು. ಆದರೆ ದೃಷ್ಟಿ ಹರಿಸಿದಾಗ ನದಿಯಲ್ಲಿ ಒಂದಾದರೂ ಹಡಗು ಕಾಣಿಸಲಿಲ್ಲ. ಯುದ್ಧ ಮುಗಿದ ಮೇಲೆ ಅವೂ ನಮ್ಮಂತೆಯೇ ನಿರುದ್ಯೋಗಿಗಳಾಗಿ ಡಾಕಿನಲ್ಲೇ ನಿಂತಿವೆಯೋ ಏನೊ. ದೂರದಲ್ಲಿ ತೆಳುವಾಗಿ ಹರಡಿರುವ ಮಂಜು ಈಗ ಬಿಸಿಲಿಗೆ ಫಳಫಳ ಹೊಳೆಯುತ್ತಿದೆ. ಆಕಾಶದಲ್ಲಿ ಬಿಳಿ ಮೋಡಗಳು ಹಾಲೆಂಡಿನ ಕಡೆಗೆ ಪ್ರಯಾಣ ಬೆಳೆಸುತ್ತಿವೆ. ನನ್ನ ನಾಡಿನ ಪ್ರಕೃತಿ ಸೌಂದರ್ಯ ಕಂಡು ಮನಸ್ಸಿಗೆ ಸಂತೋಷವೆನಿಸಿತು. ನಿರುದ್ಯೋಗದ ಕಳವಳ ಒಂದು ಕ್ಷಣ ಮರೆಯಾಯಿತು.

ಮುಂದೆ ನಡೆದೆ. ಎರಡು ಪಕ್ಕಗಳಲ್ಲೂ ವಾಲ್‌ನಟ್ ಮರಗಳು ಗಾಳಿಯಲ್ಲಿ ಕೊಂಬೆಗಳನ್ನು ತೂಗಿಸುತ್ತಿದ್ದವು. ಗೆಣಸಿನ ಹೊಲಗಳ ಮೇಲಿಂದ ಬೀಸುತ್ತಿದ್ದ ತಂಗಾಳಿ ಹಳದಿ ಬಣ್ಣದ ಧೂಳನ್ನು ಹೊತ್ತು ತರುತ್ತಿತ್ತು. ದೂರದಲ್ಲಿ ಓಪನ್‌ಹಾಲ್ಬನ್ ನೀಲಿ ಬೆಟ್ಟ ಕಾಣಿಸುತ್ತಿತ್ತು. ನಾನು ಹೋಗಬೇಕೆಂದುಕೊಂಡದ್ದು ಅಲ್ಲಿಗೇ.

ಡಾಮ್‌ಸ್ಟ್ಯಾಡ್ ತಲುಪಿದಾಗ ಸಂಜೆಯಾಗಿತ್ತು. ನನ್ನ ಬಾಯಿಂದ ಹೊರಡುತ್ತಿದ್ದ ವೈನಿನ ವಾಸನೆಯಿಂದಾಗಿ ಊರಿನಲ್ಲಿ ಎಲ್ಲೂ ನನಗೆ ಆಶ್ರಯ ದೊರೆಯಲಿಲ್ಲ. ಊರು ಮುಗಿಯುತ್ತಾ ಬಂತು. ಅಲ್ಲೊಂದು ಹುಲ್ಲು ತುಂಬಿದ್ದ ಶೆಡ್. ಒಳಗೆ ಹೋಗಿ ಹುಲ್ಲಿನ ಮೇಲೆ ಆರಾಮವಾಗಿ ಮಲಗಿದೆ. ಸುಖವಾಗಿ ನಿದ್ರೆ ಬಂತು.

ಹಕ್ಕಿಗಳ ಚಿಲಿಪಿಲಿ ನನ್ನನ್ನು ಎಚ್ಚರಿಸಿತು. ವಿಪರೀತ ಚಳಿಯಾಗುತ್ತಿತ್ತು. ಬಾಟಲಿನಲ್ಲಿ ಉಳಿದಿದ್ದ ವೈನು ಸಹಾಯಕ್ಕೆ ಬಂತು. ಎದ್ದು ಅಲ್ಲೇ ಹಾದಿಯ ಪಕ್ಕದ ಹಳ್ಳದಲ್ಲಿ ಕೈಕಾಲು ತೊಳೆದೆ. ಬೆಳಗು ಸುಂದರವಾಗಿತ್ತು. ಹಿಮದ ತುಂತುರುಗಳು ಮರಗಿಡಗಳ ಮೇಲೆ ಹೊಳೆಯುತ್ತಿದ್ದವು. ಹಕ್ಕಿಗಳು ಹಾಡುತ್ತಿದ್ದವು. ಎರಡು ಗಂಟೆಗಳ ನಂತರ ಹೊಟ್ಟೆಯಲ್ಲಿ ತೊಳಲಾಟ ಪ್ರಾರಂಭವಾಯಿತು.

ಪ್ರಕೃತಿ ಶಾಂತ ಸುಂದರವಾಗಿತ್ತು. ಆದರೇನು? ಹೊಟ್ಟೆಗೆ ಶಾಂತಿ ಇರಲಿಲ್ಲ. ಇನ್ನೂ ಅರ್ಧ ಗಂಟೆ ನಡೆದದ್ದಾಯಿತು. ನಿತ್ರಾಣವೆನಿಸತೊಡಗಿತು. ಮುಂದೆ ನಡೆಯಲು ಸಾಧ್ಯವಾಗದೆ ಹಾಗೆಯೇ ರಸ್ತೆಯ ಮಧ್ಯದಲ್ಲಿ ಕುಸಿದೆ. 'ಹೈನ್ರಿಕ್! ಕುಡಿತಕ್ಕಾಗಿಯೇ ಎಷ್ಟೊಂದು ಖರ್ಚು ಮಾಡಿದ್ದೀಯೆ. ಈಗ ಉಪವಾಸ, ಅನುಭವಿಸು' ಎಂದು ಒಳಮನಸ್ಸು ಹೇಳುತ್ತಿತ್ತು. ತಲೆಯಲ್ಲಿ ಏನೇನೋ ವಿಚಾರಗಳು. ನಿದ್ದೆ ಬಂದದ್ದೆ ನನಗೆ ಗೊತ್ತಾಗಲಿಲ್ಲ.

ಯಾರೋ ನನ್ನನ್ನು ತಳ್ಳಿದ ಅನುಭವವಾಗಿ ಕಣ್ಣು ತೆರೆದರೆ ಎದುರಿಗೆ ಒಂದು ಕುದುರೆ ಕಂಡು ಬಂತು.

"ಏಳು ಕುಡುಕ ಬಡ್ಡೀಮಗನೆ ಏಳು,!" ಯಾರೋ ಬಯ್ಯುತ್ತಿದ್ದರು.

ಕಣ್ಣುಗಳನ್ನು ಉಜ್ಜಿಕೊಂಡೆ. ನಾನು ರಸ್ತೆಯ ಮಧ್ಯದಲ್ಲಿ ಮಲಗಿದ್ದುದು ಕ್ರಮೇಣ ಗಮನಕ್ಕೆ ಬಂತು. ನಿದ್ದೆಯಲ್ಲಿ ರಸ್ತೆಯ ಪಕ್ಕದಿಂದ ಮಧ್ಯಕ್ಕೆ ಉರುಳಿಕೊಂಡು ಬಂದಿದ್ದೆ.

ಗಾಡಿಯಿಂದ ಒಬ್ಬ ಯುವಕ ರೈತ ಇಳಿದು ಬಂದ. ಮತ್ತೂ ಬಯ್ಯುತ್ತಾ ನನ್ನನ್ನು ಒರಟಾಗಿ ಅಲ್ಲಾಡಿಸಿದ. ನನಗೆ ಸಿಟ್ಟು ಉಕ್ಕಿ ಬಂದು ಆ ರೈತನನ್ನು ಚೆನ್ನಾಗಿ ಜಡಿದೆ. ಕೈಗೆ ಕೈ ಹತ್ತಿತು. ಎಷ್ಟಾದರೂ ಸೈನ್ಯದಲ್ಲಿದ್ದವ; ಕೊನೆಗೆ ನನ್ನ ಕೈಯೇ ಮೇಲಾಯಿತು. ಕ್ಷಣಗಳಲ್ಲಿಯೇ ಆತ ನೆಲಕ್ಕುರುಳಿದ.

"ಶಿಕೇಡಾ" ಎನ್ನುತ್ತಾ ಆಕೆ ಗಾಡಿಯಿಂದಿಳಿದು ರೈತನೆಡೆ ಓಡಿ ಬಂದಳು. ಆತನ ತಲೆಯನ್ನು ನೇವರಿಸುತ್ತಾ ಮಾತಿಸತೊಡಗಿದಳು. ಭೀತಿ ಅವಳ ಮುಖದಲ್ಲಿ ಒಡಮೂಡಿತ್ತು.

"ಏನೂ ಪರವಾಗಿಲ್ಲ ಮಿಸಸ್. ಎನ್ನುತ್ತಾ ವೈನಿನ ಬಾಟಲನ್ನು ಹೊರತೆಗೆದು ರೈತನ ಹಾಗಿ ನಡಿ ಹಿಡಿದೆ. ಆತ ಅರೆ ಕ್ಷಣದಲ್ಲಿ ಎದ್ದು ಕುಳಿತು ಪೆದ್ದು ಪೆದ್ದಾಗಿ ನನ್ನೆಡೆ- ಆಕೆಯೆಡೆ 'ಆದದ್ದಾದರೂ ಏನು?' ಎನ್ನುವಂತೆ ನೋಡಿದ. ಅದನ್ನು ಕಂಡು ಆಕೆ ನಗತೊಡಗಿದಳು. ನನ್ನನ್ನು ಒಬ್ಬ ದರೋಡೆಗಾರನೆಂದುಕೊಂಡಾರೆಂದು ಅವನಿಗೆ ಸಂಕ್ಷಿಪ್ತವಾಗಿ ನನ್ನ ಕತೆ ಹೇಳಿ ಮುಗಿಸಿದೆ. ಆಕೆ ಮತ್ತೆ ನಕ್ಕಳು. ತಲೆಗೆ ಕಟ್ಟಿದ್ದ ಕೆಂಪು ಸ್ಕಾರ್ಫಿನೊಳಗಿಂದ ಆ ಮುಖ ಸುಂದರವಾಗಿ ಕಾಣುತ್ತಿತ್ತು.

"ಶಿಕೇಡಾ," ಆಕೆ ಹೇಳಿದಳು, "ನೀನು ಮೊದಲೇ ವಿಚಾರಿಸಬಾರದಿತ್ತೆ! ಆತುರ ಮಾಡಿದರೆ ಎಲ್ಲ ಹೀಗೆಯೇ ಆಗುವುದು."

ಈಗ ಶಾಂತನಾಗಿದ್ದ ಆತ ನನ್ನೆಡೆ ತಿರುಗಿ, "ನೀನು ಎಲ್ಲಿಗೆ ಹೊರಟಿರುವಿ?" ಎಂದ.

"ಅಂ! ಯಾವುದಾದರೂ ಹಳ್ಳಿಗೆ. ಒಂದು ತುಂಡು ಬ್ರೆಡ್ ಮತ್ತು ಒಂದು ಚೂರು ಬಿಸಿ ಆಲೂಗಡ್ಡೆ ಸಿಗುವ ಯಾವ ಹಳ್ಳಿಯಾದರೂ ನಡೆದೀತು."

"ಹಾಗಾದರೆ ನೀನೂ ಗಾಡಿ ಹತ್ತು."

ಗಾಡಿಯಲ್ಲಿ ಆಕೆಯ ಪಕ್ಕದಲ್ಲಿ ಕುಳಿತೆ. ಕಾಡಿನ ಮೂಲಕ ಪ್ರಯಾಣ ಸಾಗಿತು.

ನಾನು ಆ ದಂಪತಿಗಳೊಂದಿಗೇ ಉಳಿದೆ.

ನನಗೆ ಎಚ್ಚರವಾದಾಗ ಎತ್ತರವಾದ ಹಾಸಿಗೆಯಲ್ಲಿ ಮಲಗಿದ್ದೆ. ಎದುರಿನ ಕಿಟಕಿಯಲ್ಲಿ ಒಂದು ಬೆಕ್ಕು ಕುಳಿತಿತ್ತು. ಪಕ್ಕಕ್ಕೆ ತಿರುಗಿದೆ. ಒಬ್ಬ ಸಂತನ ಚಿತ್ರ ಕಂಡಿತು. ಮನಸ್ಸಿಗೆ ಸಮಾಧಾನವಾಯಿತು. ನಾನು ಚಿಕ್ಕವನಿದ್ದಾಗ ಆತನ ಚಿತ್ರವನ್ನು ದಿನವೂ ನೋಡುತ್ತಿದ್ದೆ.

"ಅಂಬಾ" ಹಸುವಿನ ಧ್ವನಿ. ನಾನು ಮೆಕ್ಲೆನ್‌ಬರ್ಗ್‌ನ ಅಮೇಲಿಯಾ ಅತ್ತೆಯ ಮನೆಯಲ್ಲಿದ್ದೇನೆಯೆ! ಅಥವಾ?

ಕೋಣೆಯ ಬಾಗಿಲು ತೆರೆಯಿತು. ಶಿಕೇಡಾ ನಿಂತಿದ್ದ. ನನಗೆ ಎಲ್ಲ ನೆನಪಾಯಿತು. ಆತ ಒಳಬಂದು ನನ್ನ ಬಳಿ ಹಾಸಿಗೆಯ ಮೇಲೆ ಕುಳಿತ. ಎರಡು ಹಗಲು ಎರಡು ರಾತ್ರಿ ಪೂರ್ತಿ ನಾನು ನಿದ್ರಿಸಿದ್ದೆನೆಂದು ಹೇಳಿದ. ನಾನು ಇಷ್ಟಪಟ್ಟರೆ ನನ್ನನ್ನು ತನ್ನ ಸಹಾಯಕನಾಗಿ ಕೆಲಸಕ್ಕೆ ತೆಗೆದುಕೊಳ್ಳುವುದಾಗಿಯೂ ಹೇಳಿದ.

ನಂಗಿನ್ನೇನು ಬೇಕು! ಸಂತೋಷದಿಂದ ಕುಣಿಯುವಂತಾಗಿತ್ತು. "ಹೊಟ್ಟೆಗೆ ಎರಡು ತುತ್ತು ಅನ್ನ, ಇರಲು ತುಸು ನೆರಳು ಕೊಟ್ಟರೆ ಸಾಕು. ಏನು ಬೇಕಾದರೂ ಮಾಡುತ್ತೇನೆ," ಎಂದೆ.

"ಆಗಲಿ," ಎಂದ ಶಿಕೇಡಾ.

ಕೆಲಸವೇನೂ ಕಷ್ಟದ್ದಾಗಿರಲಿಲ್ಲ. ವ್ಯವಸಾಯದ ಯಂತ್ರಗಳನ್ನು ರಿಪೇರಿ ಮಾಡುವ ಕೆಲಸ ನನ್ನದಾಗಿತ್ತು. ಹಾಗೆಯೇ ದನಕರುಗಳನ್ನೂ ನೋಡಿಕೊಳ್ಳುತ್ತಿದ್ದೆ. ನಿರ್ಬಂಧವೇನಿರಲಿಲ್ಲ. ನನ್ನ ಕೈಲಾದ ಇಷ್ಟ ಬಂದ ಕೆಲಸಗಳನ್ನು ಮಾಡುತ್ತಿದ್ದೆ.

ಶಿಕೇಡಾ ಮಿತ್ರನಂತಿದ್ದ. ಒಂದು ಮೋಟಾರ್ ಬೈಕ್ ಕೊಳ್ಳಬೇಕು ಎಂದ. ಇಬ್ಬರೂ ನ್ಯೂಸ್ಟಾಡ್‌ಗೆ ಹೋಗಿ ಒಂದು ಸೆಕೆಂಡ್-ಹ್ಯಾಂಡ್ ಬೈಕನ್ನು ಖರೀದಿ ಮಾಡಿದೆವು. ನಾನೇ ಅದನ್ನು ನಡೆಸುತ್ತಿದ್ದೆ. ಶಿಕೇಡಾ ಅದರ ಮೇಲೆ ಪೈನ್ ಮರದ ಕಾಡುಗಳ ವರೆಗೆ ಹೋಗಿ ಅಭ್ಯಾಸ ಮಾಡುತ್ತಿದ್ದ.

ದಿನಗಳು ಸುಖವಾಗಿ ಉರುಳುತ್ತಿದ್ದವು. ದನಕರುಗಳನ್ನು ನೋಡಿಕೊಳ್ಳುವುದಂತೂ ನನ್ನ ಮನಸ್ಸಿಗೆ ತುಂಬ ಶಾಂತಿಯನ್ನು ಕೊಡುತ್ತಿತ್ತು. ಶಿಕೇಡಾನೂ ನನ್ನನ್ನು ಹೊಗಳುವ ಒಂದು ಅವಕಾಶವನ್ನೂ ಬಿಡುತ್ತಿರಲಿಲ್ಲ.

ಆಕೆಯ ಹೆಸರು ಯೋಹಾನ. ಆಕೆ ಹೆಚ್ಚು ಮಾತಿಗೆ ಬರುತ್ತಿರಲಿಲ್ಲ. ನಾನೂ ಆದಷ್ಟು ಆಕೆಯೆಡೆ ನೋಡದಿರಲು ಯತ್ನಿಸುತ್ತಿದ್ದೆ. ಕಾರಣ–ಆಕೆಯನ್ನು ನೋಡಿದಾಗಲೆಲ್ಲ ನನಗೆ ಫ್ರಾನ್ಜ್ ಬೆನ್‌ಳ ನೆನಪು ಬರುತ್ತಿತ್ತು. ಫ್ರಾನ್ಜ್ ನಾನು ಮೊತ್ತಮೊದಲು ಪ್ರೀತಿಸಿದ, ಆದರೆ ಪಡೆಯಲಾಗದಿದ್ದ ಹುಡುಗಿ.

*

ಹೊಲದಲ್ಲಿ ಆರು ವಾರ ಕಳೆದಿತ್ತು. ಹಳ್ಳಿಗೂ ಆಗೀಗ ಹೋಗುತ್ತಿದ್ದೆ. ಹಳ್ಳಿಯ ಕೆಲ ಹುಡುಗಿಯರ ದೃಷ್ಟಿ ನನ್ನ ಮೇಲೆ ಬಿದ್ದಿತ್ತು. ನನ್ನ ಮನಸ್ಸು ನನಗೇ ತಿಳಿಯದಂತೆ ಯೋಹಾ-

ನಳ ಬಗ್ಗೆ ಯೋಚಿಸತೊಡಗುತ್ತಿತ್ತು. ಆಕೆ ತುಂಬ ಚೆಲುವೆ ಎನಿಸುತ್ತಿತ್ತು. ಯೋಚನೆ ತೀವ್ರವಾಗುತ್ತಿದ್ದಂತೆಯೇ ಪೈಪ್ ಸೇದುತ್ತಿದ್ದೆ, ಕಾಡಿನಲ್ಲಿ ಅಡ್ಡಾಡಿ ಬರುತ್ತಿದ್ದೆ.

ವಸಂತ ಕಾಲಿಟ್ಟಿತ್ತು. ಹೊಲದ ಕೆಲಸ ಸಾಕಷ್ಟಿತ್ತು. ನಾನೂ ಕಷ್ಟಪಟ್ಟು ದುಡಿಯುತ್ತಿದ್ದೆ. ನನ್ನಂತಹ ಸಹಾಯಕ ಅದುವರೆಗೆ ಸಿಕ್ಕಿರಲಿಲ್ಲ ಎಂದಿದ್ದ ಶಿಕೇಡಾ.

ಹೊಲ ಬಯಲುಗಳೆಲ್ಲ ಸುಂದರವಾಗಿ ಕಾಣುತ್ತಿದ್ದವು. ಬೀಸುವ ತಂಗಾಳಿ ಸುವಾಸನೆಯನ್ನು ಹೊತ್ತು ತರುತ್ತಿತ್ತು. ಶಿಕೇಡಾ ಯಾವಾಗಲೂ ಸಂತೋಷದಿಂದಿರುತ್ತಿದ್ದ. ಯೋಹಾನ ಮನೆಯ ಮುಂದಿನ ಮಂಟಪದಲ್ಲಿ ಕುಳಿತು ಹೊಲಿಯುತ್ತಿರುತ್ತಿದ್ದಳು.

ಅದೇ ವಸಂತದ ಒಂದು ದಿನ. ಮನಸ್ಸು ಏಕೋ ತುಂಬ ಭಾರವಾಗಿತ್ತು. ಕೆಲಸ ಮಾಡುತ್ತಲೇ ಇದ್ದೆ. ಶಿಕೇಡಾ ನನ್ನನ್ನು ಮಂಟಪಕ್ಕೆ ಕೂಗಿದ. ಯೋಹಾನಳೂ ಅಲ್ಲಿಯೇ ಇದ್ದಳು.

"ಹೈನ್ರಿಕ್, ಅಲ್ಲಿ ನೋಡು ಬಾ."

ಗುಡ್ಡದ ಮೇಲಿನ ಚೆರ್ರಿ ಮರಗಳು ಹೂ ಬಿಟ್ಟಿದ್ದವು. ದೂರದ ಆ ದೊಡ್ಡ ಗುಡ್ಡದ ಮೇಲೆ ಎಲ್ಲೆಲ್ಲೂ ಸುಂದರ ಚೆರ್ರಿ ಮರಗಳೇ ಕಾಣುತ್ತಿದ್ದವು.

"ನನ್ನ ದೊಡ್ಡ ಆಸ್ತಿಯೆಂದರೆ ಆ ಗುಡ್ಡ. ಚೆರ್ರಿಗಳು ಹಣ್ಣಾದ ನಂತರ ನೀನು ಯೋಹಾನಳೊಡನೆ ಹೋಗಿ ಸ್ಪಿಂಗೆನ್‌ಬರ್ಗ್‌ನ ಪೇಟೆಯಲ್ಲಿ ಅವುಗಳನ್ನು ಮಾರಿ ಬರಬೇಕು. ಅಲ್ಲಿಯವರೆಗೆ ಇರುತ್ತೀ ತಾನೇ?" ಯೋಹಾನ ನನ್ನೆಡೆಯೇ ನೋಡುತ್ತಿದ್ದಳು. ನನ್ನ ಮನಸ್ಸಿನ ಭಾರ ಏಕೋ ಕಡಿಮೆಯಾಯಿತ. "ಆಗಲಿ," ಎಂದೆ.

ಚೆರ್ರಿ ಹೂಗಳು ಚೆನ್ನಾಗಿ ಅರಳಿದ್ದವು. ಕಾಯಿಗಳೂ ಕಚ್ಚಿದ್ದವು. ಬಿಸಿಲೂ ಚೆನ್ನಾಗಿತ್ತು. ಮುಂದೆ ಕೆಲ ದಿನಗಳಲ್ಲೇ ಕಾಯಿಗಳು ಹಣ್ಣಾದವು.

ಶಿಕೇಡಾ ಯಾವುದೋ ಕೆಲಸದ ನಿಮಿತ್ತ ಹಳ್ಳಿಗೆ ಹೋಗುವವನಿದ್ದ. ಅಂದು ಬೆಳಗ್ಗೆ ನಾನು ದನಕರುಗಳಿಗೆ ಹುಲ್ಲು ಹಾಕುತ್ತಿದ್ದಾಗ ಯೋಹಾನ ಕೊಟ್ಟಿಗೆಯ ಬಳಿ ಬಂದಳು.

"ಹೈನ್ರಿಕ್, ಈ ದಿನ ಚೆರ್ರಿ ಗುಡ್ಡಕ್ಕೆ ಹೋಗೋಣವೇ?"

ನಾನು ತಲೆ ಆಡಿಸಿದೆ.

ಬುಟ್ಟಿಗಳೊಡನೆ ಇಬ್ಬರೂ ಹೊರಟೆವು. ಜೇಡಿಮಣ್ಣಿನ ಇಳಿಜಾರಾದ ರಸ್ತೆಯಲ್ಲಿ ನಾವು, ಹುಲ್ಲುಗಾವಲಿನ ಇಕ್ಕಟ್ಟಾದ ಜಾಗದಲ್ಲಿ ನಡೆದೆವು. ಬೆಳಗಿನ ಬಿಸಿಲಿನಲ್ಲಿ ಹೊಳೆಯುತ್ತಿರುವ ಚೆರ್ರಿ ಮರಗಳ ಗುಡ್ಡವನ್ನು ತಲಪಿದ್ದಾಯಿತು. ಯೋಹಾನ ಅಲ್ಲಿದ್ದ ಶೆಡ್ಡಿನ ಬಾಗಿಲು ತೆರೆದಳು. ಒಳ ಹೊಕ್ಕು ಅಲ್ಲಿದ್ದ ಏಣಿಯನ್ನು ಹೊರತಂದೆ, ಮರ ಹತ್ತಿ ಹಣ್ಣುಗಳನ್ನು ಕಿತ್ತು ಕೆಳಗೆ ಹಾಕಿದೆ. ಯೋಹಾನ ಹಣ್ಣುಗಳನ್ನು ಆರಿಸಿ ಬುಟ್ಟಿಗೆ ತುಂಬುತ್ತಿದ್ದಳು. ಎರಡು ಗಂಟೆ ಕೆಲಸ ಮಾಡಿ, ನಂತರ ನೆಲದ ಹುಲ್ಲಿನ ಮೇಲೆ ಅಕ್ಕ ಪಕ್ಕದಲ್ಲೇ ಕುಳಿತೆವು. ಗುಡ್ಡದಿಂದ ಕೆಳಗೆ ನಮ್ಮ ಹಳ್ಳಿ ಕಾಣಿಸುತ್ತಿತ್ತು. ತಂಗಾಳಿ ಹಿತವಾಗಿ ಬೀಸುತ್ತಿತ್ತು.

"ಹೈನ್ರಿಕ್," ಯೋಹಾನ ಹೇಳಿದಳು, "ಈ ಗುಡ್ಡ ನಿಜವಾಗಿ ನನ್ನದು. ಬಳುವಳಿಯಾಗಿ ಬಂದದ್ದು. ಇದರ ಆದಾಯವನ್ನು ನಾನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು."

"ಹಾಗಿದ್ದರೆ ಈ ಸಾರಿ ಒಳ್ಳೆಯ ಲಾಭವೇ ನಿನಗೆ ಬರುತ್ತದೆ ಅನ್ನು."

"ನಿಜ," ಅವಳೆಂದಳು. "ಆದರೂ ದುಡ್ಡು ಶಿಕೇಡಾನೇ ತೆಗೆದುಕೊಳ್ಳುತ್ತಾನೆ."

ನಾವು ತಂದ ಕಾಫಿ ತಣ್ಣಗಾಗಿತ್ತು. ಇಬ್ಬರೂ ಅದನ್ನೇ ಕುಡಿದು ಬ್ರೆಡ್ ತಿಂದೆವು. ನಾನು ಮತ್ತೆ ಮರ ಹತ್ತಿ ಹಣ್ಣುಗಳನ್ನು ಕೀಳತೊಡಗಿದೆ. ಅವುಗಳೆಲ್ಲವನ್ನೂ ಯೋಹಾನ ಆರಿಸಿ ತುಂಬಿದಳು. ಬೆಳಗಿನ ಎಂಟು ಗಂಟೆಯ ಹೊತ್ತಿಗೆ ನಾಲ್ಕು ಬುಟ್ಟಿ ತುಂಬಿಸಿದ್ದೆವು. ಅಷ್ಟರಲ್ಲಿ ಆಳು ಹುಡುಗಿಯೊಬ್ಬಳು ಹೊಲದಿಂದ ಗಾಡಿ ತಂದಿದ್ದಳು. ಗಾಡಿಯಲ್ಲಿ ಬುಟ್ಟಿಗಳನ್ನು ಹೇರಿದ್ದಾಯಿತು. ಯೋಹಾನ ಗಾಡಿಯ ಜೀನುಗಳನ್ನು ಕೈಗೆ ತೆಗೆದುಕೊಂಡಳು. ಸ್ಪಿಂಗೆನ್‌ಬರ್ಗ್‌ನ ಪೇಟೆಯೆಡೆ ಗಾಡಿ ಓಡಿತು.

ಬಿಸಿಲು ಹೆಚ್ಚುತ್ತಿತ್ತು. ದಟ್ಟವಾದ ಕಾಡು-

ಗಳ ಮೂಲಕ ಪ್ರಯಾಣ ಮಾಡಿದೆವು. ಸ್ವಲ್ಪ ಸಮಯದ ನಂತರ ಜೀನುಗಳನ್ನು ನಾನೇ ತೆಗೆದುಕೊಂಡೆ. ಕುದುರೆಯ ಖುರಪುಟ ಸಂಗೀತದಂತಿತ್ತು. ಎಂತಹ ನೆಮ್ಮದಿ! ಯೋಹಾನಳೆಡೆ ನೋಡಿದೆ. ಮುಖದ ಮೇಲೆ ಬಿಸಿಲು ಬೀಳುವಂತೆ ಕುಳಿತು ಕಣ್ಣುಗಳನ್ನು ಅರ್ಧ ಮುಚ್ಚಿದ್ದಳು. ನನಗೇ ತಿಳಿಯದಂತೆ ನಾನು ಹಾಡಲು ತೊಡಗಿದ್ದೆ. ಯೋಹಾನ ನಿದ್ರಿಸತೊಡಗಿದ್ದಳು.

ಸ್ವಿಂಗೆನ್‌ಬರ್ಗ್, ಡಾಮ್‌ಸ್ಟಾಡ್ ಮತ್ತು ಹೈಡೆಲ್‌ಬರ್ಗ್‌ಗಳ ನಡುವೆ ಬರುತ್ತದೆ. ಆ ಪುಟ್ಟ, ಮುದ್ದಾದ ಊರಿನಲ್ಲಿ ಒಂದು ಸುಂದರ ಬಿಳಿ ಕಲ್ಲಿನ ಚರ್ಚ್ ಇದೆ.

ಪೇಟೆಯಲ್ಲಿ ವ್ಯಾಪಾರ ಚೆನ್ನಾಗಿ ನಡೆಯಿತು. ಯೋಹಾನಳಿಗೆ ಕೈತುಂಬಾ ಹಣ ಬಂತು. ಒಂದು ಚಿಕ್ಕ ಅಂಗಡಿಯಲ್ಲಿ ಕಾಫಿ ಕುಡಿದು ಸಂಜೆಯ ವೇಳೆ ಮನೆಯ ಕಡೆ ಹೊರಟೆವು. ಈಗ ನಾನೇ ಜೀನುಗಳನ್ನು ಕೈಗೆ ತೆಗೆದುಕೊಂಡೆ. ಯೋಹಾನ ನನ್ನ ಪಕ್ಕದಲ್ಲಿ ಕುಳಿತಳು.

ಗಾಡಿ ಕಾಡುಗಳ ಮಧ್ಯೆ ಓಡುತ್ತಿದ್ದಾಗ ಮನಸ್ಸು ಎಲ್ಲಿಯೋ ಓಡುತ್ತಿತ್ತು. ಮೆಲ್ಲನೆ ಯೋಹಾನಳ ಸೊಂಟವನ್ನು ತೋಳಿನಿಂದ ಬಳಸಿದೆ. ಯೋಹಾನ ಪ್ರತಿಭಟಿಸಲಿಲ್ಲ, ಬದಲು ಮುಗುಳ್ನಕ್ಕಳು. ನನಗೆ ಸಂತೋಷವಾಯಿತು. "ಚುಂಬಿಸಲೇ" ಎನ್ನುತ್ತಾ ಲಗಾಮು ಎಳೆದು ಕುದುರೆಯನ್ನು ನಿಲ್ಲಿಸಿದೆ. ಯೋಹಾನ ಮತ್ತೆ ಮುಗುಳ್ನಕ್ಕಳು.

"ಹೈನ್ರಿಕ್! ನಾನು ನಿನ್ನ ಹೆಂಡತಿಯಲ್ಲ!"

ನನ್ನ ಮುಖ ಕೆಂಪಾಯಿತು. ಸೊಂಟವನ್ನು ಬಳಸಿದ್ದ ತೋಳನ್ನು ಹಿಂದೆಗೆದೆ. ಲಗಾಮನ್ನು ಸಡಿಲಗೊಳಿಸಿದೆ.

ಯೋಹಾನ ತನ್ನ ಮಾತನ್ನು ಮುಂದುವರಿಸಿದಳು.

"ಹೈನ್ರಿಕ್! ನಾನೇನೋ ಶಿಕೇಡಾನ ಹೆಂಡತಿ. ಆದರೆ ನನ್ನ ಪ್ರೇಮವನ್ನು ಸೂರೆಗೊಂಡಿದ್ದವ ಯುದ್ಧದಿಂದ ಮರಳಿ ಬರಲಿಲ್ಲ. ಆದುದರಿಂದ ನಾನು ನಿರ್ವಾಹವಿಲ್ಲದೆ ಶಿಕೇಡಾನನ್ನು ಮದುವೆಯಾದೆ. ಶಿಕೇಡಾ ಅನುಕೂಲವಂತ ರೈತ. ಅವನೊಡನೆ ಸಂಸಾರ ಪ್ರಾರಂಭಿಸಿದೆ. ಇಲ್ಲಿ ನನಗೇನೂ ಕಡಿಮೆಯಿರಲಿಲ್ಲ. ಆದರೆ ಈ ಜೀವನದಲ್ಲಿ ಪ್ರೇಮದ ಸವಿ ಇರಲಿಲ್ಲ. ಅದೊಂದು ಆತುರದ ಸಮಾಗಮವಾಯಿತು ಅಷ್ಟೆ.

"ಅಂತೂ ನನ್ನೆಣಿಕೆ ತಪ್ಪಾಯಿತು. ನಾನು ಈ ಆರು ವಾರಗಳಿಂದ ನಿನ್ನನ್ನು ನೋಡುತ್ತಿರುವುದರಿಂದ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಮೊದಲು ಹಾಗಿರಲಿಲ್ಲ."

"ಯೋಹಾನ" ನಾನೆಂದೆ, ಅಷ್ಟೇ. ಮತ್ತೇನೂ ಹೇಳಲಾಗಲಿಲ್ಲ.

ಯೋಹಾನ ಮತ್ತೆ ಮುಂದುವರಿಸಿದಳು.

"ನಾನು ಬಹು ದಿನಗಳಿಂದ ನಿನ್ನನ್ನು ಗಮನಿಸುತ್ತಿದ್ದೇನೆ. ಏಕೋ ನೀನು ಸುಖಿಯಾಗಿಲ್ಲ. ಮತ್ತೆ ನನ್ನ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ."

ನಾನು ಆಕೆಯ ಮುಖವನ್ನೇ ದಿಟ್ಟಿಸುತ್ತಿದ್ದೆ.

"ಆದರೆ ಈಗ ಮತ್ತೇನನ್ನೂ ಬದಲಾಯಿಸಲಾಗುವುದಿಲ್ಲ. ನಾನು ಮಗುವಿನ ತಾಯಿಯಾಗಲಿದ್ದೇನೆ. ಶಿಕೇ ಅದು ಗಂಡೆಂದೇ ನಂಬಿದ್ದಾನೆ!"

ಕುದುರೆ ಓಡುತ್ತಿತ್ತು. ಕಾಡು ಸ್ತಬ್ಧವಾಗಿತ್ತು.

"ನಿನ್ನನ್ನು ಇಷ್ಟಪಡುತ್ತೇನೆ, ಹೆನ್ರಿಕ್" ಯೋಹಾನಳ ದನಿ ಮೆದುವಾಯಿತು. "ನಿಜವಾಗಿಯೂ ನಿನ್ನೊಡನೆ ಹೇಗೆ ಮಾತಾಡಬೇಕೆಂದೇ ನನಗೆ ತೋಚುತ್ತಿಲ್ಲ; ಆದರೂ ನನ್ನ ಭಾವನೆಗಳನ್ನು ನಿನ್ನ ಮುಂದೆ ಬಿಚ್ಚಿಡುತ್ತಿದ್ದೇನೆ. ಮಗುವೇನೋ ಶಿಕೇಡಾನದು; ಆತನೇ ನನ್ನ ಪತಿ. ಆದರೆ ನೀನು ಅದು ಹೇಗೋ ಗಾಳಿಯಲ್ಲಿ ತೂರಿಕೊಂಡು ನನ್ನೆಡೆಗೆ ಬಂದಿದ್ದೀ."

ಹಳ್ಳಿ ಹತ್ತಿರವಾಗುತ್ತಿತ್ತು.

"ಶಿಕೇ ಅಂತೂ ಒಳ್ಳೆಯ ರೈತನೇ. ಆತನಿಗೊಬ್ಬ ಮಗ ಬೇಕು. ಆತ ಹೇಳಿದಂತೆ ನಡೆಯುವ ಹೆಂಡತಿ ನಾನಾಗಿರಬೇಕು. ನಾನೂ ಹಾಗೆಯೇ ಇದ್ದೇನೆ. ಆದರೆ ಕೆಲವೊಮ್ಮೆ ಈ ಹಳ್ಳಿಯನ್ನೂ ಈ ಕಣಿವೆಯನ್ನೂ ಬಿಟ್ಟು ಎಲ್ಲಾದರೂ ದೂರ ಓಡಿಹೋಗಿಬಿಡಲೇ ಎನಿಸುತ್ತದೆ. ನೀನೂ ಒಬ್ಬ ಅಲೆಮಾರಿಯೇ. ನಾನು ಹಾಗಾಗಲು ಸಾಧ್ಯವಿಲ್ಲ. ಎಷ್ಟಾದರೂ

ನಾನು, ಗೃಹಿಣಿ ಆತನ ಮಗುವಿನ ತಾಯಿ."

ಮನೆಯನ್ನು ತಲುಪಿದೆವು. ಶಿಕೇಡಾ ಬಾಗಿಲಲ್ಲೇ ನಿಂತಿದ್ದ. ಯೋಹಾನ ದುಡ್ಡಿನ ಚೀಲವನ್ನು ಆತನ ಕೈಗೆ ಕೊಟ್ಟಳು. ಶಿಕೇಡಾ ಸಸುಸಕ್ಕು ನಮ್ಮನ್ನು ಒಳಗೆ ಕರೆದೊಯ್ದು ಜಿನ್ ಬಾಟಲನ್ನು ಮುಂದಿಟ್ಟ. ಅವನೂ ನಾನೂ ಇಬ್ಬರೂ ಸೇರಿ ಕುಡಿದೆವು. ಮದ್ಯದ ಸೀಸೆ ಖಾಲಿಯಾದಾಗ ಎರಡು ಗಂಟೆಗಳು ಉರುಳಿದ್ದವು. ಯೋಹಾನ ಆಗಲೇ ಮಲಗಿದ್ದಳು. ಶಿಕೇಡಾ ಇನ್ನೊಂದು ಬಾಟಲ್ ಮದ್ಯ ತಂದಿಟ್ಟ. ಅದನ್ನೂ ಮುಗಿಸಿದ ಮೇಲೆ ತಾನು ಇನ್ನು ಮೂರು ತಿಂಗಳಲ್ಲಿ ತಂದೆಯಾಗಲಿರುವುದನ್ನು ಹರ್ಷಾತಿರೇಕದಿಂದ ಹೇಳಿದ. ಆಗ ನಡೆಯುವ ಸಮಾರಂಭದಲ್ಲಿ ಪಾಲುಗೊಳ್ಳಲು ಅಲ್ಲಿಯುವರೆಗೆ ತನ್ನನ್ನು ಬಿಟ್ಟು ಹೋಗಬಾರದೆಂದು ಒತ್ತಾಯಿಸಿದ.

ಇದಾದ ಬಳಿಕ ನಾನು ಯೋಹಾನಳ ಜೊತೆಗೂಡಿ ಪ್ರತಿ ಮುಂಜಾವು ಕಿರ್ಪ್‌ಬರ್ಗ್‌ಗೆ ಹೋಗತೊಡಗಿದೆ. ಅಲ್ಲಿ ಇಬ್ಬರೂ ಚೆರ್ರಿ ಹಣ್ಣುಗಳನ್ನು ಆರಿಸಿ ಅವುಗಳನ್ನು ಸ್ವಿಂಗೆನ್‌ಬರ್ಗ್ ಪೇಟೆಗೆ ತೆಗೆದುಕೊಂಡು ಹೋಗುತ್ತಿದ್ದೆವು. ಈ ವೇಳೆಗೆ ಯೋಹಾನ ನನ್ನನ್ನು ಪ್ರೀತಿಸಲಾರಂಭಿಸಿದ್ದಳು. ಅವಳ ಜೀವನದ ಹೂದೋಟದಲ್ಲಿ ನಾನು ಹೊಸದಾಗಿ ನೆಟ್ಟ ಗಿಡವಾಗಿದ್ದೆ. ಆದರೆ ಶಿಕೇಡಾನ ಬಗೆಗೆ ಅವಳ ನಿಷ್ಠೆ ಕಡಿಮೆಯಾಗಿರಲಿಲ್ಲ.

ಒಂದು ದಿನ ಶಿಕೇಡಾ, "ನಾಡಿದ್ದೇ ಚೆರ್ರಿ ಹಬ್ಬ," ಎಂದು ನನ್ನೊಡನೆ ಹೇಳಿದ. ನಾನು ಅದೇನೆಂದು ಯೋಹಾನಳನ್ನು ಕೇಳಿದೆ. ಅದೊಂದು ಚೆರ್ರಿ ಬೆಳೆಯ ನಿಮಿತ್ತದ ವಂದನಾರ್ಪಣ ದಿನ. ಅಕ್ಕ ಪಕ್ಕದ ಹೊಲಗಳ ಸ್ನೇಹಿತರು, ಸಂಗೀತಗಾರರು ಹಾಗೂ ಹಳ್ಳಿಯ ಇತರ ಹುಡುಗ, ಹುಡುಗಿಯರೆಲ್ಲಾ ಸಮಾರಂಭದಲ್ಲಿ ಪಾಲುಗೊಳ್ಳಲು ಬರುವವರಿದ್ದರು.

ಆ ದಿನ ಮುಂಜಾನೆ ಯಥಾಪ್ರಕಾರ ನಾವಿಬ್ಬರೂ ಚೆರ್ರಿಗಳನ್ನು ತೆಗೆದುಕೊಂಡು ಹೋದೆವು. ಅಂದು ಮರಳಿ ಬರುವಾಗ ನಾನವಳನ್ನು ಪ್ರಥಮ ಸಲ ಚುಂಬಿಸಿದೆ. ಇನ್ನು ಎರಡೇ ತಿಂಗಳಲ್ಲಿ ಮಗು ಹುಟ್ಟಲಿದೆಯೆಂದೂ ಗಂಡಾದರೆ ಅದಕ್ಕೆ ನನ್ನ ಹೆಸರನ್ನೇ ಇಡುವುದಾಗಿಯೂ ಆಕೆ ಹೇಳಿದಳು.

ಕಾಡಿನೊಳಗೆ ಗಾಡಿ ಲಯಬದ್ಧವಾಗಿ ಸಾಗುತ್ತಿತ್ತು.

"ಯೋಹಾನ," ನಾನೆಂದೆ. "ವಿಧಿ ನನ್ನನ್ನು ಎಲ್ಲಿಗೆ ಎಳೆದುಕೊಂಡು ಹೋಗುತ್ತದೊ ಏನೊ, ಆದರೆ ನಿನ್ನ ಪ್ರೇಮವನ್ನು ಮಾತ್ರ ನಾನೆಂದೂ ಮರೆಯಲಾರೆ. ಏಕೆ ಗೊತ್ತೇ? ನೀನಿಷ್ಟು ಹತ್ತಿರವಿದ್ದೂ ಕೈಗೆ ನಿಲುಕದ ನಕ್ಷತ್ರವಾಗಿದ್ದೀಯೆ."

ಯೋಹಾನ ಲಗಾಮನ್ನು ಎಳೆದಳು.

"ಹೆನ್ರಿಕ್," ಅವಳ ದನಿ ಮೆದುವಾಗಿತ್ತು. ಕೆಳಕ್ಕೆ ಬಾಗಿ ನನ್ನನ್ನೊಮ್ಮೆ ಪ್ರೇಮಾತಿಶಯದಿಂದ ಚುಂಬಿಸಿದಳು. ಗಾಡಿ ಗುಡ್ಡದ ತುದಿಯಲ್ಲಿತ್ತು. ಮಂದಮಾರುತದಲ್ಲಿ ಹುಲ್ಲಿನ ಎಸಳುಗಳು ನರ್ತಿಸುತ್ತಿದ್ದವು. ಕೆಳಗೆ ದೂರದಲ್ಲಿ ಹಳ್ಳಿ ಕಾಣಿಸುತ್ತಿತ್ತು. ಪ್ರಶಾಂತ ಮೈದಾನ ಹಸಿರಿನಿಂದ ಕಂಗೊಳಿಸುತ್ತಿತ್ತು.

ಯೋಹಾನ ದೂರದ ಆ ಹಳ್ಳಿಯ ಕಡೆ ಎವೆಯಿಕ್ಕದೆ ನೋಡುತ್ತಿದ್ದಳು.

"ನನ್ನ ಮನಸ್ಸೇನೋ ಅಲ್ಲಿಲ್ಲ. ಆದರೇನು? ನನ್ನ ಮಗು ಇರಬೇಕಾದ ಜಾಗ ಅಲ್ಲಿದೆ? ಅಂದಮೇಲೆ ಮನಸ್ಸಿರಲಿ, ಇಲ್ಲದಿರಲಿ ನಾನೂ ಅಲ್ಲಿಯೆ ಇರಬೇಕಲ್ಲವೆ?"

"ಹೌದು, ನಾನು ನಿನ್ನನ್ನು ಪ್ರೀತಿಸುತ್ತೇನೇನೋ ನಿಜ, ಆದರೆ ನೀನು ನಿನ್ನ ಆವಶ್ಯಕತೆಗಳಿಗೆ ತಕ್ಕಂತೆಯೇ ಬಾಳಬೇಕಾಗುತ್ತದೆ," ನಾನೆಂದೆ.

ಯೋಹಾನ ಮನಸಾರೆ ಅತ್ತಳು. ಜೀನುಗಳನ್ನು ಕೈಲಿ ತೆಗೆದುಕೊಂಡು ನಾನೇ ಕುದುರೆಗಳನ್ನು ಓಡಿಸಿದೆ.

ಅನಂತರ ನಡೆದದ್ದನ್ನು ನೆನೆಸಿಕೊಂಡರೆ ಈಗಲೂ ಮೈ ಜುಮ್ಮೆನ್ನುತ್ತದೆ. ನಾವು ಹಳ್ಳಿಯನ್ನು ತಲುಪಿದ್ದೇ ತಡ, ಹೆಂಗಸರೂ ಗಂಡಸರೂ ನಮ್ಮೆಡೆ ಓಡಿಬಂದರು. ಅವರ ಹಿಂದೆಯೇ ಮಕ್ಕಳೂ ಗುಂಪುಗುಂಪಾಗಿ ಓಡಿ

ಬಂದರು. ಎಲ್ಲರ ದೃಷ್ಟಿಯೂ ನಮ್ಮೆಡೆಯೇ.

"ಏನಾಯಿತು ?" ಯೋಹಾನ ಗಾಬರಿಯಿಂದ ಎದ್ದು ಕೇಳಿದಳು.

ಎಲ್ಲರೂ ಮೌನ. ನಾವು ನಮ್ಮ ಹೊಲದ ಮನೆಯನ್ನು ತಲುಪಿದೆವು. ಸಂಗೀತ ಹೇಳುವವರು ಅಲ್ಲಿ ನೆರೆದಿದ್ದರು. ಗಿಡಮರಗಳೆಲ್ಲಾ ಬಣ್ಣ-ಬಣ್ಣದ ರಿಬ್ಬನ್ನುಗಳಿಂದ ಅಲಂಕೃತವಾಗಿದ್ದವು. ಪಿತೃಭೂಮಿಯ (ಜರ್ಮನಿಯಲ್ಲಿ ದೇಶವನ್ನು 'ಫಾದರ್ ಲ್ಯಾಂಡ್' ಎಂದೇ ಸಂಬೋಧಿಸುತ್ತಾರೆ) ಬಾವುಟ ಮನೆಯ ಮೇಲೆ ಹಾರಾಡುತ್ತಿತ್ತು.

"ಏನಾಯಿತು ? ಏನು ಸಮಾಚಾರ ?" ಯೋಹಾನ ಉದ್ವೇಗದಿಂದ ಕೂಗಿಕೊಂಡಳು. ಪಡಸಾಲೆಯಲ್ಲಿ ನೆರೆದಿದ್ದ ಜನ ಪಕ್ಕಕ್ಕೆ ಸರಿದರು.

ಶಿಕೇಡಾ ಬೆಂಚಿನ ಮೇಲೆ ಮಲಗಿದ್ದ. ಹಣೆಯಿಂದ ರಕ್ತ ಜಿನುಗುತ್ತಿತ್ತು, ಬಟ್ಟೆಯಲ್ಲಾ ರಕ್ತಸಿಕ್ತವಾಗಿತ್ತು. ಬೆಂಚಿನ ಕೆಳಗೆ ರಕ್ತ ಹರಿದಿತ್ತು.

"ಏನಾಯಿತು ?" ಯೋಹಾನ, ಗಾಬರಿಯಿಂದ ಕೂಗಿದಳು. ನ್ಯೂಸ್ಟಾಡ್‌ನಿಂದ ಬಂದಿದ್ದ ವೈದ್ಯ ಉತ್ತರಿಸಿದ: "ಆತ ತನ್ನ ಮೋಟಾರ್ ಬೈಕ್‌ನಿಂದ ಬಿದ್ದುಬಿಟ್ಟ. ಇನ್ನೇನು, ಆತ ಬಹಳ ಕಾಲ ಬದುಕುವ ಹಾಗಿಲ್ಲ, ಅವನ ಅಂತ್ಯ ಸಮೀಪಿಸುತ್ತಿದೆ."

ಯೋಹಾನ ಚಿಕ್ಕಮಕ್ಕಳ ಹಾಗೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅದನ್ನು ನೋಡಿ ನನಗಾದ ಸಂಕಟ ಹೇಳತೀರದು. ಆಕೆ ಅತ್ತಳು, ನಕ್ಕಳು, ನಕ್ಕಳು, ಅತ್ತಳು. ಅಲ್ಲಿ ನಿಂತಿದ್ದ ಗಂಡಸರು ಸ್ವಲ್ಪ ಹಿಂದೆ ಸರಿದರು. ದೂರದಲ್ಲಿ ನಿಂತಿದ್ದ ಹೆಂಗಸರು ಓಡೋಡಿ ಬಂದರು.

ಯೋಹಾನ ಮೇಲಕ್ಕೆ ಎದ್ದು ದುಃಖದಿಂದ ಕೂಗಿಕೊಳ್ಳುತ್ತಾ ಹೊಟ್ಟೆಯನ್ನು ಹಿಡಿದುಕೊಂಡು ಮತ್ತೆ ಕೆಳಗೆ ಬಿದ್ದಳು. ಅವಳನ್ನೆತ್ತಿಕೊಂಡು ಹೆಂಗಸರೆಲ್ಲಾ ಮನೆಯೊಳಗೆ ಹೋದರು.

ನಾವು ಶಿಕೇಡಾನ ಬಳಿಯಲ್ಲಿಯೇ ನಿಂತಿದ್ದೆವು. ಕೊಟ್ಟಿಗೆಯಲ್ಲಿದ್ದ ಹಸುಗಳೂ ಅಶಾಂತಿಯಿಂದ ಮಿಸುಕಾಡುತ್ತಿದ್ದವು. ಮನೆಯಲ್ಲಿನ ಹೆಂಗಸರು ಕೂಗಿ ಕೂಗಿ ಅಳುವುದು ಕೇಳಿಸುತ್ತಿತ್ತು. ಇಗರ್ಜಿಯ ಪ್ರಾರ್ಥನೆಯ ಗಂಟೆ ಹೊಡೆಯಿತು-

ಶಿಕೇಡಾ ಎದ್ದ. ರಕ್ತ ಮತ್ತು ನೊರೆ ಅವನ ಬಾಯಿಂದ ಉಕ್ಕುತ್ತಿತ್ತು. ತಗ್ಗಿದ ಧ್ವನಿಯಲ್ಲಿ, "ನನ್ನ ಮಗ ಬಂದನೇ?" ಎಂದು ಉಸುರಿದ.

ಓ ದೈವವೇ ! ನನ್ನ ಕಾಲುಗಳು ನಡುಗಿದವು. ನಾವು ಇವನನ್ನೆತ್ತಿ ಒಳಗೆ ಒಯ್ದೆವು. ಮೇಲಿನಿಂದ ಯೋಹಾನಳ ನರಳಾಟ ಕೇಳಿಸುತ್ತಿತ್ತು. ಸ್ವಲ್ಪ ಎಚ್ಚರ ಬಂದಾಗಲೂ ಶಿಕೇಡಾ "ಮಗ ಬಂದನೇ ?" ಎಂದು ಕೇಳುತ್ತಿದ್ದ.

ಎಲ್ಲೆಡೆ ಮೌನ ಆವರಿಸಿತ್ತು. ನಾನು ಶಿಕೇಡಾನ ಬಳಿ ಕುಳಿತೆ. ಆತ ದೀರ್ಘವಾಗಿ ಉಸಿರೆಳೆದುಕೊಂಡು ಒಮ್ಮೆ ಕ್ಷೀಣವಾಗಿ ನಕ್ಕು ಹಿಂದೆ ಉರುಳಿದ.

"ಅಮೆನ್." ಡಾಕ್ಟರು ಅವನ ರೆಪ್ಪೆಗಳನ್ನು ಮುಚ್ಚಿದರು, ಮೇಲೆ ಮಹಡಿಯ ಕೋಣೆಯಲ್ಲಿ ಮಗು ಅಳುತ್ತಿತ್ತು. ನಾನು ಒಳಗೆ ಹೋಗಿ ನನ್ನ ಚೀಲವನ್ನು ಕೈಗೆ ತೆಗೆದುಕೊಂಡೆ. ಅಂಗಳದಲ್ಲಿ ಸಂಗೀತಗಾರರೂ ಹೆಂಗಸರೂ ನಿಂತಿದ್ದರು. ಒಮ್ಮೆ ಸುತ್ತಲೂ ನೋಡಿ ಹೊರ ನಡೆದೆ. ನಾನು ಅಲ್ಲಿಯ ವರೆಗೂ ನಡೆದು ಬಂದ ದಾರಿ ದೀರ್ಘವಾಗಿತ್ತು. ಆದರೆ ನಡೆಯಬೇಕಾದ ದಾರಿ ಇದಕ್ಕಿಂತಲೂ ದೀರ್ಘವಾಗಿತ್ತು. ಅನಂತವಾಗಿ ಹರಡಿದ ರಸ್ತೆಯಿಂದ ಒಂದೇಸಮನೆ ಧೂಳು ಮೇಲೇರುತ್ತಿತ್ತು. ನಾವೆಲ್ಲ ಹುಟ್ಟಿದ್ದು ಧೂಳಿನಲ್ಲಿ, ಒಂದಿಲ್ಲ ಒಂದು ದಿನ ನಾವೆಲ್ಲರೂ ಸೇರಬೇಕಾದದ್ದೂ ಧೂಳಿನಲ್ಲಿಯೆ ಎಂಬ ವಿಚಾರ ಬರುತ್ತಿದ್ದಂತೆಯೆ ಹೃದಯ ಆ ಧೂಳಿನಲ್ಲಿ ಸೇರಿಕೊಂಡು ನಡೆಯತೊಡಗಿದೆ. ✡



# ಇದುವೆ ಜೀವ ಇದು ಜೀವನ

ಒಮ್ಮೆ ನಾನು ಮೈಸೂರಿನಿಂದ ಬೆಂಗಳೂರಿಗೆ ಹೊರಟಿದ್ದೆ. ನನಗೆ ಸಿಕ್ಕಿದ್ದು ಲಗ್ಷುರಿ ಬಸ್ಸಾಗಿದ್ದರೂ ಖಾಸಗಿ ಮುರುಕು ಬಸ್ಸುಗಳು ಇದಕ್ಕಿಂತ ಎಷ್ಟೋ ವಾಸಿ ಎನಿಸುವಂತಿತ್ತು.

ಬಸ್ಸು ಹೊರಡಬೇಕೆನ್ನುವಾಗಲೇ ಅವಸರವಸರವಾಗಿ ಒಬ್ಬ ಮುದುಕ, ಮುದುಕಿ ಒಳಗೆ ಬಂದು ನನ್ನ ಸೀಟಿನ ಪಕ್ಕದಲ್ಲಿ ನಿಲ್ಲಲಾರದೆ ನಿಂತುಕೊಂಡರು.

ನನಗೆ ಆ ಅಜ್ಜ, ಅಜ್ಜಿಯನ್ನು ಕಂಡು ಕನಿಕರವೆನಿಸಿತು. "ನೀವು ಹೊರಟಿದ್ದೆಲ್ಲಿಗೆ?" ಎಂದೆ. "ಮದ್ದೂರಿಗೆ" ಎಂದ ಮುದುಕ. ಅವನ ಕಣ್ಣು ನನ್ನ ಸೀಟಿನ ಮೇಲಿತ್ತು. ಅವನ ಕಣ್ಣ ಬೇಡಿಕೆಗೆ ಇಲ್ಲ ಎನ್ನಲಾಗಲಿಲ್ಲ. ಎದ್ದು ನಿಂತು, "ನೀವು ಕುಳಿತುಕೊಳ್ಳಿ; ನಾನು ಬೆಂಗಳೂರಿಗೆ ಹೋಗುತ್ತಿದ್ದೇನೆ. ನೀವು ಮದ್ದೂರಲ್ಲಿ ಇಳಿದಾಗ ನಾನು ಕುಳಿತುಕೊಳ್ಳುತ್ತೇನೆ," ಎಂದೆ. ಉಪಚಾರಕ್ಕಾಗಿ ಬೇಡವೆಂದರೂ ಆ ಅಜ್ಜ ಅಜ್ಜಿಯನ್ನು ನನ್ನ ಸೀಟಿನಲ್ಲಿ ಕೂಡಿಸಲು ತಯಾರಾದ. ಮೀಸೆ ಬಿಟ್ಟು ಬೆಲ್ ಬಾಟಂ ಪ್ಯಾಂಟ್ ತೊಟ್ಟ ಹುಡುಗನೊಬ್ಬ ನನ್ನ ಪಕ್ಕದಲ್ಲಿ ಕುಳಿತಿದ್ದ. ಪಾಪ, ಆ ಮುದುಕನ ಕಷ್ಟವನ್ನು ಸ್ವಲ್ಪವಾದರೂ ಕಡಿಮೆ ಮಾಡಬೇಕೆಂದು ಆ ಹುಡುಗನಿಗೆ, "ನೀವೂ ಎದ್ದು ನಿಂತರೆ ಈ ಅಜ್ಜ ಕೂಡಬಹುದು," ಎಂದೆ. ಅದಕ್ಕೆ ಆ ಹಿಪ್ಪಿ ಹುಡುಗ ನನ್ನನ್ನೊಮ್ಮೆ ಕೆಂಗಣ್ಣಿನಿಂದ ನೋಡಿ, "ಆಗೋದಿಲ್ರಿ" ಎಂದುಬಿಟ್ಟ. ಆಗ ಆ ಅಜ್ಜಯ್ಯನೆ ನನ್ನನ್ನು ಸಮಜಾಯಿಸಿ, "ಹೋಗಲಿ ಬಿಡಿ" ಎಂದು ಅಜ್ಜಿಯೊಬ್ಬಳನ್ನೇ ಕೂಡಿಸಿ ತಾನು ಗಡ ಗಡ ನಡುಗುತ್ತ ನಿಂತ.

ಬಸ್ಸು ಆಗಲೇ ಸೇಂಟ್ ಫಿಲೊಮಿನಾ ಚರ್ಚ್ ದಾಟಿ ಬೆಂಗಳೂರು ರಸ್ತೆಯಲ್ಲಿ ಸಾಗುತ್ತಿತ್ತು. ಅಷ್ಟರಲ್ಲಿ ಆಧುನಿಕವಾಗಿ ಸಿಂಗರಿಸಿಕೊಂಡಿದ್ದ ಒಬ್ಬ ಯುವತಿ ಹಿಂದಿನ ಸೀಟಿನಿಂದ ಸ್ಥಳ ಬಿಡಿಸಿಕೊಳ್ಳುತ್ತ ಬರತೊಡಗಿದ್ದಳು. 'ಇಲ್ಲಿ ಮೊದಲೇ ಸ್ಥಳವಿಲ್ಲ. ಇಂತಹುದರಲ್ಲಿ ಇವಳೊಬ್ಬಳು ಬೇರೆ ಬರ್ತಿದ್ದಾಳಲ್ಲ,' ಎಂದುಕೊಂಡೆ. ಆ ಯುವತಿ ಬಂದು ನಮ್ಮ ಹತ್ತಿರವೇ ನಿಂತುಕೊಳ್ಳಬೇಕೆ? ಸರಿ. ಆ ಇಕ್ಕಟ್ಟಿನಲ್ಲಿಯೇ ಅವಳಿಗೂ ಸ್ಥಳ ಕೊಟ್ಟಾಯಿತು.

ಆಕೆಯನ್ನೇ ನುಂಗುವಂತೆ ನೋಡುತ್ತಿದ್ದ ನನ್ನ ಪಕ್ಕದ ಹುಡುಗ. ಅದನ್ನು ಕಂಡ ಆಕೆ ಅವನತ್ತ ದೃಷ್ಟಿ ಬೀರಿ ನಸುನಕ್ಕಾಗ ಆತ ಪೆಚ್ಚು ಪೆಚ್ಚಾಗಿ ನಕ್ಕ. ಯುವತಿಯೇ ಮಾತಿಗಾರಂಭಿಸಿ, "ನೀವು ಎಲ್ಲಿಗೆ?" ಎಂದಳು. ಪರಿಚಯವಿಲ್ಲದಿದ್ದರೂ ಬಹಳ ಆತುರವಾಗಿ, "ಬೆಂಗಳೂರಿಗೆ; ನೀವು?" ಎಂದ ಬಹಳ ಆತ್ಮೀಯವಾಗಿ. ಯುವತಿ ತನ್ನ ಕೋಮಲಕಂಠದಿಂದ, "ನಾನೂ ಬೆಂಗಳೂರಿಗೆ ಕಣ್ರಿ, ಅಷ್ಟು ದೂರ ನಿಲ್ಲಬೇಕಲ್ಲ ಅಂತ," ಎಂದು ಆತನ ಮುಖ ನೋಡಿದಳು. ಆತ ಏನೂ ಮಾತಾಡಲಿಲ್ಲ. ಮತ್ತೆ ಆ ಯುವತಿಯೇ, "ನಿನ್ನೆ ಕಾಲೇಜಿನಲ್ಲಿ ಕಬಡ್ಡಿ ಆಡುತ್ತಿದ್ದಾಗ ನನ್ನ ಕಾಲಿಗೆ ಪೆಟ್ಟಾಗಿ ನಿಲ್ಲೋಕೆ ಆಗ್ತಾ ಇಲ್ಲ ಕಣ್ರೀ" ಎಂದು ಯುವಕನತ್ತ ನೋಡಿ ಮತ್ತೊಮ್ಮೆ ನಸುನಕ್ಕಳು. ಆತ, "ನೀವು ಮೊದಲೇ ಬಂದಿದ್ದರೆ ಸೀಟು ಸಿಗುತ್ತಿತ್ತು" ಎಂದು ಸ್ವಲ್ಪ ಹೊತ್ತು ಸುಮ್ಮನಾಗಿ, "ಬೇಕಾದರೆ ನೀವು ನನ್ನ ಜಾಗದಲ್ಲಿ ಕುಳಿತುಕೊಳ್ಳಿ, ಈ ಮುದುಕನ್ನು ಮದ್ದೂರಿನಲ್ಲಿ ಇಳಿದು ಬಿಡುತ್ತಾರೆ. ಆಗ ನಾನು ಕುಳಿತುಕೊಳ್ಳುತ್ತೇನೆ" ಎಂದಾಗ, ಆ ಯುವತಿ "ಬೇಡ ಮಿಸ್ಟರ್, ಕುಳಿತುಕೊಳ್ಳಿ. ನಿಮಗೇಕೆ ತೊಂದರೆ" ಎಂದಳು. ಆಗ ಆ ಯುವಕ "ಬನ್ನಿ ಬನ್ನಿ, ಕುಳಿತುಕೊಳ್ಳಿ. ತೊಂದರೆಯೇನೂ ಇಲ್ಲ" ಎಂದವನೇ ತನ್ನ ಜಾಗ ಬಿಟ್ಟು ಎದ್ದು ನಿಂತ. ಯುವತಿ "ಥ್ಯಾಂಕ್ಸ್" ಎಂದಷ್ಟೇ ಹೇಳಿ

ಕುಳಿತುಕೊಂಡಳು. ನನಗೆ ಆ ಯುವತಿ ಮತ್ತು ಯುವಕನ ಮೇಲೆ ಸಿಟ್ಟು ಬಂತು. ಇವನು ಮುದುಕನಿಗೆ ಜಾಗ ಬಿಡದೆ ಆ ಹುಡುಗಿಗೆ ಜಾಗ ಬಿಟ್ಟನಲ್ಲ. ಈಕೆಯಾದರೂ ಮುದುಕರಿಗೆ ಜಾಗ ಬಿಡದೆ ತಾನೇ ಕುಳಿತು ಬಿಟ್ಟಳಲ್ಲ ಎಂದುಕೊಳ್ಳುತ್ತಿದ್ದೆ. ಅಷ್ಟರಲ್ಲಿ ಆ ಯುವತಿ ಎದ್ದು ನಿಂತು, "ಬನ್ನಿ ತಾತ, ನೀವು ಕುಳಿತುಕೊಳ್ಳಿ ಬನ್ನಿ. ನಿಲ್ಲಲಾರದೆ ನಡುಗುತ್ತಿದ್ದೀರಿ. ನೀವು ಮುದ್ದೂರಲ್ಲಿ ಇಳಿದಾಗ ನಾನು ಕುಳಿತುಕೊಳ್ಳುತ್ತೇನೆ" ಎಂದು ನಿಂತಿದ್ದ ಮುದುಕರನ್ನು ಅವರು ಬೇಡವೆಂದರೂ ಬಿಡದೆ ಕುಳ್ಳಿರಿಸಿ ಆಕೆ ನಿಂತುಕೊಂಡಳು.

ಆಕೆಯ ಕಣ್ಣುಗಳಲ್ಲಿ ತುಂಟ ಬೆಳಕು ಇಣುಕಿ ತುಟಿಯ ಮೇಲೆ ನಸುನಗೆ ಮೂಡಿತ್ತು. ಆಗ ನಾನು ಆಕೆಯನ್ನು ಅರ್ಥಮಾಡಿಕೊಂಡೆ. ಮನಸ್ಸಿನಲ್ಲಿ ಮೆಚ್ಚಿಕೊಂಡೆ.

—ಬಿ. ಶಾಮಸುಂದರ

ಹಲವು ವರ್ಷಗಳ ಹಿಂದಿನ ಮಾತು. ಹಾಸನ ಪುರಸಭೆಗೆ ಚುನಾವಣೆ ನಡೆಯುತ್ತಿತ್ತು. ಆ ಊರಿನ ಸುತ್ತ ಮುತ್ತಲಿನ ಅನೇಕ ಸಣ್ಣ ಸಣ್ಣ ಹಳ್ಳಿಗಳು ಹಾಸನದ ಮುನಿಸಿಪಾಲಿಟಿಗೆ ಸೇರಿದ್ದವು. ನಮ್ಮ ಚಿಕ್ಕಪ್ಪ (ಅಲ್ಲಿನ ವಕೀಲರು) ಒಬ್ಬ ಉಮೇದುವಾರರು. ಚುನಾವಣೆಗೆ ಹಿಂದಿನ ಒಂದು ಭಾನುವಾರ ಒಂದು ಕಾರನ್ನು ಬಾಡಿಗೆ ಮಾಡಿಕೊಂಡು ಸುತ್ತ ಮುತ್ತಲ ಹಳ್ಳಿಗಳಲ್ಲಿ ತಮ್ಮ ಉಮೇದುವಾರಿಕೆಯ ಪ್ರಚಾರಕ್ಕೂ ಮತ ಕೇಳುವುದಕ್ಕೂ ಹೊರಟರು. ತಾವು ಎಂದೂ ನೋಡದೆ ಇದ್ದ ಒಂದು ಹಳ್ಳಿಗೆ ಹೋಗಿ ಮತದಾರರ ಪಟ್ಟಿಯ ಪ್ರಕಾರ ಪ್ರತಿಯೊಂದು ಮನೆಗೂ ಹೋಗಿ ಹೇಳಬೇಕೆಂದುದನ್ನೆಲ್ಲ ಹೇಳಿದರು. ಕೊನೆಗೆ ಒಂದು ಸಣ್ಣ ಮನೆಯ ಮುಂದೆ ನಿಂತರು. ಮನೆಯ ಜಗುಲಿಯ ಮೇಲೆ ಒಬ್ಬಳು ಮುದುಕಿ ಮಾತ್ರ ಕುಳಿತುಕೊಂಡು ಕುಟ್ಟಣೆಯಲ್ಲಿ ಎಲೆ ಅಡಿಕೆಯನ್ನು ಕುಟ್ಟುತ್ತಿದ್ದಳು. ಅವಳಿಗೆ ಕಣ್ಣು-ಕಿವಿಗಳು ಮಂದ. ಆದ್ದರಿಂದ ನಮ್ಮ ಚಿಕ್ಕಪ್ಪನ ಉಡುಪು, ಜರಿ ರುಮಾಲು ಯಾವುದೂ ಅವಳಿಗೆ ಸರಿಯಾಗಿ ಕಾಣಿಸುತ್ತಿರಲಿಲ್ಲ. "ರಂಗೇಗೌಡರು ಮನೆಯಲ್ಲಿ ಇದ್ದಾರೇನಮ್ಮ?" ಎಂದು ಕೇಳಿದಾಗ. "ಆ, ಆ, ಇನ್ನಾ ವಸಿ ಜೋರಾಗಿ ಏಳಬಾರದೆ?'' ಎಂದು ಮುದುಕಿಯು ಕೇಳಿದಳು. ನಮ್ಮ ಚಿಕ್ಕಪ್ಪ ಇನ್ನೂ ಗಟ್ಟಿಯಾಗಿ, "ರಂಗೇಗೌಡರು ಅವರೇನಮ್ಮ ಮನೇಲಿ?'' ಎಂದರು. ಆಗ ಒಳಗಿನಿಂದ ಜೋರಾದ ಧ್ವನಿ ಕೇಬಂತು: "ಇವ್ನಿ, ಇವ್ನಿ, ಉಣ್ಣುಕಾ ಇವ್ನಿ ಕಣಪ್ರೋ! ವಸಿ ಅಂಗೇ ಕುಂತುಕೊಂಡಿರು. ಬಂದುಬುಡ್ತೀನಿ." "ಆಗಲಿ ಗೌಡರೇ, ನಿಧಾನವಾಗಿ ಊಟಾ ಮಾಡಿ. ಇಲ್ಲೇ ಇರ್ತೇನೆ," ಎಂದು ಹೇಳಿ ಅಲ್ಲೇ ಜಗುಲಿಯ ಮೇಲೆ ನಮ್ಮ ಚಿಕ್ಕಪ್ಪ ಕುಳಿತರು. ಸ್ವಲ್ಪ ಹೊತ್ತಿನ ಮೇಲೆ ರಂಗೇಗೌಡರು ತೇಗುತ್ತಾ, ಕೈ ಬಾಯಿ ಒರೆಸಿಕೊಳ್ಳುತ್ತಾ, "ಯಾರಪ್ಪಾ ಅದು, ಏನು ಬೇಕಾಗಿತ್ತು?'' ಎಂದು ಹೇಳುತ್ತಾ, ನಮ್ಮ ಚಿಕ್ಕಪ್ಪನ ಮುಖ ನೋಡಿದ ಕೂಡಲೆ ಗಕ್ಕನೆ ಗಾಬರಿಯಾಗಿ ನಿಂತರು. ನಮ್ಮ ಚಿಕ್ಕಪ್ಪ ಅವರ ಮುಖ ನೋಡಿದೊಡನೆ, ''ಅಯ್ಯೋ ಮುಂಡೇಗಂಡ, ನೀನೇನೋ ರಂಗೇಗೌಡರು ಎಂದರೆ? ನಾನು ಯಾರೋ ಎಂದಿದ್ದೆ!'' ಎಂದು ನಗುತ್ತಾ ಮುಂದೆ ಆಡಬೇಕಾದ ಮಾತನ್ನಾಡಿ ಮುಂದಕ್ಕೆ ಹೊರಟರು. ರಂಗೇಗೌಡರು ಎಂಬವರು ೨೨ ವರ್ಷ ವಯಸ್ಸಿನ ತರುಣ, ನಮ್ಮ ಚಿಕ್ಕಪ್ಪನ ಮನೆಯ ಎಮ್ಮೆಯನ್ನು ಕಾಯುತ್ತ, ಕೊಟ್ಟಿಗೆ ಪಸವನ್ನು ಗುಡಿಸಿ ಹಾಕುತ್ತಿದ್ದ ರಂಗ!

—ಕೇ. ಶ್ರೀ. ಭಾಟ



ಡಾ. ಎಸ್. ವೆಂಕಟೇಶ

ಟ್ರೈಬಾಲಜಿಯ ಜ್ಞಾನವನ್ನು ಉಪಯೋಗಿಸಿ ಪ್ರತಿ ವರ್ಷ ೯೦೨೦ ಕೋಟಿ ರೂಪಾಯಿಗಳನ್ನು ಉಳಿತಾಯ ಮಾಡಬಹುದು.

# ಟ್ರೈಬಾಲಜಿ

ಟ್ರೈಬಾಲಜಿಯ ಜ್ಞಾನವನ್ನು ಉಪಯೋಗಿಸಿ ಪ್ರತಿ ವರ್ಷವೂ ೯೦೦ ಕೋಟಿ ರೂಪಾಯಿಗಳನ್ನು ಉಳಿತಾಯ ಮಾಡಬಹುದು.

ವರ್ಷಂಪ್ರತಿ ಸುಮಾರು ೯೦೦ ಕೋಟಿ ರೂಪಾಯಿಗಳು ಪೋಲಾಗುತ್ತಿದೆ ಎಂಬ ಸುದ್ದಿ ಇತ್ತೀಚೆಗೆ ಇಂಗ್ಲಂಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಈ ಸುದ್ದಿಯು ಬ್ರಿಟಿಷ್ ಸರಕಾರವು ಸಾರ್ವಜನಿಕರ ತಿಳಿವಳಿಕೆಗಾಗಿ ಹೊರಡಿಸಿದ ವರದಿಯಾಗಿತ್ತು. ಕ್ರಿ. ಶ. ೧೯೬೬ ನೇ ಇಸವಿಯಲ್ಲಿ ಖ್ಯಾತ ವಿಜ್ಞಾನಿಗಳೂ ಯಂತ್ರೋಪಕರಣ ತಜ್ಞರೂ ಆದ ಸರ್ ಪೀಟರ್ ಜೋಸ್ಟ್‌ರು ಯಂತ್ರೋಪಕರಣಗಳಲ್ಲಿ ಘರ್ಷಣೆಯಿಂದಾಗುವ ನಷ್ಟದ ಬಗ್ಗೆ ನಡೆಸಿದ ಸಂಶೋಧನೆಯನ್ನಾಧರಿಸಿಯೇ ಬ್ರಿಟಿಷ್ ಸರಕಾರ ಈ ವರದಿಯನ್ನು ಹೊರಡಿಸಿತ್ತು.

ಮಾನವನು ಯಾವಾಗ "ಘರ್ಷಣೆ ಮತ್ತು ಉಪಸ್ನೇಹದ ದ್ರವ" (friction & lubrication) ಗಳ ತಿಳಿವಳಿಕೆಯನ್ನು ಉಪಯೋಗಿಸಲು ಪ್ರಾರಂಭಿಸಿದನು ಎಂಬುದನ್ನು ಇತಿಹಾಸದಿಂದ ಹೇಳುವುದು ಕಷ್ಟ.

ಅನಾದಿ ಕಾಲದಿಂದಲೂ ಮಾನವ ತನಗರಿವಿಲ್ಲದೆ "ಘರ್ಷಣೆ ವಿಜ್ಞಾನ"ದ ಮೂಲತತ್ತ್ವಗಳನ್ನು ಬಳಸುತ್ತಿದ್ದಾನೆ ಎಂದು ಹೇಳಬಹುದು. ಆದಿಮಾನವ ಎರಡು ಮರದ ಕಡ್ಡಿಯ ತುಂಡುಗಳನ್ನು (ಅಥವಾ ಚಕಮುಕಿ ಕಲ್ಲುಗಳನ್ನು) ರಭಸದಿಂದ ಒಂದರ ಮೇಲೆ ಒಂದನ್ನು ಉಜ್ಜಿದಾಗ ಆದ ಘರ್ಷಣೆಯಿಂದ ಶಾಖವು ಉತ್ಪತ್ತಿಯಾಗಿ ಬೆಂಕಿಯು ಹುಟ್ಟಿಕೊಂಡಿತು. ಈ ಉದಾಹರಣೆಯೊಂದರಿಂದಲೇ ನಮಗೆ, ಪ್ರಾಯಶಃ ಶಿಲಾಯುಗದ ಸಮಯದಲ್ಲಿಯೂ ಮಾನವನಿಗೆ ಘರ್ಷಣೆಯ ವಿಜ್ಞಾನದ ಪರಿಚಯವಿತ್ತು ಎಂಬುದು ತಿಳಿಯುತ್ತದೆ. ಇತ್ತೀಚಿನ ವೈಜ್ಞಾನಿಕ ವಿಷಯಗಳಲ್ಲಿಯೂ ಸಹ ಈ ಘರ್ಷಣೆಯ ಶಾಖದ ನಿಯಂತ್ರಣ (control of heat of friction) ಸಂಶೋಧನೆಯ ಬಹಳ ಮುಖ್ಯವಾದ ಅಂಗವಾಗಿದೆ. ನಾವು ಭೂಮಿಯ ಮೇಲೆ ನಡೆಯಬೇಕಾದರಾಗಲಿ, ವಾಹನಗಳು ರಸ್ತೆಯ ಮೇಲೆ ಚಲಿಸಬೇಕಾದರಾಗಲಿ, ಕಪ್ಪು ಹಲಗೆಯ ಮೇಲೆ ಬಳಪ ಅಥವಾ ಸೀಮೆ ಸುಣ್ಣದಿಂದ ಬರೆಯಬೇಕಾದರಾಗಲಿ ಘರ್ಷಣೆ ಬೇಕೇ ಬೇಕು. ಘರ್ಷಣೆಯನ್ನು ಅಧೀನದಲ್ಲಿಟ್ಟುಕೊಂಡು ಮಾನವನು ಅನೇಕ ಯಂತ್ರ ಸಾಧನಗಳನ್ನು ನಿರೂಪಿಸಿದ್ದಾನೆ. ಅವುಗಳಲ್ಲಿ ಅತಿ ಮುಖ್ಯವಾದವುಗಳು - ಯಂತ್ರ ಸಾಮಗ್ರಿಗಳನ್ನೂ ಓಡುತ್ತಿರುವ ವಾಹನ ಸಾಧನಗಳನ್ನೂ ನಿಲ್ಲಿಸಲು ಬೇಕಾದ ತಡೆಗಳು (Brakes), ಕ್ಲಚ್‌ಗಳು, ಕಪ್ಲಿಂಗ್‌ಗಳು

ಇತ್ಯಾದಿ.

ಯಂತ್ರ ಸಾಧನಗಳಲ್ಲಿ ಘರ್ಷಣೆ ಕಡಿಮೆ ಮಾಡಲು "ಸ್ನೇಹಕದ್ರವ" (lubricant) ಗಳನ್ನು ಉಪಯೋಗಿಸುವುದು ಎಲ್ಲರಿಗೂ ತಿಳಿದ ವಿಷಯುವೇ ಆಗಿದೆ. ಈ ಎಣ್ಣೆ ಹಾಕುವುದರಿಂದ ಚಲಿಸುತ್ತಿರುವ ಯಂತ್ರ ಸಾಧನಗಳು ಮತ್ತಷ್ಟು ಸುಲಭವಾಗಿ ಚಲಿಸಲು ಸಾಧ್ಯವಾಗುತ್ತದೆ. ಮನೆಯ ಬಾಗಿಲಿನ ಕೀಲುಗಳು ಕಿರ್ರನೆ ಶಬ್ದ ಮಾಡಿದಾಗ ಅದನ್ನು ತಪ್ಪಿಸಲು ಎಣ್ಣೆ ಹಚ್ಚುವುದು ನಾವುಗಳೆಲ್ಲರೂ ತಿಳಿದುಕೊಂಡಿರುವ ವಿಷಯುವೇ ಆಗಿದೆ. ಈಗಿನ ಆಧುನಿಕ ಜನಜೀವನದಲ್ಲಿ ಲೂಬ್ರಿಕೇಷನ್ ವಿಷಯವು ನಾಗರಿಕತೆಯ ಹಾಸು ಹೊಕ್ಕಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರತಿ ಆಧುನಿಕ ಗೃಹದಲ್ಲಿಯೂ ಅನೇಕ ಯಂತ್ರ ಸಾಮಗ್ರಿಗಳು ಇರುತ್ತವೆ. ಎಲೆಕ್ಟ್ರಿಕ್ ಫ್ಯಾನ್, ಗ್ರೈಂಡರ್,

---

**ದಿವಂಗತ ಡಾ. ವೆಂಕಟೇಶ**

ನದಿಯ ಉಗಮ ಚಿಕ್ಕದಾಗಿದ್ದರೂ, ಹರಿದು ಮುಂದೆ ಹೋಗುತ್ತಿರುವಂತೆಯೇ ಪಾತ್ರ ದೊಡ್ಡದಾಗಿ ಸಮುದ್ರ ಸೇರುವ ರೀತಿಯಲ್ಲಿ ಡಾ. ವೆಂಕಟೇಶ ತಮ್ಮ ಜೀವನವನ್ನು ಸಾಗಿಸಿದರು. ಮಲೆನಾಡಿನ ಮೇಗರವಳ್ಳಿಯಲ್ಲಿ ಹುಟ್ಟಿದ ಅವರು ತಮ್ಮ ಹೈಸ್ಕೂಲು ಶಿಕ್ಷಣವನ್ನು ಬೇರೆ ಬೇರೆ ಊರುಗಳಲ್ಲಿ ಪಡೆದ ಕಾರಣವೆಂದರೆ, ಅವರ ತಂದೆ ಡಾಕ್ಟರ್ ಆನಂದ ಆಳ್ವಾರ್‌ರಿಗೆ ಮೇಲಿಂದ ಮೇಲೆ ಪರ ಊರುಗಳಿಗೆ ವರ್ಗವಾಗುತ್ತಿದ್ದುದು. ೧೯೫೫ರಲ್ಲಿ ಡಾ. ವೆಂಕಟೇಶ ಬೆಂಗಳೂರಿಗೆ ಬಂದು ನ್ಯಾಷನಲ್ ಕಾಲೇಜನ್ನು ಸೇರಿ, ನಂತರ ಪ್ರಥಮ ವೃತ್ತಿ ಪದವಿಗಾಗಿ ಸರಕಾರಿ ಇಂಜಿನಿಯರಿಂಗ್ ಕಾಲೇಜನ್ನು ಸೇರಿದರು. ಬುದ್ಧಿ, ಛಲಗಳಿದ್ದರೆ ಓದಿಗೆ ಕೊನೆಯೇ ಇಲ್ಲ. ಅಂತೆಯೇ ಅವರು ಬೆಂಗಳೂರು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸನ್ನು ಸೇರಿ ಎಂ. ಇ. ಮತ್ತು ಪಿಯೆಚ್. ಡಿ. ಪದವಿಗಳನ್ನು ಪಡೆದರು. ಮುಂದೆ ಸಂಶೋಧನೆಯಲ್ಲೂ, ವಿದ್ಯಾರ್ಥಿಗಳಿಗೆ ಪಾಠ ಹೇಳುವಲ್ಲೂ ನಿರತರಾದ ಡಾ. ವೆಂಕಟೇಶರು ಮೂವತ್ತಕ್ಕೂ ಹೆಚ್ಚು ವೈಜ್ಞಾನಿಕ ಪ್ರಬಂಧಗಳನ್ನು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ನಿಯತಕಾಲಿಕಗಳಲ್ಲಿ ಪ್ರಸಿದ್ಧಿಸಿದರು. ಅವುಗಳಲ್ಲಿಯ ಒಂದು ಪ್ರಬಂಧಕ್ಕೆ -Testing of crankcase oils- ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್‌ನವರು ಗೋಲ್ಡನ್ ಜುಬಿಲಿ ಸರ್ಟಿಫಿಕೇಟ್ ಕೊಟ್ಟಿದ್ದಾರೆ. ೧೯೭೧ ರಲ್ಲಿ ಅವರ ಮಾರ್ಗದರ್ಶಕ ಪ್ರೊಫೆಸರ್ ಎ. ವಿ. ಶ್ರೀನಾಥರೊಂದಿಗೆ ಜೊತೆಯಾಗಿ ಡಾ. ವೆಂಕಟೇಶರು ಪೆರಿಫೆರಿ ಕೆಮರಾ ರಚಿಸಿ ನ್ಯಾಶನಲ್ ರಿಸರ್ಚ್ ಆ್ಯಂಡ್ ಡೆವೆಲಪ್‌ಮೆಂಟ್ ಕಾರ್ಪೊರೇಶನ್‌ನಿಂದ ಎರಡು ಸಾವಿರ ರೂಪಾಯಿ ನಗದು ಬಹುಮಾನ ಮತ್ತು ಪ್ರಶಸ್ತಿ ಪತ್ರಿಕೆ ಪಡೆದರು. ೧೯೭೩-೭೬ ರ ಕಾಲದಲ್ಲಿ ಅವರು ಜರ್ಮನಿ, ಹಾಲೆಂಡ್‌ಗಳಲ್ಲಿ ಸಂಶೋಧನೆ ಮಾಡಿ ಹೋದ ವರುಷವೇ ತಾಯ್ನಾಡಿಗೆ ಮರಳಿದರು. ರಶಿಯನ್, ಜರ್ಮನ್ ಭಾಷೆಗಳ ಬಗ್ಗೆ ಸಾಕಷ್ಟು ಜ್ಞಾನವನ್ನೂ ಅವರು ಪಡೆದಿದ್ದರು.

ಹಲವಾರು ರಾಷ್ಟ್ರೀಯ ಹಾಗು ಅಂತಾರಾಷ್ಟ್ರೀಯ ವೈಜ್ಞಾನಿಕ ಸಂಸ್ಥೆಗಳ ಸದಸ್ಯತ್ವವನ್ನೂ ಇವರು ಪಡೆದಿದ್ದರು. ೧೯೭೬ ರ ನವೆಂಬರ್‌ನಲ್ಲಿ ಅಕಾಲಿಕ ಮರಣಕ್ಕೀಡಾದ ಡಾ. ವೆಂಕಟೇಶ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಸಹಾಯಕ ಪ್ರಾಧ್ಯಾಪಕರಾಗಿದ್ದರು. ದಿವಂಗತರ ಪತ್ನಿ ಶ್ರೀಮತಿ ಪ್ರಭಾ ಕೂಡ ಅಲ್ಲೇ ಕೆಲಸದಲ್ಲಿದ್ದಾರೆ.

ಹೊಲಿಯುವ ಯಂತ್ರ, ಬೈಸಿಕಲ್ ಮುಂತಾದ ಉಪಕರಣಗಳಿಗೆಲ್ಲ ಆಗಾಗ ಎಣ್ಣೆ ಹಾಕಿ ಚಲನ ಸೌಲಭ್ಯವನ್ನು ಉಂಟುಮಾಡುವುದು ನಮಗೆಲ್ಲ ಸರ್ವಸಾಧಾರಣ ತಿಳಿದ ವಿಷಯ ವಾಗಿದೆ.

ಈಗ ಪ್ರಪಂಚದಲ್ಲಿ ಘರ್ಷಣೆಯಿಂದ ಉಂಟಾಗುತ್ತಿರುವ ಶಕ್ತಿಹಾನಿ ಅಪಾರವಾದದ್ದು. ಪಶ್ಚಿಮ ಜರ್ಮನಿಯ ಲೆಕ್ಕಾಚಾರದ ವೋಗೆಲ್ ಪೋಲ್‌ರವರ ಸಂಖ್ಯಾಗ್ರಹಣದ ಪ್ರಕಾರ ಪ್ರಪಂಚದಲ್ಲಿ ನಿರ್ಮಾಣಗೊಳ್ಳುವ ಶಕ್ತಿಯು ಶೇಕಡ ಸುಮಾರು ೩೫ರಿಂದ ೫೦ ರಷ್ಟು ಭಾಗವು ಘರ್ಷಣೆಯಿಂದಲೇ ನಷ್ಟವಾಗುತ್ತಿದೆ. ನಾವುಗಳು ಕಾಣುವ ಯಾವುದೇ ಯಂತ್ರ ಸಾಧನವಾಗಲಿ ವಾಹನವೇ ಆಗಲಿ ಘರ್ಷಣೆಯ ನಿರ್ಬಂಧವನ್ನು ಮೀರಿದಾಗ ಮಾತ್ರವೇ ಮುಂದೆ ಚಲಿಸಬಲ್ಲವು. ಮೋಟಾರು ಕಾರುಗಳ ಕಾರ್ಯ ಸಾಮರ್ಥ್ಯವು ಕಾರಿನ ಚಕ್ರಗಳ ಉರುಳುವ ಘರ್ಷಣೆ (rolling friction), ಗಾಳಿಯ ಘರ್ಷಣೆ (wind resistance), ಬ್ರೇಕುಗಳ ಘರ್ಷಣೆ ಇತ್ಯಾದಿಗಳನ್ನು ಬಹಳವಾಗಿ ಅವಲಂಬಿಸಿರುತ್ತದೆ. ಕೂಲಂಕಷವಾಗಿ ಪರಿಶೀಲಿಸಿದಲ್ಲಿ ನಮ್ಮ ಭಾರತದೇಶದಲ್ಲಿ ವರ್ಷಂಪ್ರತಿ ಉಪಯೋಗಿಸಲ್ಪಡುತ್ತಿರುವ ಸುಮಾರು ೯೦ ಕೋಟಿ ಗ್ಯಾಲನ್ ಪೆಟ್ರೋಲಿನ ಅರ್ಧ ಭಾಗದಷ್ಟು ಘರ್ಷಣೆಯ ಕಾರಣದಿಂದಾಗಿ ನಷ್ಟವಾಗುತ್ತಿದೆಯೆಂದು ಭಾವಿಸಬಹುದು. ಅಂದರೆ ಈಗಿನ ದರದಲ್ಲಿ ಗ್ಯಾಲನ್ ಒಂದಕ್ಕೆ ೧೫ ರೂಪಾಯಿಗಳಂತೆ ಸುಮಾರು ೩೦೦ ಕೋಟಿ ರೂಪಾಯಿಗಳಷ್ಟು ಹಣವು (ಇದರಲ್ಲಿ ಬಹುಭಾಗ ಅತ್ಯಮೂಲ್ಯವಾದ ವಿಶೇಷ ವಿನಿಮಯದ ರೂಪದಲ್ಲಿ) ಪ್ರತಿವರ್ಷವೂ ನಷ್ಟವಾಗುತ್ತಿದೆಯೆಂಬುದು ಸೋಜಿಗವೆನಿಸಿದರೂ ಸತ್ಯವಾದ ವಿಷಯವೇ ಆಗಿದೆ.

ಈ ಭಾರಿ ನಷ್ಟದ ಜೊತೆಗೆ ಸೇರಿದಂತೆ ಯಂತ್ರೋಪಕರಣಗಳ ಸವೆಯುವಿಕೆ ಪ್ರತಿವರ್ಷವೂ ಉಂಟಾಗುತ್ತಿರುವ ನಷ್ಟವನ್ನು ಕೂಡಿದರೆ ಒಟ್ಟು ನಷ್ಟದ ಮೊತ್ತವು ಊಹಾತೀತವಾಗಿದೆ. ಯಂತ್ರೋಪಕರಣಗಳ ಮುಖ್ಯ ಭಾಗಗಳು ಕೆಲವು ಮಿಲಿಗ್ರಾಮುಗಳಷ್ಟು ಸವೆದರೂ ಉಪಕರಣಗಳು ಪೂರ್ತಿಯಾಗಿ ನಿಷ್ಪ್ರಯೋಜಕವಾಗಿಬಿಡುತ್ತವೆ. ಉದಾಹರಣೆಗೆ ಹೇಳುವುದಾದರೆ ಮೋಟಾರು ಕಾರು ಎಂಜಿನ್ನಿನಲ್ಲಿ ಬಳಸುವ ಕೊಂತದ ಉಂಗುರಗಳ (Piston rings) ಸವೆತವು ಕೇವಲ ಕೆಲವೇ ಮಿಲಿಗ್ರಾಂಗಳಿಗಿಂತ ಜಾಸ್ತಿಯಾದಲ್ಲಿ ಮೋಟಾರು ಕಾರಿನ ಚಲನ ಸಾಮರ್ಥ್ಯಕ್ಕೇ ಧಕ್ಕೆ ಬರುತ್ತದೆ. ಇಂತಹ ಸಂದರ್ಭಗಳಲ್ಲಿ ಅವುಗಳನ್ನು ರಿಪೇರಿ ಮಾಡಲು ಹೆಚ್ಚು ಸಮಯ ಹಿಡಿಯುವುದಲ್ಲದೆ ಹಣವನ್ನೂ ವ್ಯಯಿಸಬೇಕಾಗುತ್ತದೆ.

ನಮ್ಮ ಭಾರತದೇಶದಲ್ಲಿ ಸ್ಕೂಟರ್, ಮೋಟಾರ್ ಸೈಕಲ್, ಕಾರು, ಬಸ್ಸು, ಲಾರಿ, ಟ್ರಾಕ್ಟರ್ ಇತ್ಯಾದಿಗಳನ್ನೊಡಗೂಡಿ ಸುಮಾರು ೫ ಕೋಟಿ ವಾಹನಗಳಿವೆ ಎಂದಿಟ್ಟುಕೊಳ್ಳೋಣ. ಇವುಗಳ ಸರಾಸರಿ ತೂಕ ಸುಮಾರು ೮೦೦ ಕಿಲೋಗ್ರಾಮುಗಳು ಎಂದೂ ಇಟ್ಟುಕೊಳ್ಳೋಣ. ಅಂದರೆ ೪೦೦೦,೦೦೦,೦೦ ಕಿಲೋಗ್ರಾಮ್‌ಗಳಷ್ಟು ಅಮೂಲ್ಯವಾದ ಲೋಹ ಸಂಪತ್ತು ನಮ್ಮ ವಾಹನಗಳಲ್ಲಿದೆಯೆಂದಾಯಿತು. ಈ ಲೋಹ ಸಂಪತ್ತು ನಮ್ಮ ದೇಶದ ಅತಿಮುಖ್ಯವಾದ ಲೋಹಗಳೂ ಮೂಲವಸ್ತುಗಳೂ ಆದ ಕಬ್ಬಿಣ, ಸತುವು, ತಾಮ್ರ, ವೆನೇಡಿಯಂ, ಕ್ರೋಮಿಯಂ ಇತ್ಯಾದಿಗಳಿಂದ ತುಂಬಿರುತ್ತದೆ. ಸಂಯೋಜಿತವಾದ ಲೂಬ್ರಿಕೇಷನ್ನಿನ (organised lubrication) ಪರಿಜ್ಞಾನವಿಲ್ಲದೇ ಇದ್ದಲ್ಲಿ ಇಷ್ಟು ಅತ್ಯಮೂಲ್ಯವಾದ ಲೋಹ ಸಂಪತ್ತು ಇನ್ನು ಕೆಲವೇ ವರ್ಷಗಳಲ್ಲಿ ವ್ಯರ್ಥವಾಗುವುದರಲ್ಲಿ ಸಂದೇಹವೇ ಇಲ್ಲ.

ಇಷ್ಟೇ ಅಲ್ಲದೆ, ನಮ್ಮ ಕಾರ್ಖಾನೆಗಳಲ್ಲಿರುವ ಲಕ್ಷಾಂತರ ಯಂತ್ರ ಸಾಮಗ್ರಿಗಳ ಸವೆತದಿಂದ ಅಪಾರ ಸಮಯ ನಷ್ಟವಾಗುವುದಲ್ಲದೆ ಬಹಳ ದುಬಾರಿ ಹಣದ ವ್ಯಯವೂ ಉಂಟಾಗುತ್ತಿದೆ.

ಸರಿಯಾದ ಲೂಬ್ರಿಕೇಶನ್ ಮಾಡುವುದರಿಂದ ಯಂತ್ರೋಪಕರಣಗಳನ್ನು ಹೆಚ್ಚು ಕಾಲ ಸಮರ್ಥವಾಗಿ ಕೆಲಸ ಮಾಡುವಂತೆ ಮಾಡಲು ಸಾಧ್ಯವಿದೆ. ಹೀಗೆ ಮಾಡುವುದರಿಂದ ಯಂತ್ರೋಪಕರಣಗಳ ದುರಸ್ತಿ ಕೆಲಸಗಳು ಕಡಿಮೆಯಾಗಿ

ಹೆಚ್ಚು ಹಣ ಉಳಿತಾಯವಾಗುತ್ತದೆ.

ಆದುದರಿಂದ, ನಮ್ಮ ದೇಶದ ಅಮೂಲ್ಯವಾದ ಲೋಹ ಸಂಪತ್ತನ್ನು ಉಳಿಸಬಯಸುವವರು, ನಮ್ಮಲ್ಲಿ ಉತ್ಪತ್ತಿಯಾಗುವ ಶಕ್ತಿಯ ಹಾನಿಯನ್ನು ಕಡಿಮೆ ಮಾಡಬಯಸುವವರು ನಮ್ಮ ಕಾರ್ಖಾನೆಗಳ ಉತ್ಪಾದನೆಯನ್ನೂ ಕಾರ್ಯ ಸಾಮರ್ಥ್ಯವನ್ನೂ ಹೆಚ್ಚಿಸಲು ಇಷ್ಟ ಪಡುವವರೆಲ್ಲರೂ, ಘರ್ಷಣೆ-ಸ್ನೇಹಕ ದ್ರವಗಳ ವಿಷಯವನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡಲೇಬೇಕು.

೧೯೬೬ರಲ್ಲಿ ಲಂಡನ್ನಿನಲ್ಲಿ ಸಭೆ ಸೇರಿದ್ದ ಪ್ರಪಂಚದ ಮೆಕಾನಿಕಲ್ ಇಂಜಿನಿಯರುಗಳ ಸಮ್ಮೇಳನದಲ್ಲಿ, ಘರ್ಷಣೆ, ಸ್ನೇಹಕ ದ್ರವ ಮತ್ತು ಸವೆತದ ವೈಜ್ಞಾನಿಕ ಪರಿಶೋಧನೆಗಳ ವಿಜ್ಞಾನವನ್ನು (The science of friction, lubrication and wear)—'ಟ್ರೈಬಾಲಜಿ' (Tribology) ಎಂದು ಕರೆಯಲಾಯಿತು. ಗ್ರೀಕ್ ಭಾಷೆಯಲ್ಲಿ TRIB—ಎಂದರೆ ಉಜ್ಜುವಿಕೆ (to rub) ಎಂದು ಅರ್ಥ. ಈಗ ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗದ ಮುಖ್ಯವಾದ ಒಂದು ಅಂಗವೆಂದರೆ 'ಟ್ರೈಬಾಲಜಿ.'

ಆಧುನಿಕ ಮಾನವ ಬೆಳಿಗ್ಗೆ ಎದ್ದು ಮುಖಕ್ಷೌರ ಮಾಡಿಕೊಂಡು ದಿನವಿಡೀ ಕೆಲಸ ಕಾರ್ಯಗಳನ್ನು ಮಾಡಿ ರಾತ್ರಿ ಹಲ್ಲುಜ್ಜಿ ಮಲಗುವವರೆಗೂ ಟ್ರೈಬಾಲಜಿಯಿಂದ ತಿಳಿದೋ ತಿಳಿಯದೆಯೋ ಉಪಯೋಗ ಪಡೆದಿರುತ್ತಾನೆ. ಟ್ರೈಬಾಲಜಿಯಲ್ಲಿ ಇನ್ನೂ ಮಾಡಬೇಕಾದ ಮತ್ತು ಈಗ ಅನೇಕ ಪ್ರಮುಖ ಸಂಶೋಧನಾಲಯಗಳಲ್ಲಿ ಮಾಡುತ್ತಿರುವ ಸಂಶೋಧನೆಗಳಿಂದ ಜನಜೀವನದ ಆರ್ಥಿಕ ಮತ್ತು ಸಾಮಾಜಿಕ ಮೂಲವಾದ ಅನೇಕ ಸಮಸ್ಯೆಗಳನ್ನು ಬಿಡಿಸಬಹುದು. ಉದಾಹರಣೆಗಾಗಿ:

೧. ಕ್ರೀಡಾಪಟುಗಳು ಉಪಯೋಗಿಸುವ ಪಾದರಕ್ಷೆಗಳನ್ನು ಟ್ರೈಬಾಲಜಿ ಪರಿಶೋಧನೆಯಿಂದ ರೂಪಿಸಿದಲ್ಲಿ ಲಾಂಗ್‌ಜಂಪ್, ಹೈ-ಜಂಪ್, ಫುಟ್‌ಬಾಲ್, ಹಾಕಿ ಆಟಗಳನ್ನು ಆಡುವ ಸಾಮರ್ಥ್ಯವನ್ನು ಹೆಚ್ಚಿಸಬಹುದು. ಕ್ರಿಕೆಟ್ ಬ್ಯಾಟ್, ಹಾಕಿ ಸ್ಟಿಕ್‌ಗಳನ್ನು ಉಪಯುಕ್ತವಾಗಿ ರೂಪಿಸಿ ಈ ಆಟಗಳನ್ನು ಹೆಚ್ಚು ಸಮರ್ಥವಾಗಿ ಆಡಬಹುದು.

೨. ನಾವು ಪ್ರತಿದಿನ ಬಳಸುವ ಟೂತ್‌ಪೇಸ್ಟ್‌ಗಳಲ್ಲಿ ಅನೇಕವು ಸಂಶೋಧನೆಯಿಂದ ಪರಿಷ್ಕೃತವಾಗಿ ತಯಾರಾಗಿರುವುದಿಲ್ಲ. ಇಂತಹ ಟೂತ್‌ಪೇಸ್ಟ್‌ಗಳನ್ನು ಉಪಯೋಗಿಸುವುದರಿಂದ ಹಲ್ಲುಗಳ ಸವೆತ ಜಾಸ್ತಿಯಾಗಿ ದಂತಕ್ಷಯವುಂಟಾಗಿರುವ ನಿದರ್ಶನಗಳು ಬಹಳ ಇವೆ. ಟ್ರೈಬಾಲಜಿಯ ಜ್ಞಾನವನ್ನು ಅವಲಂಬಿಸಿ ಹೀಗೆ ಅನ್ಯಾಯವಾಗಿ ಉಂಟಾಗುವ ದಂತದ ಸವೆತವನ್ನು ತಪ್ಪಿಸುವಂತಹ ಟೂತ್‌ಪೇಸ್ಟ್ ಮತ್ತು ಟೂತ್ ಬ್ರಷ್‌ಗಳನ್ನು ನಿರೂಪಿಸಲು ಸಾಧ್ಯವಾಗುತ್ತದೆ.

೩. ನಾವು ವಾಸಿಸುವ ಮನೆಗಳ ನೆಲವನ್ನು, ನೀರಿನ ಅಣೆಕಟ್ಟುಗಳನ್ನು, ಉಳುವ ನೇಗಿಲನ್ನು, ಎಲ್ಲ ವಸ್ತುಗಳನ್ನೂ ಹೆಚ್ಚು ಉಪಯೋಗವಾಗುವಂತೆ ರೂಪಿಸಲು ಟ್ರೈಬಾಲಜಿಯು ಸಹಾಯ ಮಾಡಬಲ್ಲುದು.

ಈಗಾಗಲೇ ಹಿಂದೆ ತಿಳಿಸಿದಂತೆ ಟ್ರೈಬಾಲಜಿಯ ಜ್ಞಾನದ ಉಪಯುಕ್ತತೆಯು ಮಾನವನ ನಾಗರೀಕತೆಯ ಇತಿಹಾಸದಲ್ಲಿ ಬಹಳ ಹಿಂದೆಯೇ ತಿಳಿದಿತ್ತು ಎಂಬುದು ಈ ಕೆಳಕಂಡ ನಿದರ್ಶನಗಳಿಂದ ಚೆನ್ನಾಗಿ ಸಾಬೀತಾಗುತ್ತದೆ.

ಕೆಲವು ವರ್ಷಗಳ ಹಿಂದೆ ಇಜಿಪ್ಟಿನ ಇತಿಹಾಸ ಪ್ರಸಿದ್ಧವಾದ ಸಮಾಧಿಯೊಂದರಲ್ಲಿ ಅನೇಕ ಶತಮಾನಗಳ ಹಿಂದೆ ತಯಾರಿಸಿದ ಎರಡು ಚಕ್ರಗಳುಳ್ಳ ರಥವೊಂದು ದೊರಕಿತು. ರಥದ ಚಕ್ರ ಮತ್ತು ರಥದ ಸುತ್ತು (axle) ಗಳ ಬಳಿ ಧೂಳನ್ನು ಒರೆಸಿ ಪರಿಶೀಲಿಸಿದಾಗ, ಅನೇಕ ಶತಮಾನಗಳ ಹಿಂದೆ ಉಪಯೋಗಿಸಿದ್ದ ಮೃದು ಚಾಲಕವಿದ್ದುದ್ದು (greasy lubricant) ಕಂಡುಬಂದಿತು. ಈ ಚರಬಿಯನ್ನು ರಥದ ಚಕ್ರ ಮತ್ತು ಅಚ್ಚುಗಳ ನಡುವಣ ಘರ್ಷಣೆಯನ್ನು ಕಡಿಮೆ ಮಾಡುವುದನ್ನು ಅನೇಕ ಶತಮಾನಗಳ ಹಿಂದೆ ಇದ್ದ ಜನರು ತಿಳಿದಿದ್ದರು ಎಂಬುದು ನಮಗೆ ಗೋಚರವಾಗುತ್ತದೆ.

ನಮ್ಮ ಭಾರತ ದೇಶದಲ್ಲಿಯೂ ಟ್ರೈಬಾಲಜಿಯ ಉಪಯೋಗವು ಬಹಳ ಹಿಂದೆಯೇ ತಿಳಿದಿತ್ತು ಎನ್ನುವುದು ಹಂಪೆಯ ಕಲ್ಲಿನ ರಥವನ್ನು ಗಮನಿಸಿದಾಗ ತಿಳಿದು ಬರುತ್ತದೆ. ಈ ರಥದ ಚಕ್ರದ ಸುತ್ತಿನಲ್ಲಿ ಕೊರೆದಿರುವ ಅನೇಕ ರಂಧ್ರಗಳು ಸ್ನೇಹಕ ತೈಲವನ್ನು (oil holes) ತುಂಬಿಸಲು ಆಗಿದ್ದಿರಬೇಕು.

ಪ್ರಾಯಶಃ ರಾಮಾಯಣ, ಮಹಾಭಾರತ ಕಾಲಗಳಲ್ಲಿಯೂ ಟ್ರೈಬಾಲಜಿಯ ವಿಜ್ಞಾನವು ಜನಪ್ರಿಯವಾಗಿದ್ದಿರಬೇಕು. ದಶರಥ ಮಹಾರಾಜನು ಯುದ್ಧ ಕಾಲದಲ್ಲಿ ಪ್ರಯಾಣಿಸುತ್ತಿದ್ದ ರಥದ ಚಕ್ರಗಳಿಗೆ ಸರಿಯಾಗಿ ಎಣ್ಣೆ ಹಚ್ಚಿದ್ದು ಅದರ ಕಡಾಣೆ ಕಳಚಿ ಬರದೆ ಇದ್ದ ಪಕ್ಷದಲ್ಲಿ, ಶ್ರೀಮದ್ರಾಮಾಯಣಕ್ಕೆ ಮುಖ್ಯ ಕಾರಣವಾದ ಎರಡು ವರಗಳನ್ನು ದಶರಥನು ಕೈಕೇಯಿಗೆ ವಾಗ್ದಾನ ಮಾಡಬೇಕಾದ ಪ್ರಮೇಯವೇ ಉಂಟಾಗುತ್ತಿರಲಿಲ್ಲ.

೧೯ನೆಯ ಶತಮಾನದಲ್ಲಿ ಟ್ರೈಬಾಲಜಿಯನ್ನು ಆಧುನಿಕವಾಗಿ, ವೈಜ್ಞಾನಿಕವಾಗಿ ಬೆಳಕಿಗೆ ತಂದವರಲ್ಲಿ ಅತಿ ಮುಖ್ಯರಾದವರು ಯುರೋಪಿನ ಇಂಜನಿಯರ್ ಬೋಛಾಂಪ್ ಟವರ್ಸ್ (Beauchamp Towers) ಮತ್ತು ಆಸ್‌ಬಾರ್ನ್ ರೇನಾಲ್ಡ್ಸ್ (Osborne Reynolds) ಈಗ ಟ್ರೈಬಾಲಜಿ ವಿಷಯವು ಮೆಕಾನಿಕಲ್ ಇಂಜನಿಯರಿಂಗ್ ವಿಭಾಗದ ಸಂಶೋಧನಾ ವಿಷಯಗಳ ಮುಖ್ಯವಾದ ವಿಭಾಗಗಳಲ್ಲಿ ಒಂದಾಗಿದೆ. ಟ್ರೈಬಾಲಜಿಯ ಸಹಾಯದಿಂದ ನಿರೂಪಿಸಿದ ಅನೇಕ ಸಲಕರಣೆಗಳ ಸಂಯೋಜಿತ ಸಹಾಯದಿಂದಲೇ ಆಧುನಿಕ ಮಾನವನು ಚಂದ್ರನ ಮೇಲೆ ಇಳಿಯಲು, ನಡೆಯಲು ಸಾಧ್ಯವಾಯಿತು.

ಈಗ ಪ್ರಪಂಚದ ಎಲ್ಲ ಪ್ರಗತಿಪರ ದೇಶಗಳಲ್ಲಿಯೂ ಟ್ರೈಬಾಲಜಿಯ ಸಂಬಂಧವಾದ ಸಂಶೋಧನೆಗಳು ತೀವ್ರಗತಿಯಿಂದ ಸಾಗುತ್ತಿವೆ ಎಂಬುದು ಸಂತೋಷದ ಸುದ್ದಿ. ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರದಲ್ಲಿ ಟ್ರೈಬಾಲಜಿ ವಿಭಾಗದಲ್ಲಿ ಭಾರತೀಯ ಕೈಗಾರಿಕೆ ಮತ್ತು ಜನಜೀವನಕ್ಕೆ ಉಪಯುಕ್ತವಾದ ಸಂಶೋಧನೆಗಳು ನಡೆಯುತ್ತಾ ಇವೆ. ಈ ಸಂಶೋಧನೆಗಳ ಫಲಿತಾಂಶಗಳ ನೆರವನ್ನು ಈಗಾಗಲೇ ಅನೇಕ ಪ್ರಮುಖ ಕೈಗಾರಿಕೋದ್ಯಮಿಗಳು ಉಪಯೋಗಿಸುತ್ತಿದ್ದಾರೆ. ✿



ಮದುವೆ ಎಂದಮೇಲೆ ಗಡಿಬಿಡಿ ಇದ್ದೇ ಇರುತ್ತದೆ. ಈ ಗಡಿಬಿಡಿಯಲ್ಲಿ ಮರೆವೂ ಸಹಜ. ಇಂತಹ ಮರೆವು ಒಂದು ಸ್ವಾರಸ್ಯಕರವಾದ ಘಟನೆಯಿಂದ ಕೊನೆಗೊಂಡಿತು.

ಮದುವೆಯಲ್ಲಿ ಕಾಶೀಯಾತ್ರೆಯ ಸಂದರ್ಭ. ವರನು ಛತ್ರಿ ಹಿಡಿದು ಕಾಶೀಯಾತ್ರೆ ಮಾಡಬೇಕು. ಇದ್ದಕ್ಕಿದ್ದಂತೆ ಗುಸುಗುಸು. ಏನೆಂದು ವಿಚಾರಿಸಿದರೆ ಛತ್ರಿಯಿಲ್ಲ. ಎಲ್ಲರಿಗೂ ಯೋಚನೆಗಿಟ್ಟುಕೊಂಡಿತು. ವಧುವಿನ ದೊಡ್ಡಪ್ಪ ಒಬ್ಬರನ್ನು ಕರೆದು, "ನೋಡು, ಹೇಗೂ ಮಳೆ ಬರುತ್ತಿದೆ; ಯಾರಾದರೂ ಛತ್ರಿ ಹಿಡಿದುಕೊಂಡು ಹೋಗುತ್ತಿದ್ದರೆ ಕರೆದುಕೊಂಡು ಬಾ.'' ಎಂದರು. ಸರಿ, ಅವರು ಅದೇ ಮಾರ್ಗವಾಗಿ ಹೋಗುತ್ತಿದ್ದ ಒಬ್ಬರನ್ನು ಕರೆತಂದರು. ಆ ಮನುಷ್ಯನನ್ನು ಒಳಗೆ ಕರೆತಂದು ಅವರಿಗೆ ಉಪಾಹಾರವಿತ್ತು, ಆತ ಉಪಾಹಾರ ಮಾಡುವಾಗ ಅವನ ಛತ್ರಿಯ ಸಹಾಯದಿಂದ ಕಾಶೀಯಾತ್ರೆ ಮುಗಿಸಿ ಛತ್ರಿಯನ್ನು ಹಿಂದಿರುಗಿಸಿ ತಾಂಬೂಲ ಕೊಟ್ಟು ಕಳುಹಿಸಿದರು.

— ರಾ. ಗಣಪತಿರಾವ್

# ಸೊಳ್ಳೆ ಕಡಿತಗಳಿಂದ,
# ಖಾತ್ರಿಯಾದ ದ್ವಿವಿಧ ರಕ್ಷಣೆಯನ್ನು
# ಕೇವಲ ಒಡೊಮಸ್
# ನಿಮಗೆ ನೀಡುತ್ತದೆ...

## ನಿಮಗೆ ಸುಖನಿದ್ರೆ ಪ್ರಾಪ್ತವಾಗುವಂತೆ ಮಾಡುತ್ತದೆ

ಒಡೊಮಸ್ ನಿಮ್ಮನ್ನು ರಕ್ಷಿಸುವ ಹಾಗೆ ಬೇರೆ ಯಾವುದೇ ಸೊಳ್ಳೆನಿರೋಧಕವು ರಕ್ಷಿಸಲಾರದು.



ಅದರ ವಾಸನೆ ಸೊಳ್ಳೆಗಳನ್ನು ದೂರಗೊಳಿಸುತ್ತದೆ



ಅದರ ಅಪೂರ್ವ ಘಟಕ ನಿಮ್ಮ ಚರ್ಮಕ್ಕೆ ಸೊಳ್ಳೆಗಳ ವಿರುದ್ಧ ರಕ್ಷಣಾ ಕವಚದಂತಿರುತ್ತದೆ—ರಾತ್ರಿಯಿಡೀ!

ಇಂದು ಭಾರತದಲ್ಲಿ ಒಡೊಮಸ್ ಅತ್ಯಧಿಕ ಮಾರಾಟವಾಗುವ ಸೊಳ್ಳೆನಿರೋಧಕ ಆಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಸೊಳ್ಳೆಗಳು ನಿಮ್ಮನ್ನು ಪೀಡಿಸುವ ಮೊದಲೇ ಅವನ್ನು

## ಒಡೊಮಸ್
ನಿಂದ ಓಡಿಸಿರಿ!






3 ಬಲ್ಸಾರಾ
ಸುಖಮಯ ಜೀವನಕ್ಕೆ
ಆಧುನಿಕ ಸಾಧನಗಳು

CHAITRA-BLS-86 KAN

ಎಂ. ಎಸ್. ಅನಂತರಾಮು

ಕೊನೆಗೂ ವಿಧಿ ನಕ್ಕಿತು!

# ಗಣಿತಜ್ಞ ಎವರಿಸ್ಟ್ ಗ್ಯಾಲೋಯಿ

"ಇಷ್ಟು ಚಿಕ್ಕ ವಯಸ್ಸಿನಲ್ಲಿ ಸಾಯುವುದಕ್ಕೆ ನನಗೇ ಬಹಳ ಧೈರ್ಯ ಬೇಕಾಗಿರುವಾಗ, ನಿನ್ನ ಕಣ್ಣೀರಿನಿಂದ ನನ್ನನ್ನು ಧೃತಿಗೆಡಿಸಬೇಡ." ಸಾಯುವುದಕ್ಕೆ ಕೆಲವು ನಿಮಿಷಗಳ ಮುಂಚೆ ಅಳುತ್ತ ಬಂದ ತಮ್ಮನಿಗೆ ಗ್ಯಾಲೋಯಿ ಹೇಳಿದ ಮಾತಿದು. ಪ್ರಪಂಚದಲ್ಲಿ ಸಾಧಿಸಲು ಬೇಕಾದಷ್ಟು ಮುಂದೆ ಇಟ್ಟುಕೊಂಡು, ಇಪ್ಪತ್ತೊಂದನೇ ವಯಸ್ಸಿನಲ್ಲಿ ಅನಾವಶ್ಯಕ ಮೃತ್ಯುವಿಗೆ ಎರವಾದ ಪ್ರಚಂಡ ಗಣಿತಶಾಸ್ತ್ರಜ್ಞ, ಎವರಿಸ್ಟ್ ಗ್ಯಾಲೋಯಿ.

ವಿಜ್ಞಾನ, ಗಣಿತ ಮತ್ತು ಸಾಹಿತ್ಯ ಈ ವಿಶಿಷ್ಟ ದಿಶೆಗಳಲ್ಲಿ ಹತ್ತೊಂಬತ್ತನೇ ಶತಮಾನದ ಫ್ರಾನ್ಸಿನ ಕೊಡುಗೆ ಅಪಾರ. ಗ್ಯಾಲೋಯಿ ಗಣಿತಶಾಸ್ತ್ರಕ್ಕೆ ಫ್ರಾನ್ಸಿನ ಕೊಡುಗೆ. ಪ್ಯಾರಿಸ್ಸಿನ ಹತ್ತಿರದ ಹಳ್ಳಿ ಬರ್ಗ್-ಲ-ರೀನ್‌ನಲ್ಲಿ ೧೮೧೧ ಅಕ್ಟೋಬರ್ ೨೫ರಂದು ಗ್ಯಾಲೋಯಿಯ ಹುಟ್ಟು. ತಂದೆ ನಿಕೋಲಸ್ ಗೇಬ್ರಿಯಲ್ ಗ್ಯಾಲೋಯಿ, ತಾಯಿ ಅಡಿಲೆಯಿಡ್-ಮೇರಿ ಡಿಮಾಂತ್. ತಂದೆ ಆ ಶತಮಾನದ ಎಲ್ಲಾ ಸುಸಂಸ್ಕೃತಿಗಳ ಲಕ್ಷಣವನ್ನೂ ಹೊಂದಿದ್ದ. ಧೀಮಂತ, ತತ್ತ್ವಜ್ಞಾನಿ. ತಾಯಿ ತರ್ಕಪ್ರಧಾನ ವಿಶ್ಲೇಷಣ ಶಕ್ತಿಯುಳ್ಳ, ಸುಸಂಸ್ಕೃತ ಸ್ತ್ರೀ. ಸುಮಾರು ಹನ್ನೆರಡನೆಯ ವಯಸ್ಸಿನವರೆಗೂ ಗ್ಯಾಲೋಯಿ ಯಾವ ಸ್ಕೂಲಿನ ಮೆಟ್ಟಿಲನ್ನೂ ಹತ್ತಲಿಲ್ಲ, ಯಾವ ಅಧ್ಯಾಪಕನ ಹತ್ತಿರವೂ ಪಾಠ ಕಲಿಯಲಿಲ್ಲ. ತಾಯಿಯೇ ಅವನ ಭಾಗಕ್ಕೆ ಗುರು. ಈ ವರುಷಗಳು ಅವನ ಅಲ್ಪಾಯು ಜೀವನದಲ್ಲಿ ಸುಖಪೂರ್ಣ ಕಾಲ. ಮನೆಯ ಒಳಗೆ ಸುಖ, ಶಾಂತಿ, ಸಂಸ್ಕೃತಿ. ಹೊರಗೆ ಮಾತ್ರ ಹತ್ತೊಂಬತ್ತನೆ ಶತಮಾನದ ಆದಿ ಭಾಗದ ವಾತಾವರಣ-ಬೀಳಬಾರದ ಕನಸಿನಂತಹ ವಿಚಿತ್ರ ಸನ್ನಿವೇಶ, ಫ್ರಾನ್ಸ್‌ನಲ್ಲಿ.

ಗ್ಯಾಲೋಯಿಯ ಕೊನೆಯಿಲ್ಲದ ದುರದೃಷ್ಟದ ಕತೆ ಶುರುವಾದದ್ದು ೧೮೨೩ ರಲ್ಲಿ ಅವನ ಹನ್ನೆರಡನೇ ವಯಸ್ಸಿನಲ್ಲಿ. ಅದು ಅವನು ಮೊದಲ ಬಾರಿಗೆ ಪಾಠಶಾಲೆಗೆ ಸೇರಿದಾಗ. ಆಗಿನ ಕಾಲಕ್ಕೆ ಶಾಲೆಗಳೆಂದರೆ ಸರಳು ಸಂಕೋಲೆಗಳ ಸೆರೆಮನೆ; ಉಪಾಧ್ಯಾಯರುಗಳೆಂದರೆ-ಬಹಳಷ್ಟು ಜಡ-ಮೂರ್ಖತನದ ಪ್ರತಿರೂಪಗಳು. ಶಿಸ್ತಿನ ಹೆಸರಿನಲ್ಲಿ ಹುಡುಗರ ಪ್ರಾಣವನ್ನು ಲೆಕ್ಕಿಸದ ಮಹಾನುಭಾವರು. ಅಲ್ಲೊಬ್ಬರು, ಇಲ್ಲೊಬ್ಬರು ಅಪವಾದಗಳಂತೆ ಮಾನವೀಯ, ಅನುಕಂಪಪೂರ್ಣ ಹೃದಯವಂತ ಉಪಾಧ್ಯಾಯರುಗಳೂ ಇದ್ದಿರಬಹುದು.

## ಪ್ರಾರಂಭದಲ್ಲೇ ದುರ್ದೈವ

ಆ ಕಾಲಕ್ಕೆ ಫ್ರಾನ್ಸಿನ ಶಾಲೆಗಳು ಸಹ ಕ್ರಾಂತಿಯ ಸುಂಟರಗಾಳಿಯ ಹೊಡೆತಕ್ಕೆ ಸಿಕ್ಕಿ ಹೊಯ್ದಾಡುತ್ತಿದ್ದುವು. ಅದೊಂದು ದುರ್ದಿನ. ಗ್ಯಾಲೋಯಿಯ ಶಾಲೆಯಲ್ಲಿ ನಡೆದ ಗದ್ದಲವಲ್ಲಿ ಸಿಟ್ಟಿಗೆದ್ದ ಶಾಲೆಯ ಮುಖ್ಯಸ್ಥ ತನಗೆ ಸಂಶಯ ಬಂದ ಎಲ್ಲಾ ಹುಡುಗರನ್ನೂ ಹೊರಗೆ, ರಸ್ತೆಗೆ ದಬ್ಬಿ ಬಾಗಿಲು ಮುಚ್ಚಿಕೊಂಡ. ದುರದೃಷ್ಟಕ್ಕೆ ಗ್ಯಾಲೋಯಿಯನ್ನು ಹೊರಕ್ಕೆ ತಳ್ಳಲಿಲ್ಲ, ಸಂಶಯಾತೀತನಾಗಿ ಒಳಗೇ ಉಳಿದ. ಹೊರಕ್ಕೆ ದಬ್ಬಿಸಿಕೊಂಡಿದ್ದರೆ, ಜೀವನದ ದುರಂತದ ಹಾದಿಯನ್ನು ತಪ್ಪಿಸಬಹುದಿತ್ತೋ ಏನೋ. ಸ್ವಲ್ಪ ದಿನಗಳಲ್ಲೇ ಶಾಲೆಯ ಒಳಗಿನ ವಾತಾವರಣ, ಅಮಾನುಷ ಕೃತ್ಯಗಳು, ಜನಗಳ ಮೂರ್ಖತನ ಅವನಿಗೆ ಅಸಹ್ಯವೆನಿಸುವಷ್ಟು ಜುಗುಪ್ಸೆ ತಂದವು. ತಾಯಿಯಿಂದ ಬಂದಿದ್ದ ಸೌಹಾರ್ದಪೂರ್ಣ ವಿದ್ಯಾಭ್ಯಾಸ ಅವನಿಗೆ ಬೇಸರ ಬರಿಸುತ್ತಿದ್ದ ವಿಷಯಗಳಲ್ಲೂ ಉತ್ತಮ ಬಹುಮಾನಗಳನ್ನೇನೋ ತರುತ್ತಿದ್ದುವು. ಆದರೆ ಅವನಲ್ಲಿದ್ದ ನ್ಯಾಯಾನ್ಯಾಯ ವಿಶ್ಲೇಷಣಶಕ್ತಿ ಅವನು ಕಾಣುತ್ತಿದ್ದ ವ್ಯವಹಾರಗಳಲ್ಲಿ ಭರಿಸಲಾರದಷ್ಟು ಕೋಪ ತರುತ್ತಿದ್ದುವು. ಅವುಗಳನ್ನೆಲ್ಲಾ ನಿರಾಸಕ್ತ ಮನೋಭಾವದಿಂದ ನೋಡುವ ತಾಳ್ಮೆಯಾಗಲೀ ವಯಸ್ಸಾಗಲೀ ಗ್ಯಾಲೋಯಿಯದಾಗಿರಲಿಲ್ಲ. ಇವುಗಳ ಪರಿಣಾಮ– ಮಾರನೇ ವರ್ಷ ಮೇಧಾವಿ ಗ್ಯಾಲೋಯಿ ಕೆಳ ದರ್ಜೆ ವಿದ್ಯಾರ್ಥಿಯಾಗಿ ತನ್ನ ಕ್ಲಾಸಿನಿಂದ ಹಿಂದೂಡಲ್ಪಟ್ಟ. ಈಗ ಶಾಲೆ ಅವನಿಗೆ ಯಾತನೆಯ ಅನುಭವ ತರುತ್ತಿತ್ತು. ಬೇಕಿಲ್ಲದ ವಿಷಯಗಳಲ್ಲಿ ಓದು, ವಿಚಿತ್ರ ಮನೋಭಾವವುಳ್ಳ ಅಧ್ಯಾಪಕರು, ಇವರುಗಳ ಮಧ್ಯೆ ಹೇಗೋ ನಡೆಯುತ್ತಿತ್ತು ಅವನ ವಿದ್ಯಾಭ್ಯಾಸ. ಈ ಅಸಹ್ಯಕರ ವಾತಾವರಣವಲ್ಲಿ ಗ್ಯಾಲೋಯಿಯಲ್ಲಿ ಆಶಾಮನೋಭಾವ ಮೂಡಿಸಿದುದು ಒಂದು ಪುಸ್ತಕ–ಗಣಿತಶಾಸ್ತ್ರಜ್ಞ ಲೆಜಾಂಡರಿನ 'ರೇಖಾಗಣಿತ'. ಮೇಧಾವಿಯೊಬ್ಬನಿಗೆ ಸುಮಾರು ಎರಡರಿಂದ ಮೂರು ವರ್ಷಗಳಲ್ಲಿ ಅಭ್ಯಸಿಸಿಕೊಳ್ಳಲು ಸಾಧ್ಯವಾಗುವಷ್ಟು ಗಣಿತ ತುಂಬಿದ ಆ ಪುಸ್ತಕವನ್ನು ಗ್ಯಾಲೋಯಿ ಒಂದೇ ಒಂದು ಓದಿನಲ್ಲಿ ಸಂಪೂರ್ಣವಾಗಿ ಅರಗಿಸಿಕೊಂಡ. ಆ ಪುಸ್ತಕ ಅವನಿಗೆ ಗಣಿತ ಶಾಸ್ತ್ರಪ್ರಪಂಚದ ಬಾಗಿಲನ್ನು ತೆರೆಯಿತು; ಸುಪ್ತ ಮೇಧೆಯ ಪ್ರಚಾರಕ್ಕೆ ಕಾರಣವಾಯಿತು. ಗ್ಯಾಲೋಯಿಗೆ ಶಾಸ್ತ್ರಪ್ರವೇಶವಾದದ್ದೇ ತಡ. ಅವನು ಗಣಿತಶಾಸ್ತ್ರದ ಮುಖ್ಯ ಭಾಗಗಳಾದ Theory of Analytical Functions, Calculus of Functions, Numerical Solutions to Equations ಗಳನ್ನೂ ಮಾನಸಿಕ ದಾಹದಿಂದ ಬಳಲುತ್ತಿದ್ದವನಂತೆ ನುಂಗತೊಡಗಿದ. ಕೇವಲ ಗಣಿತಶಾಸ್ತ್ರಜ್ಞರಿಗಾಗಿ ಬರೆದ ಅಬೆಲ್ ಮತ್ತು ಲೆಜಾಂಡರ್ ಇವರುಗಳ ಮಹತ್ವಪೂರ್ಣ ಸಂಶೋಧನೆಗಳೂ ಇವನಿಗೆ ಸುಲಭವಾಗಿ ಕಂಡವು. ಪಾಪ, ಕ್ಲಾಸಿನಲ್ಲಿ, ಉಪಾಧ್ಯಾಯರ ದೃಷ್ಟಿಯಲ್ಲಿ ಗಣಿತಕ್ಕೆ 'ಅತಿ ಸಾಮಾನ್ಯ' ಷರಾ ಬೀಳುತ್ತಿತ್ತು. ಗಣಿತಶಾಸ್ತ್ರದ ಜಟಿಲತಮ ಪ್ರಶ್ನೆಗಳನ್ನೂ ಕೇವಲ ಮಾನಸಿಕವಾಗಿ ಬಿಡಿಸಿ ಫಲಿತಾಂಶಗಳನ್ನು ಬರೆಯುತ್ತಿದ್ದುದು ಗ್ಯಾಲೋಯಿಯ ಪಾಲಿಗೆ ಮಹಾನ್ ಶಕ್ತಿ ಆಗಿದ್ದರೆ, ಅವನ ಉಪಾಧ್ಯಾಯರುಗಳಿಗೆ ಅದು ಅವನ ದೌರ್ಬಲ್ಯವಾಗಿತ್ತು. ಹಂತ ಹಂತವಾಗಿ ಸಮಸ್ಯೆಗಳನ್ನು ಬಿಡಿಸಿ ಬರೆದು ತೋರಿಸಬೇಕೆಂದು ಉಪಾಧ್ಯಾಯರ ಅಪೇಕ್ಷೆ.

ಆಗ ಗ್ಯಾಲೋಯಿಗೆ ಹದಿನಾರು ವರ್ಷ- ಅವನ ಅದ್ಭುತ ಶಕ್ತಿಯನ್ನು ಕಂಡ ಗುರು, ಗಣಿತಶಾಸ್ತ್ರಜ್ಞ, ವರ್ನಿಯರ್ ಹೇಗಾದರೂ ಮಾಡಿ ಗ್ಯಾಲೋಯಿಯನ್ನು ಈಕೋಲ್ ಪಾಲಿಟೆಕ್ನಿಕ್‌ನಲ್ಲಿ ಸೇರಿಸಬೇಕೆಂದು ಪ್ರಯತ್ನಿಸಿದ. ಆ ಸಂಸ್ಥೆ ಆಗಿನ ಕಾಲದ ಅಗ್ರಮಾನ್ಯ ಗಣಿತಶಾಸ್ತ್ರಜ್ಞರ, ಇಂಜಿನಿಯರುಗಳ ತವರೆನಿಸಿತ್ತು. ಅಲ್ಲಿಯಾದರೂ ಗ್ಯಾಲೋಯಿಯ ಶಕ್ತಿಗೆ ಮನ್ನಣೆ ದೊರೆತು, ಅವನ ಪ್ರಯತ್ನ ಫಲಪ್ರದವಾಗಬಹುದು; ಇನ್ನೆಲ್ಲೂ ಸಿಕ್ಕದ ಸ್ವಾತಂತ್ರ್ಯ ಮತ್ತು ಸೌಲಭ್ಯಗಳು ಅಲ್ಲಿ ಸಿಗಬಹುದು ಎಂಬುದು ವರ್ನಿಯರನ ಆಸೆಯಾಗಿತ್ತು. ಆದರೆ ಗ್ಯಾಲೋಯಿಯ ಅ[illegible]

ಮೂರ್ಖರ ಜೊತೆ ಹೊಡೆದಾಡುವುದಷ್ಟೆ ಆಗಿತ್ತು. ಈಕೋಲ್ ಪಾಲಿಟೆಕ್ನಿಕ್‌ನ ಹುಂಬ ಆಡಂಬರಗಾರ ಅಧ್ಯಾಪಕ ವರ್ಗ ಅವನ ಅಪ್ರತಿಮ ಶಕ್ತಿಯನ್ನು ಅಳೆಯಲು ಅಸಮರ್ಪಕವಾಗಿತ್ತು. ಪರಿಣಾಮ, ಗ್ಯಾಲೋಯಿ ಪರೀಕ್ಷೆಯಲ್ಲಿ ಅನುತ್ತೀರ್ಣ.

## ಪಾಲಿಟೆಕ್ನಿಕ್ ಅನುಭವ

೧೮೨೯ರಲ್ಲಿ, ಗ್ಯಾಲೋಯಿಗೆ ಆಗ ಹದಿನೇಳು ವರುಷ, ಅವನು ತನ್ನ ಮೊದಲ ಸಂಶೋಧನ ಲೇಖನವನ್ನು ಪ್ರಕಟಿಸಿದ. ಇದು ಅವನ ಮೇಧಾಶಕ್ತಿಯನ್ನು ಅಳೆಯಲು ಉತ್ತಮ ಸಾಧನವಲ್ಲದಿದ್ದರೂ, ಗಣಿತಶಾಸ್ತ್ರಜ್ಞರುಗಳಿಗೆ ಅವನ ಪರಿಚಯ ಮಾಡಿಕೊಟ್ಟಿತು. ಅದೃಷ್ಟಹೀನ ಗ್ಯಾಲೋಯಿಯ ಜೀವನದಲ್ಲಿ ಆಗೊಮ್ಮೆ ಈಗೊಮ್ಮೆ ಸುಖದ ದಿನಗಳು. ಅವನು ಓದಿದ ಶಾಲೆಯಲ್ಲಿ ಸ್ವತಃ ಉತ್ತಮ ಗಣಿತಶಾಸ್ತ್ರಜ್ಞನಾಗಿದ್ದ, ಮಾನವೀಯ ಗುಣದ ಎಮಿಲ್ ರಿಚರ್ಡ್ ಎಂಬ ಅಧ್ಯಾಪಕನೊಬ್ಬ ಇದ್ದ. ತನ್ನ ಹೆಸರಿಗಾಗಿ, ಅಭ್ಯುದಯಕ್ಕಾಗಿ ಏನನ್ನೂ ಮಾಡದ ವ್ಯಕ್ತಿ ರಿಚರ್ಡ್, ಗ್ಯಾಲೋಯಿಯ ಪ್ರತಿಭೆಯನ್ನು ಗುರುತಿಸಿದ. ಅವನ ಸ್ಥಿತಿಯನ್ನು ಉತ್ತಮಪಡಿಸಲು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿದ. ಗುಣಗ್ರಾಹಿ ರಿಚರ್ಡನಿಗೆ ತನ್ನ ಕೈಯಲ್ಲಿರುವುದು ಅನರ್ಘ್ಯ ರತ್ನ ಎಂಬುದು ಖಚಿತವಾಗಿತ್ತು.

ಹನ್ನೆರಡರ ಹೊತ್ತಿಗೆ ಹದಗೆಟ್ಟ ಸ್ಕೂಲಿನ ವಾತಾವರಣದ ಕಹಿ ಅನುಭವ ಪಡೆದಿದ್ದ ಗ್ಯಾಲೋಯಿಗೆ ಈಗ ಆ ಶಾಸ್ತ್ರವಿಭಾಗದ ದಿಗ್ದಂತಿಗಳ, ಅಕಾಡಮಿಗಳ ಅಸಹ್ಯ ಅನುಭವ ಕಾದಿತ್ತು. ಗ್ಯಾಲೋಯಿ ತನ್ನ ಅಲ್ಲಿನವರೆಗಿನ ಸಂಶೋಧನಗಳನ್ನು ಫ್ರಾನ್ಸಿನ ಅಕಾಡಮಿಯ ಮುಂದೆ ಇಡಲು ಪ್ರಯತ್ನಿಸಿದ. ಆಗಿನ ಕಾಲಕ್ಕೆ ಆಗಸ್ಟಿನ್ ಲೂಯಿ ಕಾಷಿ ಗಣಿತಶಾಸ್ತ್ರದ ಮೂರ್ತಸ್ವರೂಪ. ಆತನ ಗೌರವ, ಪ್ರತಿಷ್ಠೆಗಳು ಬಹಳ. ಆತ ಅತಿ ಮೇಧಾವಿ, ಆದರೆ ವಿಚಿತ್ರ ಮನುಷ್ಯ. ಗ್ಯಾಲೋಯಿ ತನ್ನ ಸಂಶೋಧನಗಳನ್ನು ಅಕಾಡಮಿಯ ಮುಂದೆ ಇಡಲು ಕಾಷಿಯನ್ನು ಕೇಳಿಕೊಂಡು ಆ ಲೇಖನಗಳನ್ನು ಅವನಿಗೆ ಒಪ್ಪಿಸಿದ. ಕಾಷಿ ಅದನ್ನು ಯಾವುದೋ ಮೂಲೆಯಲ್ಲಿ ಇಟ್ಟು ಮರೆತ. ಗಣಿತಶಾಸ್ತ್ರದ ಎರಡು ಬಲು ದೊಡ್ಡ ದುರಂತಗಳಲ್ಲಿ ಈ ಮಹಾ ಮೇಧಾವಿಯ ಪಾತ್ರ ಹಿರಿದು. ಮೊದಲನೆಯದು ನೀಲ್ಸ್ ಹೆನ್ರಿಕ್ ಅಬೆಲ್‌ನ ಸಂಶೋಧನೆಗಳ ಬಗೆಗೆ ತಿರಸ್ಕಾರದಿಂದ ವರ್ತಿಸಿದುದು; ಎರಡನೆಯದು ಗ್ಯಾಲೋಯಿಯ ಸಂಶೋಧನ ಲೇಖನವನ್ನು ಹಾಳು ಮಾಡಿದುದು.

ಗ್ಯಾಲೋಯಿಯಲ್ಲಿದ್ದ ತಾಳ್ಮೆ, ಅದಮ್ಯ ಆತ್ಮವಿಶ್ವಾಸ ಅವನನ್ನು ಪಾಲಿಟೆಕ್ನಿಕ್ ಪರೀಕ್ಷೆಗೆ ಕುಳಿತುಕೊಳ್ಳಲು ಮತ್ತೊಮ್ಮೆ ಪ್ರೇರೇಪಿಸಿತು. ಅವನು ಉಪಯೋಗಿಸುವ ಸೀಸದ ಕಡ್ಡಿಗಳನ್ನು ಮೊನಚು ಮಾಡುವ ಯೋಗ್ಯತೆಯೂ ಇಲ್ಲದ ಮಹಾನುಭಾವರು ಅವನ ಪ್ರತಿಭೆಯ ಪರೀಕ್ಷಕರಾಗಿ ಕುಳಿತರು. ಆದದ್ದೇನು? ಗ್ಯಾಲೋಯಿ ಪ್ರವೇಶಕ್ಕೆ ಪುನಃ ಅನರ್ಹನಾದ. ಅದು ಅವನ ಕಟ್ಟಕಡೆಯ ಅವಕಾಶ, ಅದನ್ನು ಸಹ ಕಳೆದುಕೊಂಡ. ಸನ್ನಿವೇಶ ಹೀಗೂ ಇತ್ತು: ಪರೀಕ್ಷಕರ ಗುಂಪಿನಲ್ಲಿ ಒಬ್ಬ ಮೂರ್ಖ ತನ್ನ ಗಣಿತದ ಪ್ರಶ್ನೆಯಲ್ಲಿ ಗ್ಯಾಲೋಯಿಯನ್ನು ಪೀಡಿಸತೊಡಗಿದ. ಪಾಲಿಟೆಕ್ನಿಕ್‌ನಲ್ಲಿ ಹೇಗಾದರೂ ಮಾಡಿ ಅವಕಾಶ ಪಡೆಯಬೇಕೆಂಬ ಹಟದಿಂದ ಬಂದಿದ್ದ ಗ್ಯಾಲೋಯಿ, ಪ್ರಯತ್ನಪೂರ್ವಕವಾಗಿ ತಾಳ್ಮೆಗೆಡದೆ ವರ್ತಿಸುತ್ತಿದ್ದ. ಕಡೆಗೆ ಆ ಮೂರ್ಖನು ಪೀಡಿಸುವುದು ಅತಿಯಾದಾಗ ರೊಚ್ಚಿಗೆದ್ದು ಕೈಯಲ್ಲಿದ್ದ ಡಸ್ಟರನ್ನು ಅವನ ಮುಖಕ್ಕೆ ಬಿಸಾಡಿದ. ಗ್ಯಾಲೋಯಿಯ ದುರದೃಷ್ಟಕ್ಕೆ ಅದು ಅವನ ಮುಖಕ್ಕೆ ಬಡಿಯಿತು, ಪಾಲಿಟೆಕ್ನಿಕ್‌ನಲ್ಲಿ ಪ್ರವೇಶ ಶಾಶ್ವತವಾಗಿ ತಪ್ಪಿಹೋಯಿತು.

ಕ್ರಾಂತಿಯ ಹೊಗೆ ಕಾರುತ್ತಿದ್ದ ರಾಷ್ಟ್ರ ಫ್ರಾನ್ಸ್. ಅದರಲ್ಲಿ ಬೆಂದ ಮನೆಗೆ ಹಿರಿದಷ್ಟೆ ಲಾಭ ಎನ್ನುವ ಗೋಸುಂಬೆಗಳ ಹಾವಳಿ, ಗ್ಯಾಲೋಯಿ ಜೀವನದಲ್ಲಿ ಒಂದು ದೊಡ್ಡ ಆಸರೆಯಾಗಿದ್ದ ಸುಸಂಸ್ಕೃತ ತಂದೆಯನ್ನೂ ಕಳೆದುಕೊಂಡ. ಗ್ಯಾಲೋಯಿ ...

ನೀದ ಕೆಲವೇ ಗಜಗಳ ದೂರದಲ್ಲಿ ತಂದೆ ಆತ್ಮಹತ್ಯೆ ಮಾಡಿಕೊಂಡ. ಕಾರಣ-ಆತನ ಊರಿಗೆ ಹೊಸದಾಗಿ ಬಂದಿದ್ದ ಪಾದರಿಯೊಬ್ಬನ ಅಮಾನುಷ, ಹೇಯ ನಡವಳಿಕೆ.

ಬೇರೇನೂ ಆಸರೆ ಇಲ್ಲದ ಗ್ಯಾಲೋಯಿಗೆ ಪ್ರಯತ್ನಪಡಲು ಉಳಿದದ್ದು ಒಂದೇ ದಾರಿ ಅಧ್ಯಾಪಕವೃತ್ತಿ. ಬೇರೆ ಗತಿ ಕಾಣದೆ ಅದಕ್ಕೆ ಪ್ರಯತ್ನಪಡಲು ಪರೀಕ್ಷೆಗೆ ಕುಳಿತ ಪರೀಕ್ಷಕನಿಗೆ ಗ್ಯಾಲೋಯಿ ಹೇಳಿದುದೆಲ್ಲಾ-ಅದರಲ್ಲೂ ಗಣಿತಕ್ಕೆ ಸಂಬಂಧಿಸಿದಂತೆ-ಅತಿ ವಿಚಿತ್ರ ಎನಿಸಿತು. ಸಾಹಿತ್ಯದಲ್ಲಿ ಶುದ್ಧ ಅಪರಿಚಿತ. ಪರೀಕ್ಷಕನಿಗೆ ಗ್ಯಾಲೋಯಿಯ ಮಾನಸಿಕ ಸ್ಥಿಮಿತದ ಬಗೆಗೇ ಅನುಮಾನ ಬಂದಿರಬಹುದು.

ಹತ್ತೊಂಬತ್ತು ವರ್ಷದ ಗ್ಯಾಲೋಯಿ ಏನು ಮಾಡಲೂ ತೋಚದೆ, ಗಣಿತಶಾಸ್ತ್ರದ ಅಭ್ಯಾಸಕ್ಕೆಂದು ಯೂನಿವರ್ಸಿಟಿ ಸೇರಿದ. ಅಲ್ಲೂ ಅದೇ ಸೋಂಬಾನೆ. ತನ್ನ ಸಂಶೋಧನಗಳ ಶಕ್ತಿಯನ್ನೂ ಅಳೆಯಲಾರದಂಥವರ ಒಡ-ನಾಟ. ಆದರೆ ಆ ಸಮಯದಲ್ಲಿ ತನ್ನ ಮುಖ್ಯ ಸಂಶೋಧನಗಳ ಲೇಖನವೊಂದನ್ನು ತಯಾರಿಸಿದ. ಅದನ್ನು ಆ ವರ್ಷದ ಗಣಿತ ಶಾಸ್ತ್ರದಲ್ಲಿ ಗ್ರ್ಯಾಂಡ್ ಪ್ರೈಜ್ ಸ್ಪರ್ಧೆಗೆಂದು ವಿಜ್ಞಾನ ಅಕಾಡಮಿಗೆ ಕಳುಹಿಸಿದ. ಆ ಸಂಶೋಧನಗಳು ಅಂಥ ಬಹುಮಾನ ಪಡೆಯಲು ಯೋಗ್ಯವಾದ ಸಂಶೋಧನೆಗಳಿಗಿಂತ ಸಾವಿರ ಪಾಲು ಉತ್ತಮವಾಗಿದ್ದುವು. ಅವನ ದುರದೃಷ್ಟ ಅವನನ್ನು ಅಲ್ಲೂ ಕಾಡಿತ್ತು. ಅಕಾದಮಿಯ ಕಾರ್ಯದರ್ಶಿ ಅವಗಾಹನೆಗಾಗಿ ಆ ಲೇಖನವನ್ನು ಮನೆಗೆ ತೆಗೆದುಕೊಂಡು ಹೋದ. ಅವನು ಸತ್ತ. ಗ್ಯಾಲೋಯಿಯ ಲೇಖನಗಳಿಗಾಗಿ ನಂತರ ಹುಡುಕಿಸಿದಾಗ ಅವು ಸಿಗಲೇ ಇಲ್ಲ. ಅವಿರತ-ವಾಗಿ ಎದುರಿಸಿದ್ದ ಆಘಾತಗಳನ್ನು ತಡೆಯ-ಲಾರದ ಗ್ಯಾಲೋಯಿ ತನ್ನ ಪ್ರತಿಭೆಯನ್ನು ಬೆಳೆಸಲು ಪ್ರಯತ್ನಪಟ್ಟು, ಕ್ರಾಂತಿಯ ಸುಳಿ ಬೆಂಕಿಯಲ್ಲಿ ಧುಮುಕಿದ. ಅತ್ಯುನ್ನತ ಮಟ್ಟದ ಪ್ರತಿಭಾಶಾಲಿ ಅತಿ ಸಾಮಾನ್ಯರ ಗುಂಪಿನಲ್ಲಿ ಬೆರೆತು ಒಂದಾಗುವ ಪ್ರಯತ್ನಪಿರಬಹುದು, ಅವನದು. ಅವನನು ಓದುತ್ತಿದ್ದ ಕಾಲೇಜಿನಿಂದ ಹೊರಗೆ ಹಾಕಿದರು.

### ಹಣ ಬೇಕಿದ್ದರೆ.... ಸಿದ್ಧ

ಹೊಟ್ಟೆ ಹೊರೆಯಲು ದಾರಿಗಾಣದ ಗ್ಯಾಲೋಯಿ Advanced Algebraದ ಒಂದು ಸಣ್ಣ ಶಾಲೆಯನ್ನು ತೆಗೆದು ಪಾಠ ಹೇಳಲು ಪ್ರಯತ್ನಿಸಿದ. ಪಾಠಮಾಡಲು ಆರಿಸಿ-ಕೊಂಡ ವಿಷಯಗಳು ಅವನ ಸಂಶೋಧನೆಯ ಫಲಸ್ವರೂಪಗಳು. -Theory of Imagineries (ಈಗ ಅವು ಗ್ಯಾಲೋಯಿ ಇಮ್ಯಾಜನರೀಸ್ ಎಂದೇ ಪ್ರಸಿದ್ಧವಾಗಿವೆ), Theory of Numbers, Elliptic Functions.

ಬೆನ್ನು ಹತ್ತಿದ ಗಣಿತಶಾಸ್ತ್ರದ ಭೂತ ಅವ-ನನ್ನು ಪ್ರೇರೇಪಿಸಿದಾಗ ಪುನಃ ಪುನಃ ತನ್ನ ಸಂಶೋಧನಗಳನ್ನು ಬೆಳಕಿಗೆ ತರಲು ಪ್ರಯತ್ನ ಪಡುತ್ತಿದ್ದ. ಮತ್ತೊಮ್ಮೆ ತನ್ನ ಸಂಶೋಧನಗಳ ಲೇಖನವೊಂದನ್ನು ತಯಾರಿಸಿ ವಿಜ್ಞಾನ ಅಕಾದಮಿಯ ಮುಂದಿಟ್ಟ. ಈ ಸಾರಿ ಅವನ ಸಂಶೋಧನದ ಬಗೆಗೆ ತೀರ್ಪು ಕೊಡಲು ಭೌತ-ಗಣಿತಶಾಸ್ತ್ರದಲ್ಲಿ ಪ್ರಮುಖನಾಗಿದ್ದ ಪಾಯಿ-ಸಾನ್ ನಿಯಮಿತನಾಗಿದ್ದ. ಆತನು ಕೆಳ ಮಟ್ಟದ ಗಣಿತಶಾಸ್ತ್ರಜ್ಞನೇನೂ ಆಗಿರಲಿಲ್ಲ. ಆದರೆ ಗ್ಯಾಲೋಯಿಯ ದುರ್ವಿಧಿ ಬಿಡಬೇಕಲ್ಲ. ಸಂಶೋಧನಗಳನ್ನು ಅವಲೋಕಿಸಿದ ಪಾಯಿ-ಸಾನ್, ಇವು ಅರ್ಥವಾಗುವಂಥವುಗಳಲ್ಲ ಎಂದು ಟಿಪ್ಪಣಿ ಬರೆದ. ವಿಧಿ, ಪ್ರಪಂಚ, ಸಮಾಜ ಎಲ್ಲವೂ ಪ್ರತಿಕೂಲವಾಗಿರುವಂತೆ ತೋರಿದಾಗ ಏನು ಮಾಡಲೂ ತೋರದೆ, "ಕ್ರಾಂತಿಯ ಕಾಲದಲ್ಲಿ ಜನಗಳ ಮನಸ್ಸನ್ನು ಹುರಿದುಂಬಿಸಲು ಒಂದು ಹೆಣದ ಅವಶ್ಯಕತೆ ಉಂಟಾದ ಪಕ್ಷದಲ್ಲಿ, ಅದನ್ನು ನಾನು ದಾನ ಮಾಡಲು ಸಿದ್ಧ," ಎಂದು ಬರೆದ. ಇದು ಅವನ ನಿರಾಸೆಯ ಪರಮಾವಧಿ ಇರಬಹುದು.

ಎವರಿಸ್ಟ್ ಗ್ಯಾಲೋಯಿ 'ಅಪಾಯಕಾರಿ' ಕ್ರಾಂತಿಕಾರಿಯಾದ. ೧೮೩೧ ಮೇಯಿಂದ ಜುಲೈ ವರೆಗಿನ ಮೂರು ತಿಂಗಳುಗಳಲ್ಲಿ ಎರಡು ಬಾರಿ ಜೈಲಿನ ಒಳಗೆ ದೂಡಲ್ಪಟ್ಟ. ಕೈಯಲ್ಲಿ ಹರಿತ ಚಾಕು ಹಿಡಿದ ತನ ಮನೋಭಾವವನ್ನು

ವ್ಯಕ್ತಪಡಿಸಿದ್ದ ಹುಡುಗ ಗ್ಯಾಲೋಯಿ ಮೊದಲನೇ ಬಾರಿ ನ್ಯಾಯಾಧಿಕಾರಿಗಳ ಕರುಣೆಯಿಂದಾಗಿ ಬಿಡುಗಡೆ ಹೊಂದಿದ. ಆದರೆ ಆ ಸ್ವಾತಂತ್ರ್ಯ ಅವನಿಗೆ ಬಹಳ ದಿನ ಉಳಿಯಲಿಲ್ಲ. ಅವನು ಪುನಃ ಬಂಧಿತನಾದ. ಸಾವಿನ ಅಂಜಿಕೆ ದೂರವಾಗಿದ್ದ ಗ್ಯಾಲೋಯಿಗೆ ಜೀವ ತೃಣವಾಗಿತ್ತು. ಆದರೆ ಅವನು ದಡ್ಡನಲ್ಲ, ಪೋಲಿಸ್ ಅಧಿಕಾರಿಗಳಿಗೆ ನ್ಯಾಯ ರೀತಿಯಲ್ಲಿ ಬಂಧಿಸಲು ಸಾಧ್ಯವಾಗದ ರೀತಿಯಲ್ಲಿ ನಡೆಯುತ್ತಿದ್ದ.

ಎಂತಹ ಪ್ರತಿಭೆ, ಯಾವ ಮಟ್ಟದ ಕೆಲಸಕ್ಕೆ ಉಪಯೋಗವಾಗುತ್ತಿತ್ತು! ಕೊನೆಗೆ, ಅವ್ಯಾಹತವಾಗಿ ಪ್ರಯತ್ನಿಸುತ್ತಿದ್ದ ಪೋಲಿಸ್ ಅಧಿಕಾರಿಗಳಿಗೆ ಅವನನ್ನು ಬಂಧಿಸಲು ಒಂದು ಕುಂಟು ನೆಪ ಸಿಕ್ಕಿತು. ಗ್ಯಾಲೋಯಿ ತನ್ನ ಹಳೆಯ, ಸೈನಿಕ ಸಮವಸ್ತ್ರವನ್ನು ಧರಿಸಿ ಓಡಾಡುತ್ತಿದ್ದನೆಂಬ ಆಪಾದನೆ ಹೊರಿಸಿ ಬಂಧಿಸಿದರು. ಸತತ ಪ್ರಯತ್ನದ ಫಲವಾಗಿ ಬಂಧಿಸಿದ ಗ್ಯಾಲೋಯಿಗೆ ಸುಳ್ಳು ಆರೋಪಣೆಯ ಮೇಲೆ ಆರು ತಿಂಗಳ ಶಿಕ್ಷೆ ವಿಧಿಸಲಾಯಿತು. ಶಿಕ್ಷೆಗೆ ಗುರಿಯಾದ ಹತ್ತೊಂಬತ್ತರ ಗ್ಯಾಲೋಯಿ ಎಪ್ಪತ್ತರ ಮುದುಕನಂತೆ ಕಾಣುತ್ತಿದ್ದ. ಇದು ಅವನ ತಂಗಿ ಹೇಳಿದ ಮಾತು.

## ಬೆಂಬಿಡದ ವಿಧಿ

ಜೈಲು ವಾಸವನ್ನು ವ್ಯರ್ಥ ಮಾಡಬಾರದೆಂಬ ಉದ್ದೇಶದಿಂದ ಗ್ಯಾಲೋಯಿ ಗಣಿತ ಶಾಸ್ತ್ರದ ಅಭ್ಯಾಸಕ್ಕೆ ತೊಡಗಿದ. ಆದರೆ ಅವನ ಜೊತೆಗೆ ಇದ್ದ 'ರಾಷ್ಟ್ರಪ್ರೇಮಿ'ಗಳು ಹೆಂಡದ ಅಮಲಿನಲ್ಲಿ ಗ್ಯಾಲೋಯಿಯನ್ನು ಹೀಯಾಳಿಸ ತೊಡಗಿದರು. ಹೆಣ್ಣು ಮತ್ತು ಹೆಂಡ ಎರಡರ ಉಪಯೋಗವನ್ನೂ ಅರಿಯದವನಿಂದ ಯಾವ ರಾಷ್ಟ್ರಸೇವೆಯೂ ಸಾಧ್ಯವಿಲ್ಲ ಎನ್ನುವ ಭಾವನೆ ಅವರಿಗೆ ಇದ್ದಿರಬೇಕು. ಫ್ರಾನ್ಸಿನ ರಾಜನನ್ನೇ ಧಿಕ್ಕರಿಸಿ ಕ್ರಾಂತಿಕಾರಿಯಾದ ವ್ಯಕ್ತಿ ಕುಡಿತದ ಅಮಲನ್ನು ತಿಳಿಯದಿದ್ದ ಕಾರಣ ಕ್ರಾಂತಿಕಾರಿಯಾಗಲು ಅನರ್ಹ. ಇದು ಅವನ ಜೈಲುಸಂಗಾತಿಗಳ ಅಪಾದನೆ. ಈ ನಸಾನ್ಯ ಕ್ರಾಂತಿಕಾರಿಗಳ ಅವಹೇಳನದಿಂದ ಪಾರಾಗಲು, ಅವನ ಅದೃಷ್ಟಕ್ಕೆ ಅವನಿಗೆ ಕಾಲರಾ ಸೋಂಕು ತಗುಲಿತು. ಅಪಾಯಕಾರಿ ಕ್ರಾಂತಿಕಾರಿ ಗ್ಯಾಲೋಯಿ ಬೇರೊಂದು ಕಡೆಯ ಆಸ್ಪತ್ರೆಗೆ ವರ್ಗಾಯಿಸಲ್ಪಟ್ಟ. ಅಲ್ಲಿ ನಿಬಂಧನೆಗಳು ಸ್ವಲ್ಪ ಸಡಿಲವಾಗಿ, ಅವನಿಗೆ ಹೊರಗೆ ಓಡಾಡಿ ಬರಲು ಅವಕಾಶ ಸಿಗುತ್ತಿತ್ತು. ಇಂಥ ಒಂದು ಅವಕಾಶದಲ್ಲಿ, ರಸ್ತೆಯಲ್ಲಿ ಹೋಗುತ್ತಾ ಹಾದಿಯ ಹೆಣ್ಣೊಂದರ ಬಲೆಗೆ ಬಿದ್ದ. ಅವನ ಜೀವನದಲ್ಲಿ ಕಾಮ, ಪ್ರೇಮ ಎರಡಕ್ಕೂ ಬಂದದ್ದು ಒಂದೇ ಒಂದು ಅವಕಾಶ, ಅದೂ ಆ ಹೆಣ್ಣಿನಿಂದ. ಆದರೆ ಅಲ್ಲಿಂದ ಹೊರಗೆ ಬಂದ ಗ್ಯಾಲೋಯಿಗೆ ನಡೆದುದೆಲ್ಲದರ ಬಗೆಗೆ, ತನ್ನ ಬಗೆಗೇ ಅತ್ಯಂತ ಅಸಹ್ಯವೆನ್ನಿಸಿತು.

ಇದಾದ ನಾಲ್ಕು ದಿನಗಳ ನಂತರ ಅವನು ಸ್ವತಂತ್ರನಾದ. ಈಗಲಾದರೂ ತನ್ನ ಹಳ್ಳಿಯ ಮನೆಗೆ ಹೋಗಿ ಸಮಾಧಾನಚಿತ್ತದಿಂದ ಕೆಲಸ ಮಾಡಲು ಆಸೆಪಟ್ಟ. ಈ ಅಭಿಪ್ರಾಯ ಹೊಂದಿದ ಗ್ಯಾಲೋಯಿಯನ್ನು ಪ್ರಾಯಶಃ ಅವನ ರಾಜಕೀಯ ಸ್ನೇಹಿತರು ಅನುಮೋದಿಸಿರಲಾರರು. ಹೇಗಾದರೂ ಮಾಡಿ ಅವನನ್ನು ವಂಚಿಸಲು ವಿಧಿ ಮತ್ತು ಅವನ ವಿರೋಧಿಗಳು ಇಬ್ಬರೂ ಪ್ರಯತ್ನಪಡುತ್ತಿದ್ದಾಗ ಅವಕಾಶ ಬಂದೇ ಬಂತು. ಒಂದು ಕ್ಷುಲ್ಲಕ ಹೆಣ್ಣಿನ ವಿಚಾರದಲ್ಲಿ ಅವನ ಜೊತೆಯಲ್ಲಿ 'ಕ್ರಾಂತಿಕಾರಿ'ಯೊಬ್ಬ ಅವನನ್ನು ಕೋವಿ–ದ್ವಂದಕ್ಕೆ ಆಹ್ವಾನಿಸಿದ. ಪಿಸ್ತೂಲು ಎಂದರೆ ಏನು ಎಂದು ಅರಿಯದ ಗ್ಯಾಲೋಯಿ ಒಪ್ಪಿದ– ಅದು ಗೌರವದ ಪ್ರಶ್ನೆ. ಆದರಿಂದ ಸಾವೂ ಖಚಿತ ಎಂದು ನಿರ್ಧರಿಸಿದ. ಆಗ ತನ್ನ ಸ್ನೇಹಿತನೊಬ್ಬನಿಗೆ, "ನನ್ನ ಇರುವಿನ ಜ್ಞಾಪಕವನ್ನು ಕಾಪಾಡಿಕೋ; ಕಾರಣ ವಿಧಿ. ನನ್ನ ರಾಷ್ಟ್ರ ನನ್ನನ್ನು ಅರ್ಥ ಮಾಡಿಕೊಳ್ಳಲು ಬೇಕಾಗುವಷ್ಟು ಕಾಲಾವಕಾಶ ನನ್ನ ಪಾಲಿಗೆ ಬರೆದಿಲ್ಲ," ಎಂದು ಬರೆದ.

ಈ ಕಾಗದ ಬರೆದ ನಂತರ ಉಳಿದಿದ್ದ ಕಡೆಯ ರಾತ್ರಿಯ ಕೆಲವೇ ಗಂಟೆಗಳನ್ನು ಗಣಿತ ಶಾಸ್ತ್ರ ಪ್ರಪಂಚಕ್ಕೆ ತನ್ನಿಂದ ಸಲ್ಲಬೇಕಾದದ್ದನ್ನು ಅವಸರ, ಅವಸರವಾಗಿ ಗೀಚಿ ಮುಗಿಸಲು ಪ್ರಯತ್ನಿಸಿದ. ಕಾಲನ ಇರವಿನ ಮುನ್ನೋಟ-

# ಸ್ತನ ಕ್ಯಾನ್ಸರ್

ಇದೊಂದು ನಾಜೂಕಾದ ರೋಗ ಸಾಮಾನ್ಯವಾಗಿ ಇದನ್ನು ಎಲ್ಲರೂ ಅಲಕ್ಷಿಸುತ್ತಾರೆ. ಎಂಥ ತಿಳಿದವರಿಗೂ ಸ್ವತಃ ವೈದ್ಯಕೀಯ ವೃತ್ತಿಯಲ್ಲಿದ್ದವರಿಗೂ ಇದು ಮೋಸಗೊಳಿಸುತ್ತದೆ. ಯಾವದೇ ನೋವು ಇಲ್ಲದೆ ಇದು ತಲೆದೋರುವದರಿಂದ ಇದು ಯಾರಿಗೂ ಗೊತ್ತಾಗುವದಿಲ್ಲ. ಗೊತ್ತಾಗುವ ಹೊತ್ತಿಗೆ ಎಲ್ಲವೂ ಕೈಮೀರಿ ಹೋಗಿರುತ್ತದೆ. ದೊಡ್ಡ ದೊಡ್ಡ ಶಿಕ್ಷಣವೇತ್ತರು ಹಾಗೂ ಡಾಕ್ಟರರು ಈ ರೋಗಕ್ಕೆ ಬಲಿಯಾಗಿದ್ದಾರೆ.

ಕಾರಣ ಮಹಿಳೆಯರು ಈ ಬಗ್ಗೆ ಬಹಳ ಜಾಗರೂಕರಾಗಿರಬೇಕು. ಅವರು ಈ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು,

ಚಿಕ್ಕ ಮಕ್ಕಳ ತಾಯಂದಿರು:- ಮೊಲೆಯ ಮೇಲೆ ಗಂಟು ಇದ್ದಾಗ ಇದು ಕೂಸಿನ ಆಟವೆಂದು ತಪ್ಪು ತಿಳಿಯಬೇಡಿರಿ. ಈ ಗಂಟು ಗುಣವಾಗದೆ ಅನೇಕ ದಿನಗಳ ವರೆಗೆ ಮುಂದುವರೆದರೆ ಅದನ್ನು ಅಪಾಯವೆಂದು ಗ್ರಹಿಸಬೇಕು.

೩೦ – ೪೫ ವರ್ಷಗಳ ಮೇಲಿನವರು. ಇವರು ಕೂಡ ಮೊಲೆಯ ಮೇಲಿನ ಈ ಗಂಟನ್ನು ಅಲಕ್ಷಿಸಬಾರದು. ಯಾವದೇ ನೋವಿಲ್ಲದೇ ಕಾಣಿಕೊಳ್ಳುವ ಈ ಗಂಟಿನ ಬಗ್ಗೆ ಕಾಳಜಿಯಿಂದಿರಬೇಕು. ಈ ಗಂಟಾಗಿರುವದು ನಿಮ್ಮ ನಾಲ್ಕೂ ಬೆರಳುಗಳನ್ನು ಕೈಯಾಡಿಸಿದರೆ ತಾನಾಗಿಯೇ ಗೊತ್ತಾಗುವದು, ಕಾರಣ ಪ್ರತಿನಿತ್ಯ ನೀವು ಕೈಯಾಡಿಸಿ ನೋಡಿಕೊಳ್ಳುವದು ವಿಹಿತ,

★ ಮೊಲೆಯಿಂದ ರಕ್ತ ಕಂಡರೆ
★ ಮೊಲೆಯ ತುದಿ ಮೊದಲು ಸರಿಯಾಗಿದೆ
★ ಒಂದೇ ಮೊಲೆಯ ತುದಿ ನಂತರ ಡೊಂಕಾದರೆ ಇಸಬು ಆದರೆ

ಇದೆಲ್ಲ ಸ್ತನ ಕ್ಯಾನ್ಸರ ಪ್ರಾರಂಭಿಕ ಅವಸ್ಥೆಯೆಂದು ತಿಳಿಯಬೇಕು. ಪ್ರಾರಂಭಿಕ ಅವಸ್ಥೆಯಲ್ಲಿ ಸರಿಯಾದ ಉಪಚಾರ ದೊರೆತರೆ ನೂರಕ್ಕೆ ನೂರರಷ್ಟು ಗುಣವಾಗಬಹುದು. ಈ ಸೂಚನೆಗಳು ಕಂಡ ತಕ್ಷಣ ತಜ್ಞ ಡಾಕ್ಟರರಿಂದ ಸಲಹೆ ಪಡೆಯಬೇಕು.

ಕ್ಯಾನ್ಸರ ಉಪಚಾರಕ್ಕಾಗಿ ಹುಬ್ಬಳ್ಳಿ ಅಮರಗೋಳದ ಬಳಿ ಸುಸಜ್ಜಿತ ಕ್ಯಾನ್ಸರ್ ಆಸ್ಪತ್ರೆಯನ್ನು ಸ್ಥಾಪಿಸಲಾಗಿದೆ. **ಈ ಸತ್ಕಾರ್ಯಕ್ಕಾಗಿ ನಿಮ್ಮ ಕಾಣಿಕೆ ನೀಡಿರಿ.**

**ಡಾ. ಆರ್. ಬಿ. ಪಾಟೀಲ, ಚೇರಮನ್**

## ಕರ್ನಾಟಕ ಕ್ಯಾನ್ಸರ್ ಸುಶ್ರೂಷೆ ಹಾಗೂ ಸಂಶೋಧನ ಸಂಸ್ಥೆ

**ವಿದ್ಯಾನಗರ, ಹುಬ್ಬಳ್ಳಿ**

ವನ್ನು ನೋಡಿದ್ದ ಗ್ಯಾಲೋಯಿಗೆ ಉಳಿದಿದ್ದ ಕೆಲವೇ ನಿಮಿಷಗಳನ್ನು ಸರಿಯಾಗಿ ಉಪಯೋಗಿಸಿಬಿಡಬೇಕೆಂಬ ಹಂಬಲ. ಪಾಪ, ಹಾಳೆಯ ಅಂಚಿನಲ್ಲಿ ಕ್ಷಣಕ್ಕೊಮ್ಮೆ "ಸಮಯವಿಲ್ಲ" "ಸಮಯವಿಲ್ಲ" ಎಂದು ಸೂಚಿಸಿ ಗೀಚುತ್ತಿದ್ದ. ಆ ಒಂದು ರಾತ್ರಿಯ, ಕೆಲವೇ ಗಂಟೆಗಳ ಕಾಲದಲ್ಲಿ ಗೀಚಿ ಇಟ್ಟ ಕೆಲವು ಹಾಳೆಗಳು ಗಣಿತಶಾಸ್ತ್ರಜ್ಞರಿಗೆ ಶತಮಾನಗಳಿಗೆ ಸಾಕಾಗುವಷ್ಟು ಕೆಲಸ ಕೊಟ್ಟಿವೆ.

## ಕೊನೆಯ ಕಾಣಿಕೆ

ಗಣಿತಶಾಸ್ತ್ರದಲ್ಲಿ ಕೆಲವು ಸುಂದರ ಪ್ರಮೇಯಗಳನ್ನು ಸಾಧಿಸಿದ ಗ್ಯಾಲೋಯಿ, ನಿರಾಸೆ ಮತ್ತು ಮೂರ್ಖರ ಜೊತೆ ಹೊಡೆದಾಡುವುದರಲ್ಲೇ ತನ್ನ ಜೀವನವನ್ನು ಕೊನೆಗಾಣಿಸಿದ್ದ. ಅವನು, ತನ್ನ ಕೊನೆಯ ದಿನದ ಸಂಶೋಧನೆಗಳನ್ನು ತನ್ನ ನಂಬಿಕೆಯ ಗೆಳೆಯನಿಗೆ ಒಪ್ಪಿಸುತ್ತಾ ಈ ರೀತಿ ಬರೆದ: "ಇವು ಗಣಿತಶಾಸ್ತ್ರದಲ್ಲಿ ಅತಿ ಮಹತ್ವದ ಸಂಶೋಧನೆಗಳು. ಇವುಗಳ ವಿಷಯದಲ್ಲಿ ಹತ್ತು ಜನಗಳ ಎದುರಿಗೆ ಜಾಕೋಬಿಯನ್ನಾಗಲೀ, ಕಾರ್ಲ್ ಫ್ರೆಡ್ರಿಕ್ ಗಾಸ್‌ನನ್ನಾಗಲೀ ಅವರ ಅಭಿಪ್ರಾಯವನ್ನು ತಿಳಿಸುವಂತೆ ಕೇಳಿಕೋ. ಇಲ್ಲದಿದ್ದಲ್ಲಿ ಯಾರಾದರೂ ಈ ಸಂಶೋಧನೆಗಳ ಕರ್ತೃಗಳಾಗಿ ಅವುಗಳ ಉಪಯೋಗ ಪಡೆಯಲು ಬಯಸಲೂಬಹುದು." ನಿರಾಸೆಯ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದ ಗ್ಯಾಲೋಯಿಯ ಸಮಯಪ್ರಜ್ಞೆ ಅದ್ಭುತ.

೧೮ ಮೇ ೧೮೩೨, ಗಣಿತಶಾಸ್ತ್ರದ ಚರಿತ್ರೆಯಲ್ಲಿ ಅದೊಂದು ದುರ್ದಿನ, ಬೆಳಗಿನ ಜಾವದಲ್ಲಿ ಪಿಸ್ತೂಲು ದ್ವಂದ್ವ. ಅನಾವಶ್ಯಕ, ಕ್ಷುಲ್ಲಕ ಕಾರಣಕ್ಕಾಗಿ ತನ್ನ ಜೊತೆ ರಾಷ್ಟ್ರಾಭಿಮಾನಿಗಳು ಎಂದು ಹೇಳಿಕೊಳ್ಳುತ್ತಿದ್ದವರ ಜೊತೆ. ಪರಿತ್ಯಾ-ದರೂ ಏನು? ಈ ದ್ವಂದ್ವದ ವಿಚಾರವನ್ನು ಯಾರಿಗೂ ತಿಳಿಸದೆ ಬರಬೇಕು. ಅವರು ಇದನ್ನು ಅವನ ಗೌರವದ ಪ್ರಶ್ನೆಯನ್ನಾಗಿ ಮಾಡಿದ್ದರು. ಗಣಿತಶಾಸ್ತ್ರ ಪ್ರಪಂಚವನ್ನಷ್ಟೇ ಅರಿತಿದ್ದ ಗ್ಯಾಲೋಯಿ, ಕುಟಿಲ ತಂತ್ರದ ಬಲೆಗೆ ಬಿದ್ದು ನೆಲಕ್ಕೆ ಉರುಳಿದ. ಹೇಳುವವರಿಲ್ಲದೆ ಕೇಳುವವರಿಲ್ಲದೆ ಕೆಲವು ಗಂಟೆಗಳ ಕಾಲ ಹಾಗೆಯೇ ಬಿದ್ದಿದ್ದ. ಆ ದಾರಿಯಲ್ಲಿ ಹೋಗುತ್ತಿದ್ದ ರೈತನೊಬ್ಬ ಅವನನ್ನು ಈ ಅವಸ್ಥೆಯಲ್ಲಿ ಆಸ್ಪತ್ರೆಗೆ ಸಾಗಿಸಿದ. ಅವನಿಂದ ಮುನ್ನೆಚ್ಚರಿಕೆ ಕೊಡಲ್ಪಟ್ಟಿದ್ದ ಅವನ ತಮ್ಮ ಬಂದ. ಮತ ಧರ್ಮದಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದ ಗ್ಯಾಲೋಯಿ, ಅವಸಾನಕಾಲದಲ್ಲಿ ಸಹಾಯ ಮಾಡಲು ಬಂದಿದ್ದ ಪಾದರಿಯೊಬ್ಬನ ಉಪದೇಶವನ್ನು ನಿರಾಕರಿಸಿದ. ಕಣ್ಣಲ್ಲಿ ನೀರು ತುಂಬಿಕೊಂಡು ನಿಂತಿದ್ದ ತಮ್ಮನನ್ನು ನೋಡಿದಾಗ, "ಇಷ್ಟು ಚಿಕ್ಕ ವಯಸ್ಸಿನಲ್ಲಿ ಸಾಯುವುದಕ್ಕೆ ನನಗೇ ಬಹಳ ಧೈರ್ಯ ಬೇಕಾಗಿರುವಾಗ ನಿನ್ನ ಕಣ್ಣೀರಿನಿಂದ ನನ್ನನ್ನು ಧೃತಿಗೆಡಿಸಬೇಡ," ಎಂದು ಹೇಳಿದ. ತನ್ನ ಆಸೆಗಳನ್ನು ಪೂರ್ತಿಗೊಳಿಸಲಾರದೆ ಸಾಯುತ್ತಿರುವ ಗ್ಯಾಲೋಯಿಯ ಮನಸ್ಸಿನ ಭಾವನೆಗಳನ್ನು, ಹೃದಯದ ಹೊಯ್ದಾಟವನ್ನು ಹತ್ತಿಕ್ಕಲು ಸಾಧ್ಯವಾಗದೆ ಹೇಳಿದ ಮಾತುಗಳು ಅವು. ಸತ್ತಾಗ ಅವನ ಯಾವ ನೆನಪೂ ಉಳಿಯಲಾಗದ ರೀತಿಯಲ್ಲಿ ಹಳ್ಳವೊಂದರಲ್ಲಿ ಅವನನ್ನು ಹೂತು ಮಣ್ಣು ಮಾಡಿದರು.

ಗಣಿತಶಾಸ್ತ್ರ ಭಂಡಾರವನ್ನೇ ಸುಂದರ ಪ್ರಮೇಯ ಸಿದ್ಧಾಂತಗಳಿಂದ ತುಂಬಿ ಅಮರನಾಗಬೇಕಾಗಿದ್ದ ಗ್ಯಾಲೋಯಿ ಮೂರ್ಖರ, ಮೂಢರ ಜೊತೆಯಲ್ಲಿ ಹೊಡೆದಾಡುವುದರಲ್ಲೇ ತನ್ನ ಅಲ್ಪ ಆಯುಷ್ಯವನ್ನು ಸವೆಸಿದ. ಸಾಯುವ ದಿನದ ಹಿಂದಿನ ರಾತ್ರಿ ಕೇವಲ ಕೆಲವೇ ಗಂಟೆಗಳ ಕಾಲದಲ್ಲಿ ಬರೆದ ಅರವತ್ತು ಪುಟಗಳ ಪಾಂಡಿತ್ಯಪೂರ್ಣ ಸಂಶೋಧನ ಅವನನ್ನು ಅಮರನನ್ನಾಗಿಸಿದೆ. ಗಣಿತಶಾಸ್ತ್ರಪ್ರೇಮಿಗಳ ಕೃತಜ್ಞತೆ ಗ್ಯಾಲೋಯಿಯ ಗೆಳೆಯ, ಆಗಸ್ಟಸ್ ಶೆವಾಲೀರ್‌ಗೆ ಸಲ್ಲಬೇಕು. ಅವನ ಶ್ರದ್ಧೆಯಿಂದಾಗಿಯೇ ಗ್ಯಾಲೋಯಿಯ ಸಂಶೋಧನಗಳು ಬೆಳಕಿಗೆ ಬರಲು ಸಾಧ್ಯವಾಯಿತು. ವಿಧಿ ತನ್ನ ನಾಟಕವನ್ನು ಒಬ್ಬೊಬ್ಬರಿಂದ ಒಂದೊಂದು ವಿಧವಾಗಿ ಆಡಿಸುತ್ತದೆ! ✡

— ಬಸವರಾಜ [illegible]

# ಜಾನಪದ ಜೀವನದಲ್ಲಿ ಪ್ರಣಯ

ಪ್ರಣಯವೆಂದೊಡನೆ ಮದುವೆಗೆ ಮುಂಚೆ.ಹೆಣ್ಣು–ಗಂಡುಗಳ ದೈಹಿಕ ಮಿಲನವೆಂದು ಭಾವಿಸುವುದು ಸ್ವಾಭಾವಿಕ. ಆದರೆ ಪ್ರಣಯವೆಂದರೆ ಕೇವಲ ಹೆಣ್ಣು–ಗಂಡುಗಳ ದೈಹಿಕ ಕೂಡುವಿಕೆಯಲ್ಲ; ಅದು ಮಾನಸಿಕ ಮಿಲನ. ಹರೆಯದ ಯುವಕ ಯುವತಿಯರಲ್ಲಿ ಕಂಡುಬರುವ ಸಹಜ ಕ್ರಿಯೆ. ಒಂದು ಹರೆಯದ ಗಂಡು ಹೆಣ್ಣನ್ನು ನೋಡುವುದು, ನೋಡಿ ಆನಂದಪಡುವುದು, ಅವಳ ಸಂಗ ಬಯಸುವುದು. ಅದೇ ರೀತಿ ಹರೆಯದ ಹೆಣ್ಣು ಹರೆಯದ ಗಂಡನ್ನು ನೋಡಬಯಸುವುದು, ಅವನ ಸಂಗ ಬಯಸುವುದು ಸಹಜ, ಇದನ್ನು ನಮ್ಮ ಜಾನಪದ ಕವಿಯು ಒಂದೇ ಹೆಣ್ಣು ಗಂಡಿಗೆ ಕೇಳಿಕೊಳ್ಳುವ ರೀತಿಯನ್ನು ಈ ರೀತಿಯಾಗಿ ಬಣ್ಣಿಸಿದ್ದಾನೆ:

ಹೆಣ್ಣೀನ ಈ ಹರೆಯು, ಹಣ್ಣೀನ
ಗೊಂಚಲು
ಕಣ್ಣೀಲಿ ನೋಡಿ ಮನಸಬಾರ। ಬಸವಂಕ
ಕನ್ನೇರಿಲ್ಲೇನ ಮನಿಯಾಗ.

ಹರೆಯದ ಗಂಡಸು ಎದೆಗಾರಿಕೆಗೆ ಮುಂದು. ಅವನು ಹೆಣ್ಣನ್ನು ಕಣ್ಣೆತ್ತಿ ನೋಡಬಯಸುವನು. ಆದರೆ ಅದೇ ಹರೆಯದ ಹೆಣ್ಣು ಅಬಲೆಯಾಗಿ ಗಂಡನ್ನು ಕದ್ದು ನೋಡಲು ಪ್ರಯತ್ನಿಸುವುದು. ಹೆಣ್ಣು ಯಾವಾಗಲೂ ಗಂಡಿನ ವಶವಾಗುವುದು. ಪ್ರಣಯದ ವಿಷಯದಲ್ಲಿ ಗಂಡು ಮುಂದಿದ್ದರೂ, ಹೆಣ್ಣು ಸದ್ದಿಲ್ಲದೇ 'ಹೂಂ' ಎಂದು ತನ್ನ ಕೈ ನೀಡುವಳು.

ಪ್ರೇಮ–ಕಾಮಗಳೆರಡೂ ಒಂದಾಗಿ ಬೆರತಾಗ ನಿಜವಾದ ಪ್ರಣಯ. ನಮ್ಮ ಜೀವನದಲ್ಲಿ ಪ್ರಣಯ ಮೂಡಿ ಬಂದಾಗಲೇ ನಿಜವಾದ ಬಾಳು. ಹರೆಯದ ತುಂಬಿದ ತುಟಿಗಳ ಮಧು ವಿನಿಮಯವನ್ನು ಬಯಸುವ ಕಾಲವನ್ನೇ ಪ್ರಣಯ ಕಾಲವೆನ್ನಬಹುದು. ಚುಂಬಿತ ಕಾಲದಲ್ಲಿ ಹೆಣ್ಣಿಗೂ ಗಂಡಿಗೂ ಹರೆಯ ಉಕ್ಕಿ ಬರುವುದು. ಆಗ ಗಂಡು ಏನಕ್ಕಾದರೆ ಹಿಂದೆಗೆಯಬಹುದು. ಆದರೆ ಹೆಣ್ಣು ಅಬಲೆಯಾದರೂ ಆ ಸಮಯದಲ್ಲಿ ಚಂಚಲೆಯಾಗಿ ಕಾಮೋನ್ಮಾದದ ಬಿಸಿಯಲ್ಲಿ ಧೈರ್ಯ ತಾಳಿ, ಪ್ರಣಯಕ್ಕಾಗಿ ತನ್ನ ಬಳಗವನ್ನು ಬಿಟ್ಟು ಗಂಡಿನ ಬೆನ್ನುಹತ್ತಿ ಹೋಗುವುದನ್ನು ಕವಿ ಈ ಪದ್ಯದಲ್ಲಿ ಬಹು ಚೆನ್ನಾಗಿ ಚಿತ್ರಿಸಿದ್ದಾನೆ.



ಕಾಕು ಹಾಕುಂದ ಕಂಡು, ಬೇಕಾಗಿ ಬಂದೆ
ಬಾರೋ ನನ ಗೆಣೆಯ ಬೈಲೀಗೆ। ನಾನೆಂದು
ಬಾಸೆ ತಪ್ಪೊಂತ ಮಗಳಲ್ಲ॥

ಲೋಕದ ಜನತೆಯ ಅಪವಾದಾತ್ಮಕ ಮಾತುಗಳನ್ನು ಕೇಳಿಯೂ ಕೂಡ ತಾನು ತನ್ನ ವಚನವನ್ನು ಪಾಲಿಸಲು ಬಂದಿರುವದಾಗಿಯೂ ತನ್ನ ಗೆಣೆಯನನ್ನು ಬಯಲಿಗೆ ಬರುವಂತೆ ಕರೆಯುತ್ತಿರುವುದೂ ಅವಳ ಹರೆಯದ ಮದವನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಪ್ರಣಯ ಯಾವಾಗಲೂ ಸುಸೂತ್ರವಾಗಿ ನಡೆಯುವದಿಲ್ಲ. ಅದು ಕೈಗೂಡಬೇಕಾದರೆ ಪ್ರಣಯಿಗಳೊಂದು ದೊಡ್ಡ ಸಾಹಸವನ್ನೇ ಮಾಡಬೇಕಾಗುವದು. ಅವರು ಜನತೆಯ ಬಿರುನುಡಿಗಳನ್ನು ಸಹಿಸಿಕೊಂಡು ಸಮಾಜದ ಕಟ್ಟಳೆಗಳನ್ನು ಬದಿಗೊತ್ತಿ ಬದುಕಬೇಕಾಗುವುದು. ಇಷ್ಟೊಂದು ತೊಂದರೆಗಳಿದ್ದರೂ ಕೂಡ ಗಂಡು ಹೆಣ್ಣನ್ನೂ ಹೆಣ್ಣು ಗಂಡನ್ನೂ ಬಯಸುವುದು ಸಾಮಾನ್ಯವಾಗಿದೆ.

ಪ್ರಣಯವು ಹಳ್ಳಿಗರಲ್ಲಿ ಒಂದು ರಸೋನ್ಮತ್ತತೆಯ ಲೀಲೆಯಾಗಿದೆ. ಅವರದು ಪಟ್ಟಣಿಗರಂತೆ ಥಳುಕಿನ ಪ್ರೇಮವಲ್ಲ. ಪಟ್ಟಣಿಗರ ಪ್ರಣಯ ಮಾರ್ಗವೇ ಬೇರೆ. ಹಗಲಿರುಳು ಮಳೆ ಚಳಿಯನ್ನದೆ ದುಡಿದು ದೇಹ ಬೆಳಸಿದ ನಿಜವಾದ ಪ್ರಣಯಿಗಳು ಹಳ್ಳಿಗರು. ಹಳ್ಳಿಗರ ಪ್ರಣಯದಲ್ಲಿ ಮೋಸ, ಮುಚ್ಚುಮರೆಗಳಿಲ್ಲ. ಅವರು ಮೊದಲಿನಿಂದಲೂ ಒಬ್ಬರಿಗೊಬ್ಬರು ಹೊಲಮನೆಗಳಲ್ಲಿ ಕೂಡಿಯೇ ದುಡಿಯುವ ಪ್ರಸಂಗಗಳು ಹೆಚ್ಚಿಗಿದ್ದು ಚಿಕ್ಕವರಿದ್ದಾಗಿನಿಂದಲೂ ಒಬ್ಬರನ್ನೊಬ್ಬರು ನೋಡುತ್ತಿರುವುದರಿಂದ ಅವರು ಬೆರೆತು ಮೈದುಂಬಿದಾಗ ಅವರು ನೋಡುವ ದೃಷ್ಟಿ ಬದಲಾಗುತ್ತದೆ. ಅಂತಹ ಸಂದರ್ಭದಲ್ಲಿ ನಿಸರ್ಗದ ಮಡಿಲಲ್ಲಿ ಅವರು ಒಬ್ಬರನ್ನೊಬ್ಬರು ದಿಟ್ಟಿಸಿದಾಗ ಮೈ ರೋಮಾಂಚನಗೊಳ್ಳದಿದ್ದೀತೆ? ಹೊಲದಲ್ಲಿ ಕೆಲಸ ಮಾಡುವಾಗ ಅಕಸ್ಮಾತ್ತಾಗಿ ಅವರೀರ್ವರ ಕೈಗಳು ತಾಕಿದಾಗ ಮೈ ಜುಮ್ಮೆನ್ನದೇ? ಹರೆಯದ ಮೈಯಲ್ಲಿ ಒಂದು ತರಹದ ವಿದ್ಯುತ್ ಸಂಚಾರವಾಗದೇ? ಇಷ್ಟೇ ಅಲ್ಲ, ತಿಳಿಯದೇ ಪ್ರಾರಂಭವಾಗುವ ಪ್ರೇಮ, ಬೆಳೆದು ಪ್ರಣಯ-



ವಾಗಿ ಸಿಲ್ಲುವುದು. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಇಂತಹ ಪ್ರಣಯುಗಳು ಸಮಾಜದ ನೀತಿ ನಿಯಮದಂತೆ ಮದುವೆಯೊಡನೆ ಮುಕ್ತಾಯ ಗೊಂಡು ದಾಂಪತ್ಯ ಜೀವನಕ್ಕೆ ಇಳಿಯಬಹುದು.

ಹಳ್ಳಿಗರ ಹಾಡುಗಳಲ್ಲಿ ಮೈ ತುಂಬಿದ ಹೆಣ್ಣು ಅವಳ ಪ್ರಿಯಕರನಿಗೆ ಹೊಳೆ ದಂಡೆಯ ಮೇಲೆ ಬೆಳೆದ ಸುಂದರ ಎಳೆ ಸವತೀಕಾಯಿ ಇದ್ದಂತೆ. ಅದನ್ನು ಮರೆಯೆಂದರೆ ಅವನಿಗೆ ಮರೆ ಯುವುದಾದೀತೆ? ಅದನ್ನು ಕವಿ ಈ ರೀತಿಯಾಗಿ ಚಿತ್ರಿಸಿದ್ದಾನೆ:

ಹೊಳಿಯ ದಂಡೆಯ ಮ್ಯಾಲೆ,
ಎಳಿಯ ಸವತೀಕಾಯಿ,
ಹರಿಯಂದರ್ಹ್ಯಾಂಗ ಹರಿಯಾಲೆ।
ಎಲೆ ಹುಡುಗಿ
ಮರೆಯಂದರ್ಹ್ಯಾಂಗ ಮರಿಯಾಲೆ॥

ಯೌವನದ ಹುಚ್ಚಿನಲ್ಲಿ ಗಂಡಿನೊಡನೆ ಬೆರೆತು ಹೆಣ್ಣು ಯಾವುದೋ ಒಂದು ಕಾರ್ಯದ ಮೂಲಕ ತನ್ನ ಇನಿಯನನ್ನಗಲುವುದು ಬಂದಾಗ ಅವಳ ಅಳುವನ್ನು ಜಾನಪದ ಕವಿಯು:

ಚಳಿಜ್ವರ ಬಿಟ್ಟಾವು, ಒಳಜ್ವರ ಬಿಡಲಿಲ್ಲ
ಮಂಟಪದ ಜಾಜಿ ಮನೆಯವನೆ।
ಸರದಾರ
ಮಂತ್ರಿಸಿ ಹೋಗೊ ತಲೆನೋವ॥

ಎಂದು ಹಾಡಿ ಅವಳಿಗೆ ಪ್ರಣಯಿಯ ಅಗಲಿಕೆಯ ಪ್ರಣಯ ಜ್ವರವನ್ನುಂಟು ಮಾಡಿ ತಲೆನೋವೆ ಎಬ್ಬಿಸುವುದೆಂದು ವಿವರಿಸಿರುವನು. ಹಳ್ಳಿಗರು ಹೆಣ್ಣಾಗಲಿ ಗಂಡಾಗಲಿ, ಅವರವರ ಚಲುವಿಕೆಗಾಗಲಿ ಅವರ ಗುಣಕ್ಕಾಗಲಿ ಮೆಚ್ಚಿಕೊಳ್ಳುವುದು ಅವರವರ ಮನೋಭಿಲಾಷೆಯಂತಿರುತ್ತದೆ. ಗಂಡು ಯಾವಾಗಲೂ ಹೆಣ್ಣಿನ ಬಣ್ಣ ಅವಳ ವೈಯಾರ, ಒಡವಾದ ನಡ, ಅವಳ ವೇಷ ಭೂಷಣಕ್ಕೆ ಮನಸೋಲುವುದು. ಇದನ್ನು ಈಗ ಕನ್ನಡ ಚಲನಚಿತ್ರ ಗೀತವಾಗಿರುವ ಒಂದು ಜಾನಪದ ಹಾಡಿನಲ್ಲಿ :

"ಮಲೆನಾಡ ಹೆಣ್ಣ ಮೈ ಬಣ್ಣ
ಬಲು ಚನ್ನ ಆ ನಡು ಸಣ್ಣ
ನಾ ಮನಸೋತೆ ನೀ ಚಿನ್ನಾ"

ಎಂದು ಗಂಡು ಮಲೆನಾಡ ಹೆಣ್ಣಿನ ಮುಂದೆ ಅವಳ ಮೈಮಾಟವನ್ನು ಹೊಗಳುತ್ತಿರುವುದನ್ನು ನಾವು ಕಾಣಬಹುದು. ಗಂಡು ಎಂತಹ ಸಾಹಸಿಯಾದರೂ ಅವನು ತನ್ನ ಪ್ರೇಯಸಿಯನ್ನು ಹುಡುಕಿ ಅವಳ ಜತೆ ಕೂಡಲು ಹವಣಿಸುವುದನ್ನು ಕೆಳಗಿನ ನುಡಿಗಳಲ್ಲಿ ಕಾಣಬಹುದು :

ನಿಂಬೀಯ ಹಣ್ಣಾಂಗ ತುಂಬಿತ್ತ
ಮೈಬಣ್ಣ,
ಹುಂಬಾಲ ಬಿತ್ತ ನಿನಮ್ಯಾಲೆ। ಎಲೆ ಹೆಣ್ಣೆ
ನಂಬಿ ಬಂದೇನ ಮನೆತನಕ॥

ಇದರಲ್ಲಿ ಪ್ರಣಯಿ ತನ್ನ ಪ್ರಿಯತಮೆಯ ಮೈಬಣ್ಣವನ್ನು ಹೊಗಳಿ ಅದನ್ನು ನೋಡುವುದರ ಸಲುವಾಗಿ ತನ್ನ ಕೆಲಸ ಬಿಟ್ಟು ಅವಳ ಮನೆತನಕ ಬಂದಿದ್ದನ್ನು ಕಾಣಬಹುದು. ಗಂಡಸು ತನ್ನ ಹೆಂಡತಿಯನ್ನು ಎಷ್ಟೊಂದು ಏಕಚಿತ್ತ-



ನಾಗಿ ನೋಡುವನೆಂಬುದನ್ನು ಹೋಳಿಯ ಹಾಡಿನ ಉಳಿದ ಪದ್ಯಗಳಲ್ಲಿ ಬರುವ "ಕಾಡಿಗಿ ಗಣ್ಣಿನ, ಕೂಡಿದ್ದುಬ್ಬಿನ್ಹೆಣ್ಣೆ", ಗಿಡ್ಡಿ- "ನಿನ್ನ ಕೈಗೆ ಬಳಿ ಚೆಂದ, ಮಾರಿಯ ನೋಡಿದರ ಮಾವುರದ ಬಂಗಾರ" ಎಂದು ರಸವತ್ತಾಗಿ ವಿವರಿಸಿರುವನು. ಇವುಗಳನ್ನು ಕೇಳುವ ಕೇಳು-ಗರಿಗೆ ಅವಳನ್ನು ನೋಡಿರದಿದ್ದರೂ ಅವಳ ಚಿತ್ರ ಅವರ ಕಣ್ಮುಂದೆ ಬರುವಂತೆ ಮಾಡುವಲ್ಲಿ ಕವಿ ಯಶಸ್ವಿಯಾಗಿದ್ದಾನೆ.

ಹಳ್ಳಿಗರ ಪ್ರಣಯದಲ್ಲಿ ಶೃಂಗಾರ ಕೃತಕವಲ್ಲ, ಅವರಲ್ಲಿ ನವನಾಗರಿಕತೆಯ ಕೃತ್ರಿಮದ ವಾಸ-ನೆಯೂ ಇಲ್ಲ. ಅವರ ಪ್ರಣಯ, ಪ್ರೇಮ, ಕಾಮ, ಔದಾರ್ಯ, ಕೋಪ, ಸರಳತೆಗಳ ಸಮ್ಮಿಲನ ವೆಂದರೂ ಅಡ್ಡಿಯಿಲ್ಲ.

ಕ್ವಾರಿ ಮೀಸಿ ತಿದ್ದಿ ನೀರಿಗೆ ಹೋಗುವಾಗ
ದಾರ್‍ಯಾಗ ಕಂಡೆ ಚಲುವನ್ನ। ಮನಸಾಗಿ
ದಾರ್‍ಯಾಗ ತರುಬಿ ಕೇಳೇನ ||

ಈ ಹಾಡಿನಲ್ಲಿ ಪ್ರಣಯಿಗಳ ಪರಸ್ಪರ ಭೆಟ್ಟಿಯ ತಾಣಗಳೆಂದರೆ ಹೊಳೆಯ ದಾರಿ, ಊರ ಮುಂದಿನ ಕೆರೆ, ಹೊಲ, ಮುಂತಾದ ಏಕಾಂತ ಸ್ಥಳಗಳು ಇಲ್ಲವೇ ಹಬ್ಬ, ನಿಬ್ಬಣ, ಜಾತ್ರೆ ಸಂತೆ ಮುಂತಾದವುಗಳಾಗಿವೆ.

ಮದುವೆಗೆ ಹೋದ ಗಂಡು ತನ್ನ ಮಾವನ ಮಗಳನ್ನು ತಾನು ವರಿಸುವ ಗಂಡಾಗಿ ನೋಡು ತ್ತಾನೆ. ಅವಳ ರೂಪಕ್ಕೆ ಮನಸೋತು ಅವ-ಳನ್ನು ಮಾತನಾಡಿಸುವ ಅವಕಾಶ ದೊರಕಿಸಿ ಕೊಂಡು ಅವಳನ್ನು,

ಮಾವನ ಮಗಳೆ, ಕೋಗಿಲೆ ದನಿಯವಳೆ,
ತಾವರೆ ಮೊಗ್ಗಿ ಮಲೆಯವಳೆ।
ಅರಗಿಳಿಯೆ
ಬಾಯಾರಿ ಬಂದೆ ನೀರ್ಕೊಡ ||

ಎಂದು ಅವಳ ಮನ ಕಲಕುವನು; ಇಲ್ಲವೆ ಅವಳು ನೀರಿಗೆ ಹೊರಟಾಗ ಅವಳನ್ನು ಅನುಸರಿಸಿ ಹೋಗಿ,

ನೀರಿಗ್ಹೋಗೊ ಹೆಣ್ಣೆ ನಿಲ್ಲು ನಾ ಬರತೇನಿ
ನಿನ್ನಾಣೆ ನಿನ್ನ ಕೊಡದಾಣೆ। ಕೊರಳಿನ
ಸರದಾಣೆ ನೀರ ಹೊಳೆಯಾಣೆ ||

ಎಂದು ಅವಳನ್ನು ಕೆಣಕುವುದು ಹಳ್ಳಿಗರಲ್ಲಿ ಕಂಡುಬರುವ ಪ್ರಣಯದ ಒಂದು ವಿಧಾನ.

ಪ್ರಣಯದ ಮದದಲ್ಲಿ ಇಬ್ಬರಿಗೂ ಅಗಲುವು ದಕ್ಕೆ ಮನಸ್ಸಿರುವುದಿಲ್ಲ. ಆದರೆ ಪ್ರಣಯದಲ್ಲಿ ಮಗ್ನರಾದರೆ ಹೊಟ್ಟೆಯ ಚಿಂತೆ, ಆದರೂ ಹೆಣ್ಣು ತಾನು ತನ್ನ ಪ್ರಿಯತಮನನ್ನು ಅಗಲಲಿಚ್ಛಿಸುವುದಿಲ್ಲ. ಬೆಳವಲದ ವೀರ ತನ್ನ ಪ್ರೇಯಸಿಗೆ ತಾನು ಅವಳಿಗಾಗಿ ಬೇಟೆ-ಗಾಗಿ ಹೋಗುವುದಾಗಿಯೂ ಮಲೆನಾಡ ಜೇನು ತರುವುದಾಗಿಯೂ ತಿಳಿಸಿ ಅವಳನ್ನು ಸಂತಯಿಸುವುದನ್ನು ಜಾನಪದ ಕವಿಯು ಈ ಹಾಡಿನಲ್ಲಿ ಮನ ಮಿಡಿಯುವಂತೆ ಚಿತ್ರಿಸಿದ್ದಾನೆ:

ಈಟೀಟ ಮೊಲೆಯವಳ,
ಚೀಟಿ ಕುಪ್ಪಸದವಳ
ಬ್ಯಾಟಿ ಹೋಗತೇನಿ ಕೈಬಿಡ। ಮಲ್ನಾಡ
ಜೇನ ತರತೇನಿ ಸವಿ ನೋಡ || ✡

# ಏಳುನೂರಾ ಇಪ್ಪತ್ತು ಹೆಜ್ಜೆ

ಮೂಲ : ಅಮೃತಾ ಪ್ರೀತಮ್
ಕನ್ನಡಕ್ಕೆ : ಮಾಲತಿ ಪಟ್ಟಣಶೆಟ್ಟಿ

ಹೆಜ್ಜೆ ಹೆಜ್ಜೆಗೆ ಕತ್ತಲೆ ಪಟ್ಟವಾಗುತ್ತಿತ್ತು... ಅವನು ತೊಟ್ಟ ನೀಲಿ ಶರ್ಟು, ಅವನ ಬೂದುಗಪ್ಪು ಬಣ್ಣದ ಪ್ಯಾಂಟಿನ ಹಾಗೆ ಕಪ್ಪಾಗುತ್ತ– ಈಗಂತೂ ಕತ್ತಲೆಯ ಒಂದು ಭಾಗವೇ ಆಗಿಬಿಟ್ಟಿತ್ತು. ಆದರೆ ಕಾಲಲ್ಲಿಯ ಬಿಳಿಯ ಕ್ಯಾನವಾಸ್ ಬೂಟುಗಳು ಮಾತ್ರ ಕತ್ತಲೆಯ ತಮ್ಮಲ್ಲೂ ಅಸ್ತಿತ್ವವನ್ನು ಕಾಯ್ದುಕೊಂಡಿರುವಂತೆ ತೋರುತ್ತಿತ್ತು.

ತಾನು ಒಂದು ಸ್ಥಳದಲ್ಲಿ ನಿಂತಂತೆ, ಆದರೆ ತನ್ನ ಕಾಲುಗಳು ಮಾತ್ರ ತಾವಾಗಿ ಚಲಿಸಿದಂತೆ... ಒಂದು ನಮೂನೆ ಅವನು ತನ್ನ ಕಾಲುಗಳನ್ನು ನಿಟ್ಟಿಸುತ್ತಿದ್ದ.

ತನ್ನ ಕಾಲುಗಳನ್ನು ನೋಡುತ್ತಿದ್ದನಷ್ಟೇ ಅಲ್ಲ, ಅವುಗಳ ಪ್ರತಿ ಚಲನವಲನವನ್ನೂ ಅವನು ಗಮನಿಸುತ್ತಿದ್ದ. ಈಗ ಅವನ ತುಟಿಯ ಮೇಲಿದ್ದ ಸಂಖ್ಯೆ ಏಳುನೂರಾ ಇಪ್ಪತ್ತು.

ತಾನು ನಡೆದಿದ್ದ ಪಕ್ಕಾ ರಸ್ತೆ ಯಾವಾಗ ಮುಗಿದು ಹೋಗಿತ್ತೋ ಕಚ್ಚಾ ರಸ್ತೆ ಯಾವಾಗ ಸುರುವಾಗಿತ್ತೋ ಅವನಿಗೆ ತಿಳಿಯಿದು. ಬಹುಶಃ ಮನೆ ಬಿಟ್ಟೊಡನೆ ಪ್ರತಿ ಹೆಜ್ಜೆ ಎಣಿಸುತ್ತಲೇ ಇದ್ದ– ಈಗ ಅವನ ತುಟಿಯುಂಚಿನಲ್ಲಿದ್ದ ಅಂಕಿ ಏಳುನೂರಾ ಇಪ್ಪತ್ತು.

ಹಾದಿಯೂ ಮುಗಿದಿತ್ತು... ಆದ್ದರಿಂದ ಅವನ ಎಣಿಕೆಯೂ ನಿಂತಿತ್ತು. ಮುಂದೆ ಎಡಕ್ಕೆ ಬಲಕ್ಕೆ ಕೇವಲ ಗಿಡಗಳೇ ಗಿಡಗಳು. ಗಿಡಗಂಟಿಗಳ ನಡುವೆ ನುಸುಳಿದ ಕಾಲು ಹಾದಿಯೂ ಇಲ್ಲಿ ತೀರಿಹೋಗಿತ್ತು. ಗಿಡಮರಗಳನ್ನು ಸುತ್ತಿಕೊಂಡ ಒಂದು ಹಳೆಯ ಭಾವಿಯ ಹತ್ತಿರ ಹೋಗಿ ಆ ಕಾಲುಹಾದಿ ನಿಂತುಬಿಟ್ಟಿತ್ತು.

ಬಹುಶಃ ಗಾಳಿ ತೀವ್ರವಾಗಿ ಬೀಸುತ್ತಿರಬೇಕು ಗಿಡಮರಗಳ ಎಲೆ ಅಲುಗಾಡಿ ಒಂದನ್ನೊಂದು ತಾಕಲಾಡುವಾಗ ಆಗುವ ಸಪ್ಪಳ ಎಷ್ಟೋ ಪಿಸುಮಾತುಗಳು ಈ ಎಲೆಗಳ ಮೇಲೆ ಕುಳಿತು ಗುನುಗುನಿಸಿದಂತೆ ಅನ್ನಿಸುತ್ತಿತ್ತು...

ಇಲ್ಲ— ಎಷ್ಟೋ ಧ್ವನಿಗಳು ಗಿಡಗಳ ಟೊಂಗೆ ಟೊಂಗೆಗಳಲ್ಲಿ ಚಿಗುರಿದಂತಿದ್ದವು...

ಗಿಡಗಳಿಂದುದುರಿದ ಎಲೆಗಳು ಅವನ ಪಾದಗಳ ಸಮೀಪಕ್ಕೆ ಉರುಳಿದವು. ಅವನ ಕಾಲುಗಳು ಕೀಳದಂತಾದವು. ಪಾದಗಳ ಬಳಿ ಉದುರಿ ಅಲುಗಾಡುತ್ತಿರುವ ಎಲೆಗಳು ಅವನ ಪಾದಗಳ ಜೊತೆ ಏನೋ ಪಿಸುಗುಟ್ಟಿದಂತೆನಿಸಿತು.

ಕಾಲುಗಳ ಕಡೆಗೆ ವಾಲಿದ ಶಿರ ಇನ್ನೂ ಹೆಚ್ಚಿಗೆ ವಾಲಿ ಪಾದಗಳಿಂದ ಏಳುವ ಎಷ್ಟೋ ಧ್ವನಿಗಳನ್ನು ಅವನ ಕಿವಿ ಎತ್ತಿಕೊಂಡೊಡನೆ

ಇವೆಲ್ಲ ಮಿದುಳಿನಲ್ಲಿ ರಭಸದಿಂದ ಸುತ್ತಾಡ ತೊಡಗಿದವು...

ಈ ಧ್ವನಿಗಳಲ್ಲಿ ಒಂದು ಧ್ವನಿ ಯಾವುದೋ ಒಂದು ಮೃಗದಂತೆ ಅವನ ಮೇಲೆ ಎರಗತೊಡಗಿತು...

ಮೊದಲು ಬೈಗಳಗಳು ಮುಖ ಎತ್ತಿ ನಿಂತವು... ಬಳಿಕ...

ಅವನ ಒಂದೊಂದು ಎಲುವು ಆ ಯಾತನೆಯನ್ನು ಸಂಗ್ರಹಿಸಿಟ್ಟಿತ್ತೋ ಏನೋ. ಈಗ ಒಮ್ಮೆಲೆ ನೋಯತೊಡಗಿದವು.

ಈಗಲೂ ಎಲ್ಲಿಂದಲೊ ಬಂದು ಕಿವಿಗಪ್ಪಳಿಸುತ್ತಿವೆ. ನೀತಾಳ ಅಣ್ಣನ ಆ ಬೈಗಳುಗಳು. ತನ್ನ ಎರಡೂ ಅಂಗೈಗಳಿಂದ ಎರಡೂ ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡ. ಹೀಗೆ ಮನಸ್ಸಿಗೆ ಏಕಾಗ್ರತೆ ತಂದುಕೊಂಡು ನೀತಾಳ ಧ್ವನಿ ಕೇಳುವ ಪ್ರಯತ್ನ ಮಾಡಿದ...

ಆದರೆ ನೀತಾಳ ಸ್ವರ ಅವಳ ತುಟಿಗಳಲ್ಲಿ ಬಂದಿಯಾಗಿತ್ತು; ತುಟಿಗಳು ಅಲುಗಾಡಲೇ ಇಲ್ಲ...

ನೀತಾ ವಾಚಾಳಿ. ಆದರೆ ಆ ದಿನ ನೀತಾಳ ಅಣ್ಣ ಅವಳ ಪುಸ್ತಕದಲ್ಲಿದ್ದ ಸುನೀಲನ ಪತ್ರ ಹಿಡಿದುಕೊಂಡು, ಸುನೀಲನನ್ನು ಕೋಣೆಯಲ್ಲಿ ಕೂಡ್ರಿಸಿ, ಬಾಗಿಲು ಮುಚ್ಚಿಕೊಂಡು, ಸಿಕ್ಕಾಪಟ್ಟೆ ಬೈದಿದ್ದ – ಆಗಲೂ ನೀತಾಳ ಸ್ವರ ಅವಳ ತುಟಿಗಳಲ್ಲಿ ಹುಗಿದುಹೋಗಿತ್ತು.

ಆ ನಂತರ ಅವಳ ಅಣ್ಣ ಸುನೀಲನನ್ನು ಮೈಹುಳಿ ಹೊಡೆದಿದ್ದ...

ಬಳಿಕ ನೀತಾಳ ಧ್ವನಿಯನ್ನು ಅವನೆಂದೂ ಕೇಳಲೇ ಇಲ್ಲ. ಅದು ಬಹುಶಃ ಅವಳ ತುಟಿಗಳಲ್ಲಿ ಶಾಶ್ವತವಾಗಿ ಅಸ್ತವಾಗಿಬಿಟ್ಟಿತ್ತು.

ಇಂದು ಮತ್ತೊಮ್ಮೆ ತನ್ನ ಎಲ್ಲ ಲಕ್ಷ್ಯವನ್ನೂ ಮೊನಚಾಗಿ ಹೊಸೆದು ನೀತಾಳ ಧ್ವನಿಯನ್ನು ಒಂದೇ ಒಂದು ಬಾರಿಯಾದರೂ ಕೇಳಲೆತ್ನಿಸಿದ. ಆದರೆ ಅವಳ ಧ್ವನಿಯ ಒಂದು ಅಲೆ



ಕೂಡ ಈಗ ಕೇಳಿಸದಂತಾಗಿತ್ತು.

ಸುನೀಲನ ತಲೆಯಲ್ಲಿ ಎಷ್ಟೋ ಧ್ವನಿಗಳು ಗಹಗಹಿಸಿ ನಗತೊಡಗಿದವು.

ಇಲ್ಲ, ಈ ಧ್ವನಿಗಳು ಕೊಳಕು ನೀರಿನಂತೆ ಉಗುಳಿನೊಂದಿಗೆ ತುಟಿಗಳನ್ನು ಒಡೆದು ಹರಿಯುತ್ತಿದ್ದಂತಿತ್ತು.

ಈ ಧ್ವನಿಗಳ ಮಹಾಪೂರವೇ ಒಂದು ದಿನ ಇವನ ಬೆನ್ನು ಹತ್ತಿ ಬಂದಿತ್ತು. ಆಗ ಇವರಿಂದ ಪಾರಾಗಲು ವೇಗದಿಂದ ಓಡಹತ್ತಿದ್ದ.

ಅವನ ಉಸಿರು ಹೆಚ್ಚೆಚ್ಚಾಗಿ ಗಂಟಲು ಕಟ್ಟಿ ಕೊಂಡಿತು. ದಿಕ್ಕೆಟ್ಟ ಅವನ ಕಣ್ಣುಗಳು ಅವನ ಮುಖದ ತುಂಬ ಹಿಗ್ಗುತ್ತ ಹೋಗಿ ಹರಿಯ ತೊಡಗಿದ್ದವು.

ಅವನ ಕೈಯಲ್ಲಿ ಒಂದು ಕಾಗದವಿತ್ತು. ಅದರ ಅಕ್ಷರಗಳು ಅಂಗೈಯಲ್ಲಿಯ ಬೆವರಿನಿಂದಾಗಿ ಬಹುಶಃ ಒಡೆದುಹೋಗಿದ್ದವು— 'ನಿನ್ನನ್ನು ಹಾಸ್ಟೆಲಿನಿಂದ ಹಾಗೂ ಕಾಲೇಜಿನಿಂದ ಹೊರ-ಹಾಕಲಾಗಿದೆ' ಎಂಬ ಪ್ರಿನ್ಸಿಪಾಲರ ಮಾತು ಕಾದ ಸೀಸದಂತೆ ಅವನ ಕಿವಿಯಲ್ಲಿ ನುಗ್ಗಿ ಸುಡ ತೊಡಗಿತು.

ಹಾಸ್ಟೆಲಿನ ಕೋಣೆಗಳಲ್ಲಿ ಬಂದು ಮಾಡಿಟ್ಟ ಧ್ವನಿಗಳು ಆ ಕೋಣೆಗಳ ಸೂರಿನಿಂದ ಹರಿನಾಳಿಗೆ ಗಳ ಮೂಲಕ ಹೊರಗೆ ಬೀದಿಯಲ್ಲಿ ಹರಿಯ-ತೊಡಗಿದವು. ಅವನು ಮುಂದೆ ಮುಂದೆ ಓಡ-ತೊಡಗಿದ್ದ— ಆ ಧ್ವನಿಗಳ ಒಂದು ಮಹಾಪೂರ ಅವನ ಹಿಂದೆಯೇ ಧಾವಿಸುತ್ತಿದ್ದಂತಿತ್ತು.

ಅವನ ಕಾಲೇಜಿನಲ್ಲಿ ಕಲಿಯುತ್ತಿದ್ದ ದಿನಗಳು ಕಳೆದು ಎಷ್ಟು ಕಾಲವಾಯಿತೊ ಏನೋ— ಐದು ವರ್ಷಗಳಾದರೂ ಸಂದಿರಬೇಕು. ಆ ಧ್ವನಿಗಳು ಅವನ ಮಿದುಳಿನಲ್ಲಿ ಇಳಿದಂದಿನಿಂದ ಬಹುಶಃ ಹೆಪ್ಪುಗಟ್ಟಿ ನಿಂತಂತಾಗಿದ್ದವು— ಅಥವಾ ಅವನ ಮಿದುಳಿನಿಂದಿಳಿದು ಬಂದು ಅವನ ಅಂಗಾಲು-ಗಳಲ್ಲಿ ನೆಲೆಗೊಂಡಿದ್ದವೋ ಏನೋ. ಅವನಿಗೆ ಅದರ ನೆನಪಿರಲಿಲ್ಲ. ಎಂದೂ ಅವನ ಕಾಲುಗಳು ಒಂದೆಡೆ ಅಂಟಿಕೊಂಡು ನಿಲ್ಲುತ್ತಿರಲಿಲ್ಲ; ಸ್ಥಿರ-ವಾಗಿ ಕುಳಿತುಕೊಳ್ಳುತ್ತಿರಲಿಲ್ಲ; ನಿಶ್ಚಲವಾಗಿ ಮಂಚದ ಮೇಲೆ ಪವಡಿಸುತ್ತಿರಲಿಲ್ಲ. ದಿನವೂ ಅರ್ಧ ರಾತ್ರಿಯಲ್ಲಿ ತನ್ನ ಕೋಣೆಯಲ್ಲಿ ಒಂದು ಗೋಡೆಯಿಂದ ಇನ್ನೊಂದು ಗೋಡೆಯವರೆಗೆ, ಮೂರನೆಯ ಗೋಡೆಯವರೆಗೆ ಅಡ್ಡಾಡುತ್ತಿ-ದ್ದವು. ಆದರೆ ನಾಲ್ಕನೆಯ ಗೋಡೆಯಲ್ಲಿಯ ಬಾಗಿಲನ್ನು ಅವನ ತಾಯಿ ಪ್ರತಿದಿನ ರಾತ್ರಿ ಮುಚ್ಚಿರುತ್ತಿದ್ದಳು.

ಅಂದು ಆ ಎಲ್ಲ ಹಳೆಯ ಧ್ವನಿಗಳು ಅವನ ಕಾಲೊಳಗಿಂದ ಮೇಲೆದ್ದು ಬಂದು ತಲೆಯಲ್ಲಿ ಇಳಿದುಕೊಂಡಿದ್ದವು— ಇಂದು ಅವನ ಹೆಜ್ಜೆ-ಗಳು ಅಲ್ಲಿಂದ ಮೇಲೇಳದಾದವು. ಬಹಳ ಜನ ಚೀರಾಡುತ್ತ ಮನೆಯ ಅಟ್ಟದ ಮೇಲೇರಿ ಬಂದಂತೆ ಹಾಗೂ ಕಂಬಗಳ ಆಧಾರದಿಂದ ನಿಂತ ಚಪ್ಪರವನ್ನೇ ಅಲುಗಾಡಿಸಿದಂತೆ— ಆ ಧ್ವನಿಗಳ ಏರಾಟದಿಂದ ಅವನ ತಲೆ ಕಂಪಿಸತೊಡಗಿತು.

ಒಬ್ಬ ಸೋಕಿ ಇದ್ದ... ಆ ಅಶೋಕ ಕೆಲವು ದಿನ ತನ್ನ ತೋಳುಗಳಲ್ಲಿ ಅವನ ತೋಳುಗಳನ್ನು ಸೇರಿಸಿ ಸಂಗಾತಿಯಾಗಿ ನಡೆದುಕೊಂಡಿದ್ದ... ಅವನೂ ತನ್ನ ಕೈಯಿಂದ ಜಾರಿಕೊಂಡು ಎಂದು ದೂರಾದನೋ ಏನೋ...

ಇಲ್ಲ... ಈಗ ಅವನ ನೆನಪಿನ ಸುರುಳಿ ಬಿಚ್ಚಿ-ಕೊಂಡಿತು. ಪ್ರಿನ್ಸಿಪಾಲರು ಶೋಕಿಯನ್ನು ಹಿಡಿ-ದೆಳೆದು ತನ್ನ ತೋಳುಗಳಿಂದ ಬೇರ್ಪಡಿಸಿ ತನ್ನ-ನ್ನೊಬ್ಬನನ್ನೇ ಕೋಣೆಯ ತೀಕ್ಷ್ಣ ಪ್ರಕಾಶದಲ್ಲಿ ನಿಲ್ಲಿಸಿ, 'ನಿಜ ಹೇಳು. ನೀನು ಅಶೋಕನನ್ನು ಎಷ್ಟು ದಿನಗಳಿಂದ ರಾತ್ರಿ ನಿನ್ನ ಕೋಣೆಗೆ ಕರೆ-ದೊಯ್ಯುತ್ತಿದ್ದೀ?' ಎಂದು ಕೇಳಿದ್ದರು.

ಅವನಿಗೆ ನೆನಪಾಯ್ತು— ಒಂದು ರಾತ್ರಿ ಅಶೋಕನನ್ನು ತನ್ನ ಕೋಣೆಯಲ್ಲಿ ಕರೆದೊ-ಯ್ದಿದ್ದ. ಎಷ್ಟೋ ಹೊತ್ತು ಓದುತ್ತ ಕುಳಿ-ತಿದ್ದರು. ಅನಂತರ ಇಬ್ಬರೂ ಒಂದೇ ಹಾಸಿಗೆ ಯಲ್ಲಿ ಮಲಗಿದ್ದರು.... ಆ ರಾತ್ರಿ ಅಶೋಕನ ಮೆತ್ತನ್ನ ದೇಹವು ನೀಶಾಳ ತುಂಬಿದ ಶರೀರ ದಂತೆಯೇ ಅನ್ನಿಸತೊಡಗಿತು. ಮಲಗಿದ ಅಶೋಕನ ತೋಳನ್ನು ತನ್ನ ಕೊರಳಿಗೆ ಸುತ್ತಿ ಕೊಂಡಿದ್ದ... ತನ್ನ ಅಂಗೈಯನ್ನು ಮೊದಲು ಅವನ ಹೆಗಲ ಮೇಲೆ... ನಂತರ ಬೆನ್ನ ಮೇಲೆ... ಟೊಂಕದ ಮೇಲೆ ಕೆಳಗೆ... ಮೊಳಕಾಲುಗಳ ಮೇಲೆ ಆಡಿಸುತ್ತಿದ್ದ.

ಇನ್ನೊಂದು ರಾತ್ರಿ... ಮತ್ತೊಂದು ರಾತ್ರಿ

ಏನು ವಿಚಿತ್ರವೋ ಏನೋ ಅಶೋಕನ ಮುಖ ನೀತಾಳ ಮುಖದಂತೇ ಕಾಣಹತ್ತಿತು.

ಮೊಟ್ಟ ಮೊದಲು ನೀತಾಳ ತುಟಿಗಳಿಗೆ ಮುದ್ದಿಟ್ಟಿದ್ದ... ಅವಳವಲ್ಲ... ಅಶೋಕನವು.

ಹಾಗೆ ನೋಡಿದರೆ ಅವನು ಯಾವಾಗಲೂ ರಾತ್ರಿ ಮೇಲಂಗಿಯೊಂದನ್ನೇ ತೊಟ್ಟುಕೊಂಡು ಮಲಗುತ್ತಿದ್ದ... ಆದರೆ ಪ್ರಿನ್ಸಿಪಾಲರು ತೀಕ್ಷ್ಣ ಬೆಳಕಿನಲ್ಲಿ ನಿಲ್ಲಿಸಿ ರಾತ್ರಿಯ ಘಟನೆಯ ಬಗ್ಗೆ ಅವನನ್ನು ಕೇಳಿದಾಗ ಮೊಟ್ಟ ಮೊದಲ ಬಾರಿ ಯಾರೋ ತನ್ನ ಮೈಮೇಲಿನ ಅಂಗಿಯನ್ನು ಕಿತ್ತೆಳೆದು ನಿಲ್ಲಿಸಿದಂತಾಗಿ ಚಳಿಯಿಂದ ನಾಚಿಕೆಯಿಂದ ಕಂಪಿಸತೊಡಗಿದ್ದ.

ಅವನು ಮಾತನಾಡಲು ಪ್ರಯತ್ನಿಸಿದ್ದ. ಆದರೆ ಸ್ವರ ನಡುಗಿ ತೊದಲಲಾರಂಭಿಸಿದ್ದ. ಆ ಹೊತ್ತಿನಿಂದ ಕಳೆದ ಈ ಐದು ವರುಷಗಳ ವರೆಗೆ ಮಾತನಾಡುವಾಗಲೆಲ್ಲ ತೊದಲುತ್ತಿದ್ದ.

ಪ್ರಿನ್ಸಿಪಾಲರು ಅವನ ಕೈಗೆ ಕಾಗದ ಕೊಟ್ಟು ಅವನನ್ನು ಕೋಣೆಯಿಂದ ಹೊರಗೆ ತಳ್ಳಿದ್ದರು. ಆದರೆ ಹೊರಗೆ ಹಾಸ್ಟೆಲ್ಲಿನ ಹುಡುಗರು ನಿಂತ ನೀರಿನಂತೆ ಕದಲದೆ ನಿಂತವರು ಅವನನ್ನು ನೋಡಿ ಅವನ ಹಿಂದೆ ಮಹಾಪೂರದಂತೆ ರಭಸದಿಂದ ಬೆನ್ನಟ್ಟಿದ್ದರು,

ಅವರು ಗಟ್ಟಿಯಾಗಿ ನಗುತ್ತ, ಸಿಳ್ಳು ಹಾಕುತ್ತ ಅವನ ಹಿಂದೆ ಹಿಂದೆ ಓಡುತ್ತಿದ್ದರು.

ಧ್ವನಿಗಳು ಅವನ ದೇಹಕ್ಕೆ ಅಪ್ಪಳಿಸಿದ್ದವು. ಅವನ ತಲೆಯಲ್ಲಿ ತೀಕ್ಷ್ಣವಾದ ನೋವು ಪ್ರಾರಂಭವಾಯಿತು. ಅವನ ಹಣೆಯಲ್ಲಿಯ ನರಗಳೆಲ್ಲ ಹರಿದುಹೋದಂತೆ ಅನಿಸತೊಡಗಿತು.

ಆ ದಿನ— ನಂತರ ಅನೇಕ ಸಲ ಅವನು ಕುಳಿತಿರುವಾಗಲೆಲ್ಲ ತನ್ನ ಹಣೆಯ ಮೇಲೆ ಕೈಯಾಡಿಸಿಕೊಳ್ಳುತ್ತಿದ್ದ. ತನ್ನ ಹಣೆಯ ಒಂದು ನರ ಕಿತ್ತು ಹಣೆಯಿಂದ ಹೊರಗೆ ಬಂದಿದೆಯೋ ಏನೊ ಎನ್ನುವಂತೆ ಎಷ್ಟೋ ಸಲ ತನ್ನ ಹಣೆಯನ್ನು ಸವರುತ್ತ ನೋಡಿಕೊಳ್ಳುತ್ತಿದ್ದ. ಅವನ ತಂದೆ ಬಹುಶಃ ಯಾವದೋ ಡಾಕ್ಟರರ ಕಡೆಗೆ ಕರೆದೊಯ್ದಿದ್ದರು—ಆ ಡಾಕ್ಟರರು ಏನಾದರೋ ಕೆಂಪು ಬಣ್ಣದ ಗುಳಿಗೆಗಳನ್ನು ತಿನ್ನಿಸಿ ಎಷ್ಟು ದಿನ ಮೂರ್ಛೆ ತಪ್ಪಿಸಿದ್ದರೋ ಏನೋ, ಅವನಿಗೆ ಒಂದು ಥರಾ ಯಾವಾಗಲೂ ಮೂರ್ಛಾವಸ್ಥೆಯಲ್ಲಿದಂತೆಯೇ ಅನ್ನಿಸುತ್ತಿತ್ತು.

ಇಲ್ಲಿ, ಸುನೀಲನಿಗೆ ಮರೆತುಹೋದ ಮಾತ ನೆನಪಿಗೆ ಬಂದಂತೆ ಏನೋ ನೆನಪಾಯ್ತು— ಈ ಮೂರ್ಛಾವಸ್ಥೆಯಲ್ಲಿಯೂ ಅವನಿಗೆ ತನ್ನ ಪ್ರಜ್ಞೆ ಜಾಗ್ರತವಾಗಿರುವಂತೆ ಅನಿಸುತ್ತಿತ್ತು.

ಒಂದು ವೇಳೆ ಸುನೀಲನ ತಂದೆ ತಮ್ಮ ಮನೆಯನ್ನು ಅವನ ಹೆಸರಿಗೆ ಮಾಡುವದಾದರೆ ತರೀಜಾ ಅವನನ್ನು ಮದುವೆಯಾಗುವದಾಗಿ ಆ ದಿನ ಹೇಳಿದ್ದಳು. ಅವನು ತರೀಜಾಳ ಈ ವಿಚಾರದ ಆಳ ಹೊಕ್ಕು ನೋಡಿದ್ದ. "ಇದಾದ ಬಳಿಕ ನೀನು ಈ ಮನೆಯನ್ನು ನಿನ್ನ ಹೆಸರಿಗೇ ಮಾಡಲೂ ಹೇಳಬಹುದಲ್ಲ," ಎಂದು ತರೀಜಾಳನ್ನೇ ಪ್ರಶ್ನಿಸಿದ್ದ.

ಅವನ ತೊದಲುವ ಮಾತುಗಳನ್ನು ಕೇಳಿ ಬಹಳ ಹೊತ್ತು ನಗುತ್ತ ನಿಂತಿದ್ದ ಅವಳು, "ತೊದಲಪ್ಪ, ನಾನು ನಿನಗಿಂತ ಮನೆಯನ್ನು ಬಹಳ ಚನ್ನಾಗಿ ಸಂಭಾಳಿಸುವೆ, ಸಿಂಗರಿಸುವೆ, ಸುಣ್ಣ-ಬಣ್ಣ ಹಚ್ಚಿಸುವೆ," ಎಂದು ಅಂದಿದ್ದಳು.

ಅದಕ್ಕೆ ಸುನೀಲ, "ನೀನು ಯಾವಾಗಲೂ ಎರಡು ನಾಯಿಗಳನ್ನು ಸಾಕಿರುತ್ತಿ. ನಾನು ನಿನ್ನ ಮೂರನೆಯ ನಾಯಿಯಾಗಲಾರೆ," ಎಂದು ಉತ್ತರಿಸಿದ್ದ.

ಆದರೆ ವಿಚಿತ್ರ ವಿಷಯವೊಂದು ನೆನಪಾಗತೊಡಗಿತು. ಕೆಂಪು ಗುಳಿಗೆಗಳನ್ನು ತಿನ್ನಿಸಿ ಮೂರ್ಛೆಗೊಳಿಸಿದ್ದ ಡಾಕ್ಟರರನ್ನು ಎಷ್ಟೋ ದಿನಗಳ ವರೆಗೆ ಪ್ರತಿದಿನ ನೋಡುತ್ತಿದ್ದನು. ಒಂದು ದಿನ ಅಕಸ್ಮಾತ್ತಾಗಿ ಆ ಡಾಕ್ಟರರ ಮುಖ ಬೇರೆ ನಮೂನೆಯ ಮುಖವಾಗಿ ಮಾರ್ಪಟ್ಟಿತ್ತು...ಎಷ್ಟೋ ಹೊತ್ತು ಚಕಿತನಾಗಿ, ಡಾಕ್ಟರರ ಮುಖ ನೋಡುತ್ತಲೇ ಇದ್ದ... ಕೆಲ ದಿನಗಳ ನಂತರ ಅವರ ಚಪ್ಪಟೆಯಾದ ಅಗಲವಾದ ಮೂಗು ಬಹಳ ಉದ್ದವಾದಂತೆ ಕಾಣತೊಡಗಿತು. ತನ್ನನ್ನು ಆ ಡಾಕ್ಟರರ ಬಳಿ ಕರೆದುಕೊಂಡು ಹೋಗದಿದ್ದರೇನೇ ತನಗೆ [illegible] ಎಂದು ತನ್ನ ತಂದೆಗೆ ಹೇಳಿದ್ದ. ಆದರೆ ಅವನ ತಂದೆ [illegible]

ಬೇರೆ ಡಾಕ್ಟರರನ್ನು ಕರೆದು ತಂದಿದ್ದರೂ ಇವನ ದೃಷ್ಟಿಯಲ್ಲಿ ಅವೆಲ್ಲ ಒಬ್ಬ ಡಾಕ್ಟರನೇ ಬೇರೆ ಬೇರೆ ಮುಖವಾಡಗಳಾಗಿದ್ದವು. ಅವರು ಕೊಡುತ್ತಿದ್ದ ಕೆಂಪು, ಹಸಿರು, ಹಳದಿ ಗುಳಿಗೆಗಳು ಕೂಡ ಇವನ ದೃಷ್ಟಿಯಲ್ಲಿ ಮೂಲತಃ ಒಂದೇ ನಮೂನೆಯ ಗುಳಿಗೆಗಳಾಗಿದ್ದವು.

ಒಂದು ದಿನ ಆ ಡಾಕ್ಟರರು ತನ್ನನ್ನು ವಿದ್ಯುತ್ತಿನಿಂದ ಉಪಚರಿಸುವುದಾಗಿ ತನ್ನ ತಂದೆಗೆ ಹೇಳಿದ್ದನ್ನು ಕೇಳಿದ್ದ.

ಆ ಡಾಕ್ಟರರು ಕರೆಂಟ್ ಹಚ್ಚಿ ತನ್ನನ್ನು ಕೊಲ್ಲುವರೆಂದು ತಿಳಿದು ಅಲ್ಲಿಂದ ಓಡಿಬಂದು ತನ್ನ ಕೋಣೆಯಲ್ಲಿ ಒಳಚಿಲಕ ಹಾಕಿಕೊಂಡು ಕುಳಿತುಬಿಟ್ಟ.

ತಾಯಿ ರೊಟ್ಟಿಯನ್ನು ಮಾಡಿ ಬಾಗಿಲು ಬಡಿದು ಕರೆದಿದ್ದಳು—ಆದರೆ ಅವನಿಗೆ ಗೊತ್ತಿತ್ತು—ತಾನು ಬಾಗಿಲು ತೆರೆದರೆ ತಂದೆ ತನ್ನನ್ನು ಹಿಡಿದುಕೊಂಡು ಆ ಡಾಕ್ಟರರ ಕಡೆಗೆ ಒಯ್ಯುವರು—ಆ ಡಾಕ್ಟರರು ಕರೆಂಟ್ ಹಚ್ಚಿ ತನ್ನನ್ನು ಕೊಂದುಬಿಡುವರು.

ಆದ್ದರಿಂದಲೇ ಅವನು ಬಾಗಿಲು ತೆರೆಯಲೇ ಇಲ್ಲ. ಕಬ್ಬಿಣ ಸಳಿಗಳುಳ್ಳ ಕಿಡಕಿಯಿಂದ ಕೈ ಚಾಚಿ ತಾಯಿಯಿಂದ ಊಟ ಇಸಿದುಕೊಂಡಿದ್ದ. ಆದರೆ ಮಾರನೇ ದಿನ, ಆಳಿನಿಂದ ಸ್ವಚ್ಛ ಮಾಡಿಸುವ ಸಲುವಾಗಿ ಕೋಣೆಯ ಬಾಗಿಲನ್ನು ತೆಗೆಯಬೇಕು ಎಂದು ತಾಯಿ ಅಂದಾಗ ಇದೊಂದು ಬರಿ ನೆವ ಎಂದು ಅವನಿಗೆ ಗೊತ್ತಿತ್ತು.

ಅವನ ಹತ್ತಿರವಿದ್ದ ಸಿಗರೇಟುಗಳೆಲ್ಲ ತೀರಿ ಹೋಗಿದ್ದವು. ಅವನ ತಾಯಿ ಅವನಿಗೆ ಸಿಗರೇಟು ತರಿಸಿ ಕೊಟ್ಟಿರಲಿಲ್ಲ; ಬದಲು ಬಾಗಿಲು ತೆರೆದರೆ ಮಾತ್ರ ಸಿಗರೇಟು ಸಿಗುತ್ತವೆ ಎಂದು ಹೇಳುತ್ತಿದ್ದಳು. ಆಗ ಆತ ಕಿಸೆಯಿಂದ ರೊಕ್ಕ ತೆಗೆದು ಸಳಿಗಳುಳ್ಳ ಕಿಡಕಿಯಲ್ಲಿ ಇಟ್ಟು ಮಾರ್ಕೆಟ್‌ನಿಂದ ಸಿಗರೇಟು ತರಲು ಕೆಲಸದವನಿಗೆ ಹೇಳಿದ್ದ. ಅವನು ರೊಕ್ಕ ತೆಗೆದುಕೊಂಡು ಸಿಗರೇಟು ಕೊಂಡು ತಂದುಕೊಡಲಿಲ್ಲ—ಹಾ ಹ ಹ ಹ... ಮೋಸಗಾರ..

ಒಂದು ಅನುಕೂಲವೆಂದರೆ ಬಚ್ಚಲ ಮನೆ ಅವನ ಕೋಣೆಗೆ ಹೊಂದಿಕೊಂಡೇ ಇತ್ತು. ಅವನ ಕೋಣೆಯಲ್ಲಿಯೇ ಅದರ ಬಾಗಿಲಿತ್ತು. ಇಲ್ಲವಾದರೆ ತನ್ನ ಕೋಣೆಯ ಬೀಗವನ್ನು ಕೆಲವು ಸಲ ತೆರೆಯಬೇಕಾದಾಗ ಅವನ ತಂದೆ-ತಾಯಿ ಅವನನ್ನು ಹಿಡಿದು ಒತ್ತಾಯಪೂರ್ವಕವಾಗಿ ಡಾಕ್ಟರರ ಹತ್ತಿರ ಕರೆದೊಯ್ಯುವರೆಂಬ ಭಯ ಅವನಿಗೆ.

ತುಂಬಿದ ಕೆರೆಯಂತಿದ್ದ ಅವನ ಮಿದುಳಿನಲ್ಲಿ ಎಷ್ಟೋ ಧ್ವನಿಗಳು ಮುಳುಗುತ್ತ [illegible]ದಂತೆ ಭಾಸವಾಗತೊಡಗಿತು.

ಕೆಲವು ಸಲ ಯಾವುದೋ ಧ್ವನಿ ಈಸುತ್ತ ದಂಡೆಗೆ ಬಂದು ಕುಳಿತ ಹಾಗೆ...

'ಸುನೀಬಾಬೂ, ಏ ಸುನೀಬಾಬೂ...' ಕಾಶನಿಯ ಈ ಸ್ವರ ಎಲ್ಲಿಂದ ಬಂತೋ ಎಂದು ನಡುಗಿದ.

ಕಾಶನಿ ರಾಮದಾಸ ಅಗಸನ ಮಗಳು. ಅವಳು ಬಂದಾಗೊಮ್ಮೆ ಅವನನ್ನು 'ಸುನೀಬಾಬೂ ಎಂದು ಕರೆಯುತ್ತಿದ್ದಳು. ಅವನು ಯಾವಾಗಲೂ 'ಸುನೀಬಾಬು ಅಲ್ಲ, ಸುನೀಲ ಬಾಬು' ಎಂದು ತಿದ್ದಿ ತಿಳಿಹೇಳಿದಾಗಲೂ ಕಾಶನಿ ಕೊನೆಯ ಅಕ್ಷರ ಎಂದೂ ಉಚ್ಚರಿಸದೆ, 'ಅದನ್ನೇ ಅನ್ನುತ್ತಿದ್ದೇನಲ್ಲ ಸುನೀಬಾಬು,' ಎಂದು ಉತ್ತರಿಸುತ್ತಿದ್ದಳು.

ಆ ದಿನ ಇದೇ ಕಾಶನಿ ಸಳಿಗಳುಳ್ಳ ಕಿಡಕಿಯ ಹತ್ತಿರ ನಿಂತು, ತನ್ನ ಸೆರಗಿನ ಮರೆಯಿಂದ ಹೊರಗೆ ತೆಗೆದ ಸಿಗರೇಟ್ ಡಬ್ಬಿಯನ್ನು ಹಿಡಿದು ಸಾವಕಾಶವಾಗಿ, 'ಸುನೀಬಾಬೂ' ಎಂದು ಮೆಲ್ಲನೆ ಕರೆದಿದ್ದಳು. ಅವನ ಹತ್ತಿರ ಹಣ ತೀರಿ ಹೋಗಿತ್ತು—ಕೋಟಿನ, ಪ್ಯಾಂಟಿನ ಕಿಸೆಗಳನ್ನು ಹುಡುಕಿದಾಗ ಇಪ್ಪತ್ತೈದು ಪೈಸೆ ಮಾತ್ರ ಸಿಕ್ಕಿದ್ದವು. ಆದರೆ ಕಾಶನಿ ಆ ಹಣ ಇಸಿದುಕೊಳ್ಳಲಿಲ್ಲ. ಮಾರನೇ ದಿನ ಮತ್ತೆ ಅವಳು ಸಿಗರೇಟಿನ ಡಬ್ಬಿ ತಂದು ಕಿಡಕಿಯ ಸಳಿಗಳಲ್ಲಿ ಹಿಡಿದಿದ್ದಳು.

[illegible]—ಕಾಶನಿ ಅವನ ಬಟ್ಟೆ ಇಸ್ತ್ರಿ ಮಾಡಿ ತಂದಾಗಲೆಲ್ಲ ಕಿಡಕೀ ಹತ್ತಿರ ನಿಂತು, 'ಸುನೀಬಾಬೂ' ಎಂದು ತಪ್ಪದೆ ಕರೆಯುತ್ತಾಳೆ. ಅವನಿಗೂ ಈಗ ಸುನೀಲಗಿಂತ ಸುನೀಬಾಬೂ ಎನ್ನುವುದೇ ಹೆಚ್ಚು ಪ್ರಿಯ-

ವಾಗಿತ್ತು.

ಹೌದು, ಕಾಶನಿ ಹೇಳಿದ್ದರಿಂದ ಒಂದು ದಿನ ಬಾಗಿಲು ತೆರೆದಿದ್ದ. ಆಕೆ ಒಳಬಂದು ಕೋಣೆಯನ್ನು ಸ್ವಚ್ಛ ಮಾಡಿ ಅವನ ಕೊಳೆಯಾದ ಬಟ್ಟೆ ತೆಗೆದುಕೊಂಡು ಹೋಗಿದ್ದಳು.

ಬಳಿಕ ಎರಡನೆಯ ದಿನ ಅವನ ಬಟ್ಟೆ ಒಗೆದುಕೊಂಡು ಬಂದಿದ್ದಳು. ಅವನು ಬಚ್ಚಲ ಮನೆಯಲ್ಲಿ ಹೋಗಿ ಬಟ್ಟೆ ಬದಲಿಸಿದ್ದ. ಬಚ್ಚಲಮನೆಯ ಬಾಗಿಲು ತೆಗೆದು, 'ಸುನೀಬಾಬೂ ನೀವು ಬಹಳ ಚಂದ ಇರುವಿರಿ,' ಎಂದಿದ್ದಳು.

ಅವನ ತಲೆಯಲ್ಲಿ ಕಾಶನಿಯ ಕಾಜಿನ ಬಳೆಯ ಸಪ್ಪಳ ಕೇಳತೊಡಗಿತು.

ಅವಳು ಕಾಲಲ್ಲಿ ಬೆಳ್ಳಿಯ ಗೆಜ್ಜೆಗಳನ್ನು ಕಟ್ಟುತ್ತಿದ್ದಳು—ನೆನಪು ಸಾವಕಾಶ ಸುಸುಳತೊಡಗಿತು—ಇನ್ನೊಂದು ದಿನ ಕಾಶನಿ ತನ್ನ ಕಾಲಲ್ಲಿ ಮದರಂಗಿ ಹಚ್ಚಿದ್ದೂ ಅವಳ ಕಪ್ಪು ಕಾಲು ಜೋಡು ಪಾರಿವಾಳಗಳಂತೆ ಅವನ ಕೋಣೆಯಲ್ಲಿ ಬಂದದ್ದೂ ನೆನಪಾಯಿತು.

ಅವನು ತನ್ನ ಎರಡೂ ಕೈಗಳಿಂದ ಎರಡು ಪಾರಿವಾಳಗಳನ್ನು ಹಿಡಿದಂತೆ ಮಾಡಿದ್ದ—ಕಾಶನೀ ಮಾತನಾಡದೆ ಅವನ ಮಂಚದ ಮೇಲೆ ಕುಳಿತಿದ್ದಳು—ಅಂದು ಕಾಶನಿ ಅವನ ಕಿವಿಯ ಹತ್ತಿರ ತನ್ನ ಮುಖ ತಂದು, 'ಸುನೀಬಾಬೂ ನೀವು ಬಹಳ ಚಂದ ಇರುವಿರಿ' ಎಂದಿದ್ದಳು.

'ಸುನೀಬಾಬೂ'— 'ಸುನೀಬಾಬೂ'— ಅವನ ತಲೆಯಲ್ಲಿ ಈ ಕರೆ ತುಂಬಿ ಹೋಗಿತ್ತು.

ಅವನು ತನ್ನ ಅಂಗೈಯಿಂದ ಹಣೆ ಮುಟ್ಟಿಕೊಂಡ—ಈ ಕರೆ ಅವನ ಹಣೆಯಿಂದ ರಕ್ತದ ಧಾರೆಯಂತಾಗಿ ಧುಮ್ಮಿಕ್ಕಿ ಹೊರಗೆ ಹರಿಯತೊಡಗಿದಂತೆ ಅನಿಸಿತು.

ತನ್ನ ಅಂಗೈ ನೋಡಿಕೊಂಡ. ಆದರೆ ಕತ್ತಲೆಯಿದ್ದುದ್ದರಿಂದ ಅಂಗೈಗೆ ರಕ್ತ ಹತ್ತಿದೆಯೋ ಇಲ್ಲವೋ ಎಂದು ತಿಳಿಯಲಿಲ್ಲ.

ಹೌದು...ಎಲ್ಲ ಒಂದೊಂದೇ ನೆನಪಾಗತೊಡಗಿದವು—ಅವನ ಮಗ್ಗಲು ಹಾಸಿಗೆಗೆ ರಕ್ತ ಹತ್ತಿತ್ತು. ಕಾಶನಿ ಅವನ ಮಂಚದಿಂದಿಳಿದು ಅವನ ಹಾಸಿಗೆಯ ಮೇಲಿನ ಮಗ್ಗಲುಹಾಸಿಗೆಯನ್ನು ತೆಗೆಯುತ್ತಾ, 'ನಾಳೆ ಅದನ್ನು ಒಗೆದು ತರುತ್ತೇನೆ," ಎಂದು ಹೇಳಿದಳು.

ಮಗ್ಗಲುಹಾಸಿಗೆಗೆ ಹತ್ತಿದ ಈ ಎಲ್ಲ ರಕ್ತ ಹೇಗೆ ಬಂತು ಎಂದು ಅವನು ಕಾಶನಿಯನ್ನು ಕೇಳಿದ. ಕಾಶನಿ ಸೆರಗಿನ ಅಂಚನ್ನು ಬಾಯಲ್ಲಿ ತುರುಕಿಕೊಂಡು ನಗುತ್ತಾ ಮಗ್ಗಲು ಹಾಸಿಗೆಯನ್ನು ಮುದ್ದೆ ಮಾಡಿ ತನ್ನ ಜೊತೆ ಒಯ್ದಳು.

ಕಾಶನಿ ಒಂದು ದಿನ ಬಂದಳು. ಇನ್ನೊಮ್ಮೆ ಬಂದಳು, ಮತ್ತೊಮ್ಮೆ ಬಂದಳು ಆದರೆ ಅವಳು ಏಕೆ ಸತ್ತಳು?

ಅವ್ವನೂ ಹೇಳಿದಳು- ಅಳೂ ಹೇಳಿದ- ಅರಳೀ ಮರದ ಜಹದಂಗಡಿಯವನೂ ಹೇಳಿದ ಕಾಶನಿ ಭಾವಿಯಲ್ಲಿ ಬಿದ್ದು ಸತ್ತಳು ಎಂದು.

ಸುನೀಲನ ಹಣೆಯಲ್ಲಿಯ ನರಗಳು ಉಬ್ಬಿ ಕಂಪಿಸತೊಡಗಿದವು. ಕಾಶನಿ ಮದುವೆಯಾಗದಿದ್ದರೂ ತಾಯಿಯಾಗುವವಳಿದ್ದಳೆಂದು ಜನರು ಮಾತನಾಡತೊಡಗಿದ್ದರು.

ಕಾಶನಿಯ ಮಗು?' ಗಿಡಗಳ ಮಧ್ಯೆ ಕೆಲವು ಒಣಬೀಜ ಬಿದ್ದಿದ್ದವು. ಅವುಗಳ ಪೈಕಿ ಸುನೀಯ ಹಣೆಯಲ್ಲಿ ಕೆಲವು ಹುಟ್ಟಿ ಉರಿಯತೊಡಗಿದವು— ಕಾಶನಿಯ ಮಗು ನನ್ನದಾಗಿತ್ತೆ...? 'ಕಾಶನಿಯ ಮಗು ನನ್ನ... ಮಗು?" ಅವನು ಮತ್ತೆ ಗಲಿಬಿಲಿಗೊಂಡ—ಅವನಿಗೆ ಈ ವಿಚಾರ ಮೊದಲೇ ಏಕೆ ಬರಲಿಲ್ಲ?

ಅಂದು ಬೆಳಿಗ್ಗೆ ಮನೆಯ ಮುಂದಿನ ಬಯಲಲ್ಲಿ ಎಷ್ಟೋ ಮಕ್ಕಳು ಆಡುತ್ತಿದ್ದರು— ಸುನೀಯಲ್ಲಿ ನೆನಪು ಒತ್ತರಿಸಿತು.

ಅವನು ಎಷ್ಟೋ ಹೊತ್ತು ಆಡುತ್ತ ಮಕ್ಕಳ ಹತ್ತಿರ ನಿಂತಿದ್ದ. ಅವರಲ್ಲಿ ಬಿಳಿಯ ಫ್ರಾಕ್ ತೊಟ್ಟ ಮೂರು ವರುಷದ ಒಂದು ಹೆಣ್ಣು ಮಗು ಏರುತ್ತಿರುವ ಬಿಸಿಲಲ್ಲಿ ಒಂದು ಹೂವಿನಂತೆ ಕಾಣಹತ್ತಿತು. ಸುನೀಲ ಆ ಮಗುವನ್ನು ಪ್ರೀತಿಯಿಂದ ತನ್ನ ತೋಳಲ್ಲಿ ಎತ್ತಿಕೊಂಡ—ಅವಳ ಕೂದಲಿಗೆ, ಅವಳ ಹಣೆಗೆ, ಕೈಕಾಲುಗಳಿಗೆ ಮುತ್ತಿಟ್ಟ.

ಅಷ್ಟರಲ್ಲಿ ಎಲ್ಲಿಂದಲೋ ದಪ್ಪನ್ನ ಹೆಣ್ಣುಮಗಳು ಬಂದು ಕೂಗಾಡತೊಡಗಿದಳು— ಬಹುಶಃ ಮಗುವಿನ ತಾಯಿ ಇರಬಹುದು. ಬಳಿಕ

ಎಷ್ಟೋ ಜನ ಕೂಡಿದರು. ಗಾಬರಿಯಿಂದ ಅವನ ಕೈ ನಡುಗಹತ್ತಿದವು. ಆ ಜನ ಸುತ್ತುವರಿದು ಅವನ ಕೈಯಿಂದ ಮಗುವನ್ನು ಕಿತ್ತುಕೊಂಡರು.

ಅವನ ತಾಯಿ ಇದನ್ನು ನೋಡಿ ಅಳುತ್ತಾ ಬಂದು— ಅವನ ತೋಳು ಹಿಡಿದೆಳೆದುಕೊಂಡು ಹೋದಳು. ಅವನ ತಂದೆ ಅವನನ್ನು ಹುಚ್ಚ-ರಾಸ್ಪತ್ರೆಗೆ ಕರೆದುಕೊಂಡು ಹೋಗೋಣ ಎಂದರು.

ಸುನೀಲ ತನ್ನ ಅನಿಸಿಕೆಗಳನ್ನು ಭೇದಿಸಿ ನೋಡ ತೊಡಗಿದ— ಇದು ಬಹುಶಃ ಅವನ ಸುಪ್ತ ಚೇತನದಲ್ಲವಾಗಿದ್ದ ತನ್ನ ಮಗುವಿನ ಯೋಚನೆ-ಯಿಂದಾಗಿತ್ತು. ಕಾಶನಿ ಬದುಕಿದ್ದರೆ ಆ ಮಗುವೂ ಈ ಬಿಳಿಯ ಫ್ರಾಕಿನ ಮಗುವಿನಂತಿರು ತ್ತಿತ್ತು... ಕಾಶನೀ ಸತ್ತದ್ದೇಕೆ ?

ಆ ಭಾವಿ ?

ಹಳೆಯ ಕೋಟೆಯ ಭಾವಿಯ ಹತ್ತಿರ ಹೋಗಿ ನಿಲ್ಲುವ ಅದೇ ಕಾಲುಹಾದಿ ಸುನೀಲನ ಪದತಲದಲ್ಲಿತ್ತು. ಅವನು ಭಾವಿಯತ್ತ ನೋಡ ತೊಡಗಿದ.

ಕಾಶನಿ ಕೋಟೆಯ ಹಳೆಯ ಭಾವಿಯಲ್ಲಿ ಬಿದ್ದಳು ಎಂದು ಜನರು ಮಾತನಾಡುತ್ತಿದ್ದರು. ಹಾಗಾದರೆ ಇದು ಅದೇ ಕೋಟೆಯ ಹಳೆಯ ಭಾವಿ ಇರಬಹುದೇ ? ಅಥವಾ ?

ಸುನೀಲ ಸುತ್ತಲೂ ನೋಡಿದ. ಇಲ್ಲಿ ಕೇವಲ ಗಿಡಗಳಿದ್ದವು ಮತ್ತು ಅವುಗಳಿಂದುದುರುವ ಎಲೆ ಗಳು... ಈ ಕೋಟೆಯಲ್ಲಿಯ ಹಾಳು ಭಾವಿ... ಅವನ ಮನೆಯ ಹಿಂಭಾಗದಲ್ಲಿಯ ಆ ಕೋಟೆಯ ಆ ದಾರಿಯಲ್ಲೆ ಬಹುಶಃ ಆ ಹಾಳು ಭಾವಿ-ಇದ್ದಿರಬೇಕೆಂದೆನಿಸಿತು.

ಕೆಲವು ಕ್ಷಣಗಳವರೆಗೆ ಅವನ ನರಗಳೆಲ್ಲ ಶಾಂತವಾಗಿ ನಿದ್ರಿಸಿದ್ದವು. ತನ್ನ ಕೋಣೆ ಯಲ್ಲಿ ಇಷ್ಟು ದಿನ ಅವನನುಭವಿಸಿದ ತಳಮಳಗ ಚಲನವಲನ... ನಿಜವಾಗಿ ಕೋಟೆಯ ಭಾವಿಯ ರಸ್ತೆಯನ್ನು ಹುಡುಕುವದಕ್ಕಾಗಿಯೇ ಇದ್ದಿರ ಬೇಕು.

ಕೇವಲ ಏಳುನೂರಾ ಇಪ್ಪತ್ತು ಹೆಜ್ಜೆಗಳ ಅಂತರದಲ್ಲಿ ಇತ್ತು. ಈ ರಸ್ತೆ... ಇಂದು ಅವನು ತನ್ನ ಪ್ರತಿ ಹೆಜ್ಜೆಯನ್ನೆಣಿಸಿದ್ದ— ಏಳುನೂರಾ ಇಪ್ಪತ್ತರ ಎಣಿಕೆ ಪೂರ್ಣವಾಗಿತ್ತು– ತಾನು ಮೊದಲೇ ಇಲ್ಲಿ ಯಾಕೆ ಬರಲಿಲ್ಲ ಎಂದು ದುಃಖಿಸಿದ.

ಆದ್ದರಿಂದಲೇ ಪ್ರತಿರಾತ್ರಿ ಹೊರಗಿನ ಗೋಡೆಯ ಕಡೆಯಿಂದ ಯಾವುದೊ ಧ್ವನಿ ಬರು-ತ್ತಿತ್ತು. ಯಾರ ಧ್ವನಿಯೆಂದು ತಿಳಿಯುತ್ತಿರ-ಲಿಲ್ಲ. ಅವನು ಇದನ್ನು ಗುರುತಿಸಿದ್ದ. ದಿನವೂ ಕಾಶನಿಯೇ ಅವನನ್ನು ಕರೆಯುತ್ತಿದ್ದಳು– 'ಸುನೀಬಾಬೂ'.

ಅವನು ಮುಂದೆ ಹೋಗಿ ಭಾವಿಯಲ್ಲಿ ಇಣು-ಕಿದ. "ಕಾಶನಿಯ ಕಾಜಿನ ಬಳೆಯ ಛನ್ ಛನ್ ಶಬ್ದ ಕೇಳತೊಡಗಿತು. ದೊಡ್ಡ ಧ್ವನಿಯಿಂದ "ಕಾಶನೀ" ಎಂದು ಕೂಗಿದ.

ಎಷ್ಟೋ ವರ್ಷಗಳ ನಂತರ ಮೊಟ್ಟ ಮೊದಲು ಈ ಶಬ್ದವನ್ನು ತೊದಲದೆ ಉಚ್ಚರಿಸಿದ್ದ... ಅವನಿಗೆ ಸಹಜವಾಗಿ ನಗೆ ಬಂದಿತು. ಜೊತೆಗೆ ಒಂದು ಬಗೆಯ ವಿಚಿತ್ರ ಶಾಂತಿ. ಬಹಳ ದಿನಗಳ ನಂತರ ಅವನು ತನ್ನ ಮನೆಗೆ ಬಂದಂತೆ...ಮನೆ ಯಲ್ಲಿ ಹೆಂಡತಿ– ಮಕ್ಕಳು ದಾರಿ ನೋಡುತ್ತಿ-ದ್ದಂತೆ...

ತನ್ನ ಎರಡೂ ತೋಳುಗಳನ್ನು ಕಾಶನಿಯ ಕಡೆಗೆ ಚಾಚಿದ... ಮನುಷ್ಯನೊಬ್ಬ ಮುಗಿಲು ತುಂಬುವಂತೆ ನಕ್ಕುದನ್ನು ಕೇಳಿ ಅಕ್ಕಪಕ್ಕ-ದಲ್ಲಿದ್ದ ಗಿಡಗಳು ಕಂಪಿಸತೊಡಗಿದವು. ✡



ಮನುಷ್ಯ ಬದುಕುವುದಕ್ಕಾಗಿ ಹುಟ್ಟಿರುತ್ತಾನೆಯೇ ಹೊರತು, ಬದುಕಿಗಾಗಿ ತಯಾರಿ ಮಾಡಿಕೊಳ್ಳುವುದಕ್ಕಾಗಿಯಲ್ಲ.

– ಬೋರಿಸ್ ಪಾಸ್ತರ್‌ನ್ಯಾಕ್
('ಡಾ. ಜಿವಾಗೋ' ಕಾದಂಬರಿಯಲ್ಲಿ)

# ಝೇಂಕಾರ ಪಕ್ಷಿಗಳು

ಟಿ. ಎಂ. ಸುಬ್ಬರಾಯ

ಒಂದು ಭಾಗದಲ್ಲಿ ವಾಸಿಸುವ ಪಕ್ಷಿಸಂಕುಲ ಇನ್ನೊಂದೆಡೆ ವಾಸಿಸುವ ಸಂಕುಲಕ್ಕಿಂತ ತುಸು-ವಾದರೂ ಭಿನ್ನವಾಗಿರುತ್ತದೆ. ಈ ಅಂತರವನ್ನು ಗಮನಿಸಿ ಪಕ್ಷಿತಜ್ಞರು ಪಕ್ಷಿಗಳ ವಾಸಸ್ಥಾನವನ್ನು ಆರು ಭಾಗಗಳಲ್ಲಿ ವಿಂಗಡಿಸಿದ್ದಾರೆ. ನ್ಯೂಜಿಲೆಂಡ್, ಆಸ್ಟ್ರೇಲಿಯ ಹಾಗೂ ಟಾಸ್ಮಾನಿಯಾ ವಿಭಾಗ, ದಕ್ಷಿಣ ಅಮೇರಿಕ, ಭಾರತ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳು, ಆಫ್ರಿಕ ಮತ್ತು ಉತ್ತರ ಅಮೇರಿಕ, ಯುರೋಪ್ ಮತ್ತು ಏಶಿಯದ ಉತ್ತರ ಭಾಗವನ್ನೊಳಗೊಂಡ ಪ್ಯಾಲಿಯಾಟ್ರಿಕ್ ಪ್ರದೇಶ. ಹಮಿಂಗ್ ಬರ್ಡ್ಸ್ ಅಥವಾ ಝೇಂಕಾರ ಪಕ್ಷಿಗಳು ಈ ಅಪರೂಪದ ಗುಂಪಿಗೆ ಸೇರುತ್ತವೆ. ದಕ್ಷಿಣ ಅಮೇರಿಕ, ಮೆಕ್ಸಿಕೋ, ಉತ್ತರ ಅಮೇರಿಕ ಮತ್ತು ವೆಸ್ಟ್ ಇಂಡೀಜ್ ಗಳಲ್ಲಿ ಮಾತ್ರ ಇವುಗಳು ಕಾಣಸಿಗುತ್ತವೆ.

ಇವು ಅತ್ಯಂತ ಪುಟ್ಟ ಗಾತ್ರದ ಹಕ್ಕಿಗಳು. ಕಣ್ಣು ಕೋರೈಸುವ ಕಾಮನಬಿಲ್ಲಿನಂಥ ಮೈ ಬಣ್ಣದಿಂದ ಝೇಂಕಾರ ಪಕ್ಷಿಗಳು ತಮ್ಮ ಮೈ ಬಣ್ಣದ ಹೊಳಪಿಗಾಗಿ ಹೆಸರಾಗಿವೆ. ಕೆಲವು ತೆರನ ಝೇಂಕಾರ ಪಕ್ಷಿಗಳ ಗಂಡುಗಳ ತಲೆಯ ಮೇಲೆ ವಿಚಿತ್ರ ರೀತಿಯ ಜುಟ್ಟೂ ಕತ್ತಿನಲ್ಲಿ ಬಣ್ಣಬಣ್ಣದ ಪುಕ್ಕಗಳ ಗುಚ್ಛಗಳೂ ಬಾಲದಲ್ಲಿ ಉದ್ದನೆಯ ರೆಕ್ಕೆಗಳೂ ಇರುವುದುಂಟು. ಇವೆಲ್ಲ ಅಲಂಕಾರಗಳಿಂದ ಈ ಪಕ್ಷಿಗಳು ಪಕ್ಷಿ ಜಗತ್ತಿನ ರತ್ನಗಳೆನ್ನಿಸಿಕೊಂಡಿವೆ.

ಝೇಂಕಾರ ಪಕ್ಷಿಗಳಲ್ಲಿ ಒಟ್ಟು ಐನೂರು ಬಗೆಗಳಿವೆ ಎಂಬುದಾಗಿ ಪಕ್ಷಿವೀಕ್ಷಕರು ಗುರುತಿಸಿದ್ದಾರೆ. ಸನ್ ಬರ್ಡ್ಸ್ ಅಥವಾ ಸೂರಕ್ಕಿಗಳು, ಬರ್ಡ್ಸ್ ಆಫ್ ಪ್ಯಾರಡೈಸ್ ಅಥವಾ ಸಗ್ಗದಕ್ಕಿಗಳು, ಬ್ರೆಜಿಲಿನ ಗೋಮೇಧಿಕ, ಪದ್ಮರಾಗ, ಎನ್ವಿಫರ್ ಮುಂತಾದವು ಅವುಗಳಲ್ಲಿ ಮುಖ್ಯವಾದುವು.

ಝೇಂಕಾರ ಪಕ್ಷಿಗಳಲ್ಲೆಲ್ಲ ತೀರಾ ಪುಟ್ಟ



ಹಾರಾಟದಲ್ಲೊಂದು ಚಿತ್ರ

ಪಕ್ಷಿಯೆಂದರೆ ಕ್ಯೂಬಾದ ಜೇನು ಝೇಂಕಾರ ಪಕ್ಷಿ. ಇದರ ಉದ್ದ ಕೇವಲ ೬.೩೫ ಸೆಂ. ಮಿ. ತೂಕ ಕೇವಲ ಎರಡು ಗ್ರಾಮುಗಳಷ್ಟು.

ಅತ್ಯಂತ ದೊಡ್ಡ ಗಾತ್ರದ ಝೇಂಕಾರ ಪಕ್ಷಿಗಳನ್ನು ಇಕ್ವೆಡೋರ್ ಹಾಗೂ ಚಿಲಿ ದೇಶಗಳಲ್ಲಿ ನೋಡಬಹುದು. ದೈತ್ಯ ಝೇಂಕಾರದ ಉದ್ದ ೨೧. ೫೦ ಸೆಂ. ಮಿ. ತೂಕ ಸುಮಾರು ಇಪ್ಪತ್ತು ಗ್ರಾಮುಗಳಷ್ಟು. ಆ್ಯಂಡೀಜ್ ಪರ್ವತ ಶ್ರೇಣಿಯಲ್ಲಿ ವಾಸಿಸುವ ದೊಡ್ಡ ಗಾತ್ರದ ಪಟಗೋನಿಯಾ ಗ್ಯಾಸ್ ಎಂಬ ಜಾತಿಪ್ರಭೇದದ ಝೇಂಕಾರ ಪಕ್ಷಿಗಳು ೮ ಇಂಚುಗಳಷ್ಟು ಉದ್ದವಾಗಿರುತ್ತವೆ.

ಝೇಂಕಾರ ಪಕ್ಷಿಗಳ ಬಣ್ಣ ಹಲವಾರು ಕಪ್ಪು, ಕಂದು, ಹಸಿರು ಬಣ್ಣಗಳ ಝೇಂಕಾರ ಪಕ್ಷಿಗಳೂ ಇವೆ. ಕತ್ತು, ಹಣೆ, ನೆತ್ತಿ, ಪಾರ್ಶ್ವ, ಬೆನ್ನು ಮೊದಲಾದೆಡೆ ಮಿರುಗುವ ಹಸಿರನ್ನೋ, ನೀಲಿಯನ್ನೋ ಬಂಗಾರದ ಬಣ್ಣವನ್ನೊ ಇವುಗಳ ಮೇಲೆ ಕಾಣಬಹುದಾಗಿದೆ. ಇವುಗಳ ಕೊಕ್ಕು ಚೂಪು ಹಾಗೂ ತೆಳುವಾದ ಕೊಸ್ಟಾರಿಕ ಹಾಗೂ ಇಕ್ವೆಡೋರಿನಲ್ಲಿಯುವಕ್ಕೆ ಬಿಲ್ಲಿನಂತೆ ಬಾಗಿದ ಕೊಕ್ಕಿವೆ. ದೇಹದ ಉದ್ದಕ್ಕಿಂತ ಹೆಚ್ಚು ಉದ್ದವಾದ ಕೊಕ್ಕು ಇರುವ ದಕ್ಷಿಣ ಅಮೇರಿಕದಲ್ಲಿ ವಾಸಿಸುವ ಝೇಂಕಾರ ಪಕ್ಷಿಗಳಿಗೆ 'ಕತ್ತಿಕೊಕ್ಕಿನ ಝೇಂಕಾರ' ಎಂದೇ



ವಿಶ್ರಮಿಸಿದಾಗ



ಸಾಕಿದ ಝೇಂಕಾರ ಪಕ್ಷಿಗಳು

ಕರೆಯುತ್ತಾರೆ. ಈ ಹಕ್ಕಿಗಳ ಇನ್ನೊಂದು ವಿಚಿತ್ರ ಲಕ್ಷಣವೆಂದರೆ ನಾಲಿಗೆಯನ್ನು ಕೊಕ್ಕಿಗಿಂತ ಮುಂದಕ್ಕೆ ಚಾಚುವ ಸಾಮರ್ಥ್ಯ. ವೆಸ್ಟ್ ಇಂಡೀಸಿನ ದ್ವೀಪಸಮೂಹದಲ್ಲಿ ವಾಸಿಸುವ ಈ ಜಾತಿಯ ಹಕ್ಕಿಗಳಲ್ಲಿ ಕೆಲವಕ್ಕೆ ನಳಿಕೆಯಂತಹ ನಾಲಗೆಯಿದೆ. ಇನ್ನು ಕೆಲವು ಪಕ್ಷಿಗಳಿಗೆ ಕುಂಚದಂತಿರುವ ನಾಲಗೆಯಿದೆ.

ಝೇಂಕಾರ ಪಕ್ಷಿಗಳು ತಮ್ಮ ರೆಕ್ಕೆಗಳನ್ನು ಅತ್ಯಂತ ತ್ವರಿತ ಗತಿಯಲ್ಲಿ ಬಡಿಯುತ್ತವೆ. ಅವುಗಳ ಬಡಿತ ಒಂದು ಸೆಕೆಂಡಿಗೆ ಎಂಬತ್ತು ಬಾರಿ!

ಬಹುವೇಗವಾಗಿ ಹಾರಬಲ್ಲ ಶಕ್ತಿಯನ್ನೂ ಪಡೆದಿರುವ ಝೇಂಕಾರ ಪಕ್ಷಿಗಳು ತಮ್ಮ ಹಾರಾಟದ ವೇಳೆ ಪಟಪಟನೆ ರೆಕ್ಕೆ ಬಡಿದು ಉಂಟುಮಾಡುವ ಶಬ್ದದಿಂದಾಗಿ ಅದಕ್ಕೆ ಆ ಹೆಸರು ಬಂದಿದೆ. ಇವುಗಳ ಹಾರಾಟದ ವೇಗ ಎಷ್ಟು ಗೊತ್ತೇ? ಗಂಟೆಗೆ ನಲವತ್ತೆಂಟು ಕಿಲೋಮೀಟರುಗಳಷ್ಟು!

ಝೇಂಕಾರ ಪಕ್ಷಿಗಳ ಅತ್ಯಂತ ಸೋಜಿಗದ ಲಕ್ಷಣವೆಂದರೆ ಹಾರಾಡುತ್ತಿರುವಾಗ ಹಠಾತ್ತನೆ ಆಕಾಶದಲ್ಲಿ ಸ್ಥಿರವಾಗಿ ರೆಕ್ಕೆ ಬಡಿಯುತ್ತ ನಿಲ್ಲುವ ಸಾಮರ್ಥ್ಯ ಮತ್ತು ಮೇಲಕ್ಕೂ ಕೆಳಕ್ಕೂ ಚಲಿಸುವುದಲ್ಲದೆ ಹಿಮ್ಮುಖವಾಗಿಯೂ ಹಾರಬಲ್ಲ ಯೋಗ್ಯತೆ! ಈ ಹಕ್ಕಿಗಳಿಗೆ ಬಲಿಷ್ಠವಾದ ರೆಕ್ಕೆ ಸ್ನಾಯುಗಳಿರುವುದೂ, ಎದೆ ಮೂಳೆಯಲ್ಲಿ ಆಳವಾದ ಹಾಗೂ ದೃಢವಾದ ಕೀಲು ಇರುವುದೂ ರೆಕ್ಕೆಯ ಮೂಳೆಗಳು ಭುಜದ ಮೂಲಕ

ವಿಚಿತ್ರ ರೀತಿಯ ತಿರುಪು ಕೀಲಿನಿಂದ ಸೇರಿಕೊಂಡಿರುವುದೂ ಅವುಗಳ ಹಾರಾಟದ ನಿಪುಣತೆಗೆ ಕಾರಣ. ಇವುಗಳ ಕಾಲು ತುಂಬಾ ಚಿಕ್ಕದು; ದುರ್ಬಲ ಕೂಡ. ಈ ಕಾರಣದಿಂದಾಗಿ ಇವುಗಳ ಪ್ರಯಾಣದ ಮಾಧ್ಯಮ ಹಾರಾಟವೇ ಹೊರತು ನಡೆದಾಟವಲ್ಲ. ಇವು ಶಕ್ತಿಸಂಚಯ ಮಾಡಿಕೊಳ್ಳುವುದು ಮಧುವಿನಿಂದ, ಕೀಟಗಳಿಂದ. ಗಿಡ ಮರಗಳ ಕಾಂಡಗಳಿಂದ ಒಸರುವ ರಸವನ್ನೂ ಇವು ಹೀರುವುದುಂಟು.

ಝೇಂಕಾರ ಪಕ್ಷಿಗಳು ಗಾತ್ರಕ್ಕೆ ಹೋಲಿಸಿದರೆ ಇತರ ಪಕ್ಷಿಗಳಿಗಿಂತ ಹೆಚ್ಚು ಆಹಾರ ಸೇವಿಸುತ್ತವೆ. ಜಠರದ ಕೆಳಗೆ ಕೊಬ್ಬಿನ ಒಂದು ಪದರ ನಿರ್ಮಿಸಿ ಅಲ್ಲಿ ಅದನ್ನು ಸಂಗ್ರಹಿಸಿಡುವ ಜಾಣತನವೂ ಇವುಗಳಿಗಿದೆ.

ಕ್ಷೀಣ ಧ್ವನಿಯ ಝೇಂಕಾರ ಪಕ್ಷಿಗಳಲ್ಲಿ ಹಲವು ಬಹುಪತ್ನೀಕ ಪಕ್ಷಿಗಳು. ದಕ್ಷಿಣ ಅಮೇರಿಕದ ಉತ್ತರ ಭಾಗದಲ್ಲಿ ಕಾಣಸಿಗುವ ನೀಲಿ ಕಿವಿಯ ಝೇಂಕಾರ ಪಕ್ಷಿಗಳು ಮಾತ್ರ ಏಕಪತ್ನೀವ್ರತಸ್ಥವಾದವುಗಳು. ಹೆಣ್ಣು ಒಂದು ಬಾರಿ ಗರ್ಭಧರಿಸಿದರೆ ಎರಡು ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಯ ಬಣ್ಣ ಅಚ್ಚ ಬಿಳಿ. ಇಪ್ಪತ್ತು ದಿನಗಳಲ್ಲಿ ಮೊಟ್ಟೆ ಒಡೆದು ಮರಿ ಹೊರಬರುತ್ತದೆ.

ಈ ಹಕ್ಕಿಗಳ ವರ್ಣವೈವಿಧ್ಯ ಎಷ್ಟಿದೆಯೆಂದರೆ ಹಿಂದೆ ಇವುಗಳ ಚರ್ಮದಿಂದ ಆಭರಣಗಳನ್ನೂ ತಯಾರಿಸುತ್ತಿದ್ದರಂತೆ. ಹತ್ತೊಂಭತ್ತನೆಯ ಶತಮಾನದಲ್ಲಿ ವೆಸ್ಟ್ ಇಂಡೀಸ್, ಕೊಲಂಬಿಯ ಮುಂತಾದೆಡೆಗಳಿಂದ ಇವುಗಳ ಚರ್ಮ ಯುರೋಪಿಗೆ ಲಕ್ಷಾಂತರ ಸಂಖ್ಯೆಯಲ್ಲಿ ರಫ್ತಾಗುತ್ತಿತ್ತು. ಈಗ ಈ ವ್ಯಾಪಾರ ನಿಂತು ಹೋಗಿದೆ. ✡



## ಪರಿವರ್ತನೆ

ಮೂವರು ಸ್ನೇಹಿತರು ತಮ್ಮ ತಮ್ಮಲ್ಲೇ ಯಾರು ಎತ್ತರವಾದ ಕಟ್ಟಡವನ್ನು ನೋಡಿರುವಿರಿ? ಎಂದು ಸವಾಲ್ ಹಾಕಿದರು.

ಮೊದಲನೆಯವ ಹೇಳಿದ: "ನನ್ನ ತಂದೆಯವರು ಕಟ್ಟಿಸಿದ ಕಟ್ಟ ಅತಿ ದೊಡ್ಡದು. ಅದು ಒಂದು ಸಲ ಬಿರುಕು ಬಿಟ್ಟಾಗ ಮೇಲಿನಿಂದ ಬಿದ್ದ ಒಂದು ಇಟ್ಟಿಗೆ ಕೆಳಕ್ಕೆ ತಲುಪಲು ಹತ್ತು ವರ್ಷ ಹಿಡಿಯಿತು."

"ಇದೇನೂ ಅಷ್ಟು ದೊಡ್ಡದಲ್ಲ. ನನ್ನ ಅಜ್ಜ ಕಟ್ಟಿಸಿದ ಕಟ್ಟಡ ಇದಕ್ಕಿಂತಲೂ ಎತ್ತರವಾದದ್ದು. ಒಂದು ಸಾರಿ ಮೇಲಿನಿಂದ ಒಂದು ಮಗು ಕೆಳಕ್ಕೆ ಬಿತ್ತು. ಅದು ನೆಲ ಮುಟ್ಟುವಾಗ ವಯಸ್ಸಾದ ಮುದುಕಿಯಾಗಿತ್ತು.'' ಎರಡನೆಯವ ಹೇಳಿದ.

''ನೀನು ಇದಕ್ಕಿಂತಲೂ ಎತ್ತರವಾದ ಕಟ್ಟಡವನ್ನು ನೋಡಿಲ್ಲವೆ!'' ಎಂದು ಉಳಿದ ಇಬ್ಬರು ಪ್ರಶ್ನಿಸಿದರು.

ಮೂರನೆಯವ ಉಳಿದವರಿಗಿಂತ ತಾನೇನು ಕಡಿಮೆ ಎಂಬ ಧ್ವನಿಯಲ್ಲಿ ಹೇಳಿದ: "ನಮ್ಮ ತಂದೆ ಮತ್ತು ಅಜ್ಜಂದಿರ ಕಟ್ಟಡಗಳು ಅಷ್ಟು ಎತ್ತರವಲ್ಲ. ಆದರೆ ನಮ್ಮ ನೆಂಟರ ಒಂದು ಕಟ್ಟಡ ಬಹಳ ಎತ್ತರವಾದದ್ದು. ಒಮ್ಮೆ ಆ ಕಟ್ಟಡದ ಮೇಲಿನಿಂದ ಬಿದ್ದ ಒಂದು ಕೋತಿ ನೆಲ ತಲುಪಿದಾಗ ಮನುಷ್ಯನಾಗಿತ್ತು.''

—ವಾಸುದೇವ



### ಅನುಭವ

ಮದುವೆಯಾದ ನಂತರ ನೌಕರಿ ಬಿಟ್ಟು ಗಂಡನ ಮನೆಯಲ್ಲಿದ್ದ ತರುಣಿಯೊಬ್ಬಳು ಹೊಸದಾಗಿ ಬಂದ ಸಿನಿಮಾ ನೋಡಲು ಹೋಗಿದ್ದಳು. ಟಿಕೆಟ್ ಕೊಳ್ಳುವಾಗ ತುಂಟ ಹುಡುಗರು ತನ್ನ ಮೈಮೇಲೆ ಕೈ ಹಾಕಿದ ವಿಷಯವನ್ನು ಮನೆಗೆ ಬಂದು ತನ್ನ ಗಂಡನಿಗೆ ವರದಿ ಮಾಡಿದಳು. ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸದೇ ಮೌನವಾಗಿದ್ದ ತನ್ನ ಗಂಡನಿಗೆ, "ಇದೇನು ಮಹಾ ವಿಷಯ? ನಾನು ಕೆಲಸದಲ್ಲಿದ್ದಾಗ ನನ್ನ ಮೇಲಧಿಕಾರಿಗಳು ಕೂಡ ಇಂಥ ಕೆಲಸ ಮಾಡುತ್ತಿದ್ದರು, ಇದೆಲ್ಲಾ ನನಗೆ ಅನುಭವವಿದೆ, ನೀವೇಕೆ ಯೋಚನೆ ಮಾಡ್ತೀರಿ ಬಿಡಿ,'' ಎಂದಳು.

—ಎಸ್. ಸುಬ್ಬರಾವ್

### ಪರೀಕ್ಷೆ ಮಾಡು

ತಿಂಗಳುಗಟ್ಟಲೆ ಹಾಸಿಗೆ ಹಿಡಿದು ಹಣ್ಣಾದ ಹೆಂಡತಿ ತನ್ನ ಗಂಡನನ್ನು ಮತ್ತೆ ಕೇಳಿದಳು: "ರೀ— ನಾ ಸತ್ತ ನಂತರ ನೀವು ಇನ್ನೊಂದು ಮದುವೆ ಆಗೋದಿಲ್ಲ ತಾನೆ? ನನ್ನಾಣೆಯಾಗಿಯೂ...?" "ಛೆ ಛೆ ಛೆ ಪ್ರತಿ ದಿನಾನೂ ಅದೇ ಪ್ರಶ್ನೆ! ನೀನು ಪರೀಕ್ಷೆ ಮಾಡಿಯಾದರೂ ನೋಡು ಅಂತ ಎಷ್ಟು ಸಲ ಎಂದ ಗಂಡ, ಹೇಳಿಲ್ಲ?''

### ನನ್ನಂತೆ ನೀನು

ಮಗು: ಅಪ್ಪಾ ಟ್ಯೂಬ್ ಲೈಟನಲ್ಲಿ ಬೆಳಕು ಹೇಗೆ ಬರುತ್ತದೆ?

ತಂದೆ: ಏನೋ ಮಗು. ನನಗಷ್ಟು ಸರಿಯಾಗಿ ಗೊತ್ತಿಲ್ಲ.

ಮಗು: ಅಪ್ಪಾ ರೈಲು ಹೇಗೆ ಮುನ್ನಡೆಯುತ್ತದೆ?

ತಂದೆ: ನೋಡು ಮರಿ, ನಾನು ಓದಿದ್ದು ಆರ್ಟ್ಸ್. ಹೀಗಾಗಿ ನಾನು ಸೈನ್ಸಿನ ಕಡೆ ಅಷ್ಟು ಲಕ್ಷ್ಯ ಹರಿಸಿಲ್ಲ.

ಮಗು: ಹೋಗ್ಲಿ ಬಿಡು ಅಪ್ಪ ಸುಮ್ನೆ ಯಾಕೆ ತೊಂದ್ರೆ ನಿಮಗೆ.

ತಂದೆ: ಛೆ ಛೆ ಕೇಳು ಮಗು, ನಿನಗೆ ಗೊತ್ತಿರಲಾರದ್ದನ್ನು ಕೇಳಿ ತಿಳಿದುಕೊಳ್ಳದಿದ್ದರೆ ನಮ್ಮಂತೆ ನೀನು ಆಗೋದೆಂದು?

### ಗಾಯದ ಕಾರಣ?

ಕೈಗೆ ಮುಖಕ್ಕೆ ಬ್ಯಾಂಡೇಜು ಬಿಗಿಸಿಕೊಂಡಿದ್ದ ಸಿನೇಮಾ ನಾಯಕನನ್ನು ಕಂಡು ಅವನ ಮಿತ್ರ ಗಾಬರಿಯಾಗಿ ಕೇಳಿದ.

"ಯಾಕೆ, ಏನಾಯಿತು?"

"ಅಪಘಾತ!— ಶೂಟಿಂಗ್ ಸಮಯದಲ್ಲಿ."

"ಹೌದೆ? ಹೇಗೆ?"

"ನಾನು ಕಾರನ್ನು ಖಳನಾಯಕನಿಗೆ ಹಾಯಿಸುವುದಿತ್ತು!"

"ನೀನೆ ಬಿದ್ದುಬಿಟ್ಟೆ. ಹೌದಲ್ಲೊ?"

"ಇಲ್ಲ. ಚೆನ್ನಾಗಿಯೇ ಹಾಯಿಸಿದೆ ಆ ಖಳನಾಯಕನಿಗೆ. ಈಗವನು ಆಸ್ಪತ್ರೆಯಲ್ಲಿದ್ದಾನೆ."

"ಮತ್ತೆ ಈ ಬ್ಯಾಂಡೇಜುಗಳು ನಿನಗೇಕೆ?"

"ಇಂದು ಮುಂಜಾನೆ— ಖಳನಾಯಕನ ಅಣ್ಣ ನಮ್ಮ ಮನೆಗೆ ಬಂದಿದ್ದ."

### ಕಾರಣವೇನು?

ದೇಶದಲ್ಲಿ ವಿವಾಹ ವಿಚ್ಛೇದನಗಳು ಹೆಚ್ಚುತ್ತಿರುವುದಕ್ಕೆ ಕಾರಣವನ್ನು ಕಂಡು ಹಿಡಿಯಲು ರಾಷ್ಟ್ರಮಟ್ಟದ ಸಮಿತಿಯೊಂದರ ರಚನೆಯಾಗಿತ್ತು. ಸುಮಾರು ಒಂದೂವರೆ ವರ್ಷದವರೆಗೆ ಅನೇಕ ಮೀಟಿಂಗುಗಳನ್ನು ಮಾಡಿ ಸಾವಿರಗಟ್ಟಲೆ ಹಣ ವ್ಯಯಿಸಿದ ನಂತರ ಸಮಿತಿ ತನ್ನ ಮೂರಕ್ಷರದ ಕಾರ

ವನ್ನು ಒಪ್ಪಿಸಿತಂತೆ. ಆ ಮೂರಕ್ಷರ “ನುಂಗುವೆ”.

### ನ್ಯಾಯಾಲಯದಲ್ಲಿ

ವಕೀಲ : ನೀನು ಸುಳ್ಳು ಹೇಳ್ತಾ ಇದ್ದೀಯೆ. ನಿನ್ನ ಹೊಲದಲ್ಲಿನ ನಾಲ್ಕು ಪಾರಿವಾಳಗಳನ್ನು ನನ್ನ ಕಕ್ಷಿಗಾರನೇ ಕೊಂದ ಅಂತ ಯಾವ ಆಧಾರಗಳಿಂದ ರುಜುವಾತು ಪಡಿಸುತ್ತಿ?

ರೈತ : ನೋಡಿ ಸಾಹೇಬ್ರೆ— ಅಂದು ಸಾಯಂಕಾಲ— ಈ ಯಪ್ಪ ನಮ್ಮ ಹೊಲದ ಬದುವಿಗೆ ನಿಂತಿದ್ದ. ಅವನ ಕೈಯಲ್ಲಿ ಬಂದೂಕು ಇತ್ತು. ನನ್ನ ಪಾರಿವಾಳಗಳ ಕಡೆ ಗುರಿ ಇಟ್ಟಿದ್ದೂ ನೋಡಿದೆ. ಢಮ್ ಶಬ್ದವೂ ಕೇಳಿತು. ನನ್ನ ಹದಿನೇಳು ಪಾರಿವಾಳಗಳಲ್ಲಿ ಹದಿಮೂರು ಮಾತ್ರ ಉಳಿದಿದ್ದವು. ಇವರ ಕಿಸೆಯಲ್ಲಿ ನನ್ನ ನಾಲ್ಕು ಪಾರಿವಾಳಗಳು ರಕ್ತ ಸುರಿಸುತ್ತ ಬಿದ್ದುಕೊಂಡಿದ್ದವು. ಗುಂಡು ಹೊಡೆದು ಆತ್ಮಹತ್ಯೆ ಮಾಡಿಕೊಳ್ಳುವಂಥ ಹೇಡಿಗಳು ಅವು ಆಗಿರಲಿಲ್ಲ, ಸ್ವಾಮಿ.

### ಮಾಡಿದ್ದಿಷ್ಟು....

ತಂದೆ ತನ್ನ ಮೂರು ವರ್ಷದ ಮಗು ರವಿಗೆ ಸಿಟ್ಟಿನಿಂದ ಹೇಳಿದ: “ನೋಡು ರವಿ. ನೀನು ಇತ್ತೀಚೆಗೆ ಉಡಾಳ ಆಗ್ತಾ ಇದ್ದೀ ಅಂತ ನಿಮ್ಮ ಮಾಸ್ತರು ಪತ್ರ ಬರೆದು ಕಳಿಸಿದ್ದಾರೆ.”

“ನಾನೂ ಹಾಗೇನೂ ಮಾಡಿಲ್ಲಪ್ಪ!”

“ನಿನ್ನೆ, ನೀನು ನಿನ್ನ ಪಕ್ಕದಲ್ಲಿ ಕುಳಿತ ಹುಡುಗನ ಬಾಯಲ್ಲಿ ಮಣ್ಣು ಹಾಕಿದೆಯಂತೆ?”

“ಆದೇ ಕ್ಲಾಸಿನಲ್ಲಿ ಅವನೊಬ್ಬನೇ ಬಾಯಿ ತೆರೆದು ಮಲಗಿರುವುದರಿಂದ ಹಾಗೆ ಮಾಡಿದೆನಪ್ಪ!”

### ವಿಜಯಶಾಲಿ

ಪ್ರಸಿದ್ಧ ದಿನಪತ್ರಿಕೆಯೊಂದು ಈಜುಗಾರನ ಸಾಹಸವನ್ನು ಕೊಂಡಾಡಿತ್ತು:

“ಆತ ಸಮುದ್ರದಲ್ಲಿ ಮುಳುಗಿ ಮೂರು ಗಂಟೆ ಮೂವತ್ತೈದು ನಿಮಿಷ— ಹದಿನೇಳು ಸೆಕೆಂಡುಗಳ ನಂತರ ಮೇಲೆ ಬಂದಿನ ಎಲ್ಲ ಈಜುಗಾರರ ದಾಖಲೆಗಳನ್ನು ಮುರಿದು ಹಾಕಿದನಲ್ಲದೆ ಈ ಸ್ಪರ್ಧೆಯಲ್ಲಿ ಪಡೆದ ವಿಜಯಕ್ಕಾಗಿ ಮೂರು ಸಾವಿರ ರೂಪಾಯಿ ಬಹುಮಾನವನ್ನೂ ಪಡೆದ.”

ಅದೇ ಪತ್ರಿಕೆಯ ಕೊನೆಯ ಪುಟದ ವರದಿಯೊಂದು ಹೀಗಿತ್ತು:

“ನಿನ್ನೆ ಸ್ಪರ್ಧೆಯಲ್ಲಿ ಮುಳುಗಿ ದುರ್ದೈವಿ ಮರಣ ಪಡೆದ ಸುಪ್ರಸಿದ್ಧ ಈಜುಗಾರನ ಅಂತ್ಯಕ್ರಿಯೆ ಇಂದು ಜರುಗಲಿದೆ.

### ಈ ಮನೆ ಯಾರದು ?

ಆ ಬಂಗಲೆಯ ಮುಂದೆ ಆತ ಪ್ರತಿದಿನ ಹಾಯುವಾಗ ಬಂಗಲೆಯ ನಾಯಿ ಬೊಗಳುತ್ತಿತ್ತು. ಆತ ಆ ನಾಯಿಯನ್ನು ಅನುಮಾನದಿಂದ ನೋಡುತ್ತಿದ್ದ.

ಆತ ಒಂದು ದಿನ ಮನೆ ಮಾಲೀಕನನ್ನು ಕೂಗಿದ. ನಾಯಿ ಬೊಗಳುತ್ತಲೇ ಇತ್ತು. ಮನೆ ಮಾಲೀಕ, “ಏನು?” ಎಂದ.

“ಏನೂ ಇಲ್ಲ. ಈ ಮನೆ ಯಾರದೂ ಅಂತ.”

“ನನ್ನದೇ! ಯಾಕೆ?”

“ಯಾಕಿಲ್ಲ. ನೋಡಿ ಪಾಪ! ನೀವು ಎಂಥಾ ಸಂಭಾವಿತರು. ನೀವೇ ಸುಮ್ಮನಿರುತ್ತೀರಂತೆ— ಈ ನಾಯಿಯದೇನು ಮಹಾ? ನನ್ನದೇ ಮನೆ ಅನ್ನುತ್ತೆ! [illegible] ಯುತ್ತೆ!”



✦ ಡಾ. ಜಯಮ್ಮ

# ಗಂಟಲಲ್ಲಿ ಆಹಾರ ಸಿಕ್ಕಿ ಉಸಿರು ಕಟ್ಟಿದಾಗ...

ಮನುಷ್ಯನಿಗೆ ಮಾರಕವಾಗಬಹುದಾದಂಥ ಆಕಸ್ಮಿಕವೊಂದರ ನಿವಾರಣೆ ಎಷ್ಟು ಸುಲಭಸಾಧ್ಯವೆಂಬುದನ್ನು ಈ ಲೇಖನ ಓದಿಯೇ ತಿಳಿಯಿರಿ. ಸ್ವತಃ ಡಾಕ್ಟರಾದ ಲೇಖಿಕೆ ಈ ಲೇಖನ ವನ್ನು 'ಕಸ್ತೂರಿ'ಗಾಗಿ 'ಜರ್ನಲ್ ಆಫ್ ಅಪ್ಲೈಡ್ ಮೆಡಿಸಿನ್' ಪತ್ರಿಕೆಯಲ್ಲಿ ಬಂದ ವಿಷಯದಿಂದ ಸಂಗ್ರಹಿಸಿದ್ದಾರೆ.

ಕೆಲವರು ಊಟ ಮಾಡುವಾಗ, ತಿಂಡಿ ತಿನಿಸು ತಿನ್ನುವಾಗ ಗಂಟಲಲ್ಲಿ ಸಿಕ್ಕಿಕೊಂಡು ಉಸಿರು ಕಟ್ಟಿ ಸತ್ತ ವರದಿಗಳನ್ನು ಪತ್ರಿಕೆಗಳಲ್ಲಿ ಆಗಾಗ್ಗ ಓದುತ್ತಿರುತ್ತೇವೆ, ಅವರಿವರಿಂದ ಕೇಳುತ್ತಿರುತ್ತೇವೆ.

ನಮ್ಮ ದೇಶದಲ್ಲಿ ಈ ಬಗ್ಗೆ ನಿಖರವಾಗಿ ಅಂಕಿ ಅಂಶಗಳು ವರದಿಯಾಗಿರುವುದು ನನಗೆ ತಿಳಿದಿಲ್ಲ. ಆದರೆ ಅಮೇರಿಕದಲ್ಲಿ ವರದಿಯಾಗಿರುವಂತೆ ಪ್ರತಿ ವರ್ಷ ಸುಮಾರು ೩೯೦೦ ಜನ ಈ ಆಕಸ್ಮಿಕದಿಂದ ಸಾಯುತ್ತಾರೆ. ಅಪಘಾತಗಳಿಗೆ ಬಲಿಯಾಗಿ ಸಾಯುವ ಪ್ರತಿ ಅರರಲ್ಲಿ ಒಬ್ಬ ಈ ಅಪಾಯಕ್ಕೆ ಸಿಕ್ಕವನಾಗಿರುತ್ತಾನೆ. ಅಂದರೆ ಈ ಸಂಖ್ಯೆ ವಿಮಾನಾಪಘಾತದಲ್ಲಿ ಸಾವನ್ನಪ್ಪುವವರ ಸಂಖ್ಯೆಗಿಂತಲೂ ಹೆಚ್ಚು. ಅಲ್ಲದೆ ಹೃದಯಾಘಾತದಿಂದ ಸತ್ತವರೆಂದು ಪರಿಗಣಿಸಲ್ಪಟ್ಟ ಕೆಲವರ ಶವಪರೀಕ್ಷೆಯ ನಂತರ ಅವರ ನಿಧನಕ್ಕೂ ಈ ಆಕಸ್ಮಿಕವೇ ಕಾರಣವೆಂದು ತಿಳಿದು ಬಂತು. ಅಂದಮೇಲೆ ನಮ್ಮಲ್ಲೂ ಈ ಅಪಾಯಕ್ಕೆ ಸಿಗುವವರ ಸಂಖ್ಯೆ ಗಮನಾರ್ಹವಾಗಿರಬೇಕು.

ಇತ್ತೀಚಿನ ವರೆಗೂ ಈ ಅಪಾಯಕ್ಕೊಳಗಾದವರಿಗೆ ಶ್ವಾಸನಾಳದ ಶಸ್ತ್ರಚಿಕಿತ್ಸೆ (Tracheotomy) ನಡೆಸಿ ಗಂಟಲಲ್ಲಿ ಸಿಕ್ಕಿಕೊಂಡ ಆಹಾರದ ತುಂಡನ್ನು ತೆಗೆಯಬೇಕಾಗಿತ್ತು. ಈಗ ಗಂಟಲಲ್ಲಿ ಸಿಕ್ಕಿಕೊಂಡ ವಸ್ತುವನ್ನು ತೆಗೆಯುವ ವಿಶೇಷ ಉಪಕರಣವೊಂದನ್ನು ಕಂಡುಹಿಡಿದಿದ್ದಾರೆ. ಆದರೆ ಈ ಶಸ್ತ್ರಚಿಕಿತ್ಸೆಗಾಗಲಿ ಈ ವಿಶೇಷ ಉಪಕರಣದ ಬಳಕೆಗಾಗಲಿ ತಜ್ಞವೈದ್ಯರ ಮೇಲ್ವಿಚಾರಣೆ ಮತ್ತು ತಜ್ಞವೈದ್ಯರಷ್ಟೇ ಬಳಸಬಹುದಾದಂಥ ಸಲಕರಣೆಗಳಿರುವ ಆಸ್ಪತ್ರೆಗಳಿರುವುದು ಅಗತ್ಯ. ಇದು ಕೆಲವರಿಗೆ ಮಾತ್ರ ಲಭ್ಯವಾಗುವ ಸೀಮಿತ

ಸೌಲಭ್ಯವೇ ಸರಿ. ಏಕೆಂದರೆ ಈ ಅಪಾಯಕ್ಕೆ ಸಿಕ್ಕಿ ಉಸಿರು ಕಟ್ಟಿದ ವ್ಯಕ್ತಿ ತತ್‌ಕ್ಷಣ ಸಹಾಯ ದೊರೆತು ಶಸ್ತ್ರಚಿಕಿತ್ಸೆಗೆ ಒಳಗಾಗ-ದಿದ್ದರೆ ಪ್ರಾಣವಾಯುವಿನ ಕೊರತೆಯಿಂದ ಮೈ ನೀಲಿಗಟ್ಟಿ ಕೆಲವೇ ನಿಮಿಷಗಳಲ್ಲಿ ಸಾಯು-ತ್ತಾನೆ.

ಸಾಮಾನ್ಯವಾಗಿ ಈ ಅಪಾಯವನ್ನೂ ಈ ಅಪಾಯಕ್ಕೊಳಗಾದ ವ್ಯಕ್ತಿಯನ್ನೂ ಸುಲಭ ವಾಗಿ ಗುರುತಿಸಬಹುದು. ಊಟದ ಮಧ್ಯೆ ಈ ವ್ಯಕ್ತಿ ಇದ್ದಕ್ಕಿದ್ದಂತೆ ಉಸಿರಾಡಲು, ಮಾತ-ನಾಡಲು ಆಗದೆ ಕಷ್ಟಪಡುತ್ತಾ ಬಿಳಿಚಿಕೊಂಡು ಬಿಡುತ್ತಾನೆ. ಕೆಲ ನಿಮಿಷಗಳಲ್ಲಿ ಅವನ ಶರೀರ-ವೆಲ್ಲಾ ನೀಲಿಯಾಗಿ ಅವನು ಕುಸಿಯುತ್ತಾನೆ. ಕೆಲವು ಸಲ ಪ್ರಾಣಭೀತಿಯಿಂದ ಅತ್ತಿತ್ತ ಓಡಿ ನಂತರ ಕುಸಿದು ಬೀಳುತ್ತಾನೆ. ಸ್ವಲ್ಪ ಹೊತ್ತಿನಲ್ಲೇ ಪ್ರಾಣ ಬಿಡುವುದರಿಂದ ಒಮ್ಮೊಮ್ಮೆ ಹೃದಯಾಘಾತವಾಗಿರಬೇಕೆಂದು ಇಂಥವರು ಶಂಕಿಸಲ್ಪಡುತ್ತಾರೆ. ಆದುದರಿಂದ ಈ ಅಪಾಯ ಸಂಭವಿಸಿದಾಗ ಅದಕ್ಕೆ ತುತ್ತಾದ ವ್ಯಕ್ತಿ ತಾನು ಈ ಅಪಾಯಕ್ಕೆ ಸಿಕ್ಕಿರುವುದನ್ನು ಒಂದು ಸಂಜ್ಞೆಯ ಮೂಲಕ ತಿಳಿಸಿದರೆ ಬದಿಯಲ್ಲಿರುವವರು ತಕ್ಷಣ ಸಹಾಯ ನೀಡಬಹುದು. ಇಂಥ ಒಂದು ಸಂಜ್ಞೆ ಅಥವಾ ಒಂದು ಚಿಹ್ನೆಯನ್ನು ಡಾ. ಹೈಮ್‌ಲಿಚ್ ಎಂಬ ಓಹಾಯೋದ ಒಬ್ಬ ತಜ್ಞ ವೈದ್ಯರು ರೂಪಿಸಿ ಇದನ್ನು ಅಂತಾರಾಷ್ಟ್ರೀಯವಾಗಿ ಬಳ-ಸಲು ಸಹಾಯ ಮಾಡಿದ್ದಾರೆ. ಈ ಚಿಹ್ನೆ-ಯನ್ನು 'ಹೈಮ್‌ಲಿಚ್ ಚಿಹ್ನೆ' ಅಥವಾ 'ಹೈಮ್‌ಲಿಚ್ ಸಂಜ್ಞೆ' ಎಂದು ಹೆಸರಿಸಿದ್ದಾರೆ. ಅದೆಂದರೆ ಆಹಾರ ಗಂಟಲಲ್ಲಿ ಸಿಕ್ಕಿ ಉಸಿರು ಕಟ್ಟಿದ ವ್ಯಕ್ತಿ ತನ್ನ ಒಂದು ಕೈಯ ಹೆಬ್ಬೆರಳು ಮತ್ತು ತೋರು ಬೆರಳಿನಿಂದ ಕುತ್ತಿಗೆಯ ಮುಂಭಾಗವನ್ನು ಹಿಡಿದುಕೊಳ್ಳುವುದು (ಚಿತ್ರ ೧).



ಚಿತ್ರ - ೧.

ಹೈಮ್‌ಲಿಚ್ ಸಂಜ್ಞೆ

ಡಾ. ಹೈಮ್‌ಲಿಚ್ ಅನ್ನನಾಳದ ವಿಷಯವನ್ನು ಅತ್ಯಂತವಾಗಿ ಬಲ್ಲ ದೊಡ್ಡ ವೈದ್ಯರು. ಅವರು ಈ ಆಹಾರ ಗಂಟಲಲ್ಲಿ ಸಿಕ್ಕಿ ಸಾವನ್ನಪ್ಪುವವರ ಬಗ್ಗೆ ಆಳವಾಗಿ ಅಧ್ಯಯನ ಮಾಡಿ, ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ನಡೆಸಿ ಈ ಅಪಾ-ಯಕ್ಕೆ ರಾಮಬಾಣದಂಥ ಪ್ರಥಮ ಚಿಕಿತ್ಸೆಯ ಒಂದು ಕ್ರಮವನ್ನು ಕಂಡುಹಿಡಿದಿದ್ದಾರೆ. ಈ ಚಿಕಿತ್ಸಾ ಕ್ರಮವು ಒಬ್ಬ ಸಾಮಾನ್ಯನೂ ತಿಳಿದು-ಕೊಂಡು ಮಾಡುವಷ್ಟು ಸುಲಭವಾಗಿದೆ. ಇದನ್ನು 'ಹೈ ಮ್ ಲಿ ಚ್ ವಿಧಾನ,' 'ಹೈಮ್‌ಲಿಚ್ ಚಿಕಿತ್ಸಾ ಕ್ರಮ' (Heim-lich's Manoeuvre) ಎಂದು ಹೆಸರಿ-ಸಿದ್ದಾರೆ. ಅದನ್ನು ಮಾಡುವ ಕ್ರಮ ಅಥವಾ ವಿಧಾನ ಹೀಗಿದೆ: ಉಸಿರು ಕಟ್ಟಿದ ವ್ಯಕ್ತಿಯ ಸಹಾಯಕನು ಅಥವಾ ರಕ್ಷಕನು ಆತನ ಹಿಂದೆ ನಿಂತು ತನ್ನ ಎರಡೂ ಕೈಗಳಿಂದ ಆ ವ್ಯಕ್ತಿಯ ಸೊಂಟ ಬಳಸಿ ತನ್ನ ಒಂದು ಕೈ ಮುಷ್ಟಿ ಹಿಡಿದು, ಇನ್ನೊಂದು ಕೈಯಿಂದ ಮುಷ್ಟಿಯನ್ನು ಮುಚ್ಚಿ ಹಿಡಿದು, ಹೊಕ್ಕಳಿನ ಮೇಲೆ ಮತ್ತು ಎದೆಗೂಡಿನ ಕೆಳಗೆ ಹೊಟ್ಟೆಯ ಮೇಲೆ ಇಡಬೇಕು. (ಮುಷ್ಟಿಯ ಹೆಬ್ಬೆರಳು ಹೊಟ್ಟೆಯ ಮೇಲಿರ-

ಬೇಕು (ಚಿತ್ರ-೨ ಮತ್ತು ಚಿತ್ರ-೩). ಹೀಗೆ ಹಿಡಿದುಕೊಂಡು ಮೇಲ್ಮುಖವಾಗಿ ಕ್ಷಿಪ್ರ ಒತ್ತಡ ಕೊಡಬೇಕು. (Quick upward-thrust) ನಂತರ ಸಡಿಲ ಬಿಡಬೇಕು. ಹೀಗೆ ಒಂದು ಸಲ, ಅಗತ್ಯವಿದ್ದರೆ ಅನೇಕ ಸಲ ಮಾಡಬೇಕು.

ಈ ಚಿಕಿತ್ಸೆಯಿಂದ ಗಂಟಲಲ್ಲಿ ಸಿಕ್ಕಿಕೊಂಡ ಆಹಾರ ವಸ್ತು ಹೊರಕ್ಕೆ ದಬ್ಬಲ್ಪಟ್ಟು ಆ ವ್ಯಕ್ತಿ ಸರಾಗವಾಗಿ ಉಸಿರಾಡತೊಡಗಿ ಕೆಲವೇ ಕ್ಷಣಗಳಲ್ಲಿ ಚೇತರಿಸಿಕೊಳ್ಳುತ್ತಾನೆ. ಅಪಾಯಕ್ಕೆ ಸಿಕ್ಕ ವ್ಯಕ್ತಿ ಕುಸಿದು ಕೂತಿದ್ದು, ನಿಲ್ಲಲಾಗದಿದ್ದರೆ ಆತನ ಸಹಾಯಕನು ಹಿಂದೆ ಬಗ್ಗಿ ನಿಂತು ಕೂತಿದ್ದಂತೆಯೇ ಈ ಚಿಕಿತ್ಸೆ ಮಾಡಬಹುದು;



ಚಿತ್ರ - ೩

ಮೇಲ್ಮುಖವಾಗಿ ಕ್ಷಿಪ್ರ ಒತ್ತಡ ಕೊಡಬೇಕು



ಚಿತ್ರ - ೨

ಹೀಗೆ ಹಿಡಿದುಕೊಂಡು...

ಅಥವಾ ಅಂಥ ವ್ಯಕ್ತಿ ಬಿದ್ದು ಬಿಟ್ಟಿದ್ದರೆ ಆತನನ್ನು ಅಂಗಾತ ಮಲಗಿಸಿ ಆತನಿಗೆದುರಾಗಿ ಮೊಳಕಾಲೂರಿ ಕುಳಿತು ಎರಡೂ ಅಂಗೈಗಳನ್ನು ಹೊಟ್ಟೆಯ ಮೇಲೆ ಹೊಕ್ಕಳಿನಿಂದ ಮೇಲಕ್ಕೆ ಇಟ್ಟು ಮಣಿಕಟ್ಟಿನ ಹತ್ತಿರದ ಅಂಗೈ ಭಾಗದಿಂದ ಮೇಲ್ಮುಖವಾಗಿ ಒತ್ತಡ ಕೊಡಬೇಕು (ಚಿತ್ರ ೪). ಹೀಗೆ ವಿವಿಧ ಭಂಗಿಗಳಲ್ಲಿ ಚಿಕಿತ್ಸೆ ಮಾಡಿ ಪ್ರಾಣಾಪಾಯದಿಂದ ಪಾರು ಮಾಡಬಹುದು.

ಇನ್ನು ಈ ಚಿಕಿತ್ಸೆ ಯಾವ ತತ್ತ್ವದ ಆಧಾರದ ಮೇಲೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿದುಕೊಳ್ಳೋಣ. ಯಾವುದೇ ವ್ಯಕ್ತಿಯ ಗಂಟಲಲ್ಲಿ ಆಹಾರ ವಸ್ತುವು ಸಿಕ್ಕಿಕೊಳ್ಳಬೇಕಾದರೆ ಅದು ನಡೆಯುವುದು ಆತನ ಉಚ್ಛ್ವಾಸದ ಸಮಯದಲ್ಲಿ. ಅಂದರೆ ಗಾಳಿಯ ಜೊತೆ ಆಹಾರದ ತುಣಕನ್ನೂ ಒಳಗೆ ಎಳೆದುಕೊಳ್ಳುತ್ತಾನೆ, ಮತ್ತು ಅದು ಗಂಟಲಲ್ಲಿ ಹೋಗಿ ಸಿಕ್ಕಿಕೊಂಡು ತೊಂದರೆಯನ್ನುಂಟುಮಾಡುತ್ತದೆ. ಆ ಸಮಯದಲ್ಲಿ ಶ್ವಾಸಕೋಶಗಳು ಗಾಳಿ ತುಂಬಿಕೊಂಡು ವಿಕಸಿತಗೊಂಡಿರುತ್ತವೆ. ನಾವು ಹೊಟ್ಟೆಯ ಮೇಲೆ ಮೇಲ್ಮುಖವಾಗಿ ಒತ್ತಿದರೆ



ಚಿತ್ರ-೪.

ಅಂಗಾತ ಮಲಗಿಸಿ ಆತನಿಗೆದುರಾಗಿ ಮೊಳಕಾಲೂರಿ...

ವಪೆಯು (ಹೊಟ್ಟೆ ಮತ್ತು ಎದೆಗೂಡನ್ನು ಬೇರ್ಪಡಿಸುವ ಪದರ) ಮೇಲಕ್ಕೆ ಒತ್ತಲ್ಪಟ್ಟು ಶ್ವಾಸಕೋಶಗಳು ಸ್ವಲ್ಪ ಮಟ್ಟಿಗೆ ಸಂಕುಚಿತಗೊಳ್ಳುವಂತೆ ಮಾಡುವುದರಿಂದ ಅವುಗಳಲ್ಲಿರುವ ಗಾಳಿಯ ಒತ್ತಡ ಹೆಚ್ಚಿ ಶ್ವಾಸನಾಳದ ಮೂಲಕ ಹೊರಗೆ ಹೋಗುವುದಕ್ಕೆ ಪ್ರಯತ್ನಿಸಿ ಅದಕ್ಕೆ ಅಡ್ಡವಾಗಿ ಕುಳಿತ ಆಹಾರದ ತುಂಡನ್ನು ಮುಂದಕ್ಕೆ ದೂಡುತ್ತದೆ. ನಂತರ ಉಸಿರಾಟ ಸರಾಗ!

ಈ ಚಿಕಿತ್ಸೆಯ ವಿವರಗಳು ಪ್ರಕಟವಾದ ನಂತರ ಅದರ ಉಪಯೋಗ ಪಡೆದ ವೈದ್ಯರುಗಳು, ಸಾಮಾನ್ಯರು ಡಾ. ಹೈಮ್‌ಲಿಚ್‌ರವರಿಗೆ ಕೃತಜ್ಞತೆಯ ಪತ್ರಗಳನ್ನು ಬರೆಯುತ್ತಾ ಈ ಚಿಕಿತ್ಸೆ ವಿಫಲವಾದದ್ದೇ ಇಲ್ಲ ಎಂದು ತಿಳಿಸಿದ್ದಾರೆ. ಈ ಚಿಕಿತ್ಸೆಯಿಂದ ಜೀವದಾನ ಪಡೆದವರಲ್ಲಿ ಚಿಕ್ಕ ಮಕ್ಕಳು, ವೃದ್ಧರು, ಮಹಿಳೆಯರು, ದೊಡ್ಡವರು ಎಲ್ಲಾ ಸೇರಿದ್ದಾರೆ. ಅವಸರದಲ್ಲಿ, ಮೇಲೆ ವಿವರಿಸಿದ ರೀತಿಯಲ್ಲಲ್ಲದೆ ಹೇಗೋ ನಡೆಸಿಯೂ ಈ ಚಿಕಿತ್ಸೆ ಜಯಪ್ರದವಾಗಿದೆ. ಸಹಾಯಕ್ಕೆ ಬೇರಾರೂ ಇಲ್ಲದಂತಾಗಿದ್ದು ಬಾಧಿತ ವ್ಯಕ್ತಿಗಳು ತಾವೇ ಸ್ವಯಂ ಈ ಚಿಕಿತ್ಸೆ ನಡೆಸಿಕೊಂಡು ಜೀವ ಉಳಿಸಿಕೊಂಡ ಪ್ರಕರಣಗಳೂ ಬೆಳಕಿಗೆ ಬಂದಿವೆ.

ಇನ್ನೂ ಒಂದು ವಿಚಿತ್ರವೆಂದರೆ ನೀರಿನಲ್ಲಿ ಮುಳುಗಿ ಶ್ವಾಸಕೋಶಗಳಲ್ಲಿ ನೀರು ಸೇರಿ ಕಷ್ಟಪಡುತ್ತಿದ್ದ ಕೆಲವರಿಗೆ ಸಾಮಾನ್ಯವಾಗಿ ಅಂಥವರಿಗೆಂದೇ ನಡೆಸುವ ಪ್ರಥಮ ಚಿಕಿತ್ಸೆಗಳು ಫಲ ಕೊಡದಿದ್ದಾಗ ಈ ಹೈಮ್‌ಲಿಚ್ ವಿಧಾನ ಅದ್ಭುತವಾಗಿ ಕೆಲಸಮಾಡಿ ಜೀವದಾನಮಾಡಿದ್ದು ವರದಿಯಾಗಿದೆ.

ಇಷ್ಟೆಲ್ಲಾ ಓದಿದ ಮೇಲೆ ಇಂಥ ಒಂದು ಚಿಕಿತ್ಸೆಯನ್ನು ಎಲ್ಲರೂ ತಿಳಿದಿರುವುದು ಒಳ್ಳೆಯದು ಎನ್ನಿಸುವುದಿಲ್ಲವೆ? ✡

---

## ನೀವಿನ್ನು ಮಾತ್ರೆ ನುಂಗಬೇಕಿಲ್ಲ

ಡಾಕ್ಟರು ನಿಮಗೆ ಯಾವುದಾದರೂ ಅಸ್ವಾಸ್ಥ್ಯಕ್ಕೆ ಮಾತ್ರೆ ಅಥವಾ ಕ್ಯಾಪ್ಸೂಲುಗಳನ್ನು ಔಷಧವೆಂದು ವಿಧಿಸುವಾಗ ಇಂತಿಷ್ಟು ಪ್ರಮಾಣದಲ್ಲಿ ದಿನಕ್ಕೆ ಇಷ್ಟು ಸಲ ಅವುಗಳನ್ನು ಸೇವಿಸಬೇಕು ಎಂದು ಹೇಳಿರುತ್ತಾರೆ. ಆದರೆ ಪಶ್ಚಿಮ ಜರ್ಮನಿಯ ಔಷಧ ಕಂಪನಿಯೊಂದು ನಿಮಗಿನ್ನು ಆ ತೊಂದರೆಯನ್ನು ತಪ್ಪಿಸುವ ಕ್ರಮವನ್ನು ಶೋಧಿಸಿದೆ. ಮಾತ್ರೆಗಳ ಬದಲು ಇನ್ನು ಅದು ಬಳಕೆಗೆ ತರಲಿರುವ ಔಷಧದ ಪ್ಲಾಸ್ಟರ್ ಪಟ್ಟಿಗಳನ್ನು ನಿಮ್ಮ ಮೈದೊಗಲಿ ಅಂಟಿಸಿಕೊಂಡರೆ ಸಾಕು. ಔಷಧ ಚರ್ಮದ ಮೂಲಕವೇ ಶರೀರವನ್ನು ಸೇರುತ್ತದೆ. ಇಂಥ ಒಂದು ಪಟ್ಟಿ ಒಂದು ವಾರ ತಾಳುವುದರಿಂದ ಮೇಲಿಂದ ಮೇಲೆ ಅದನ್ನು ಬದಲಿಸುವ ಅವಶ್ಯಕತೆಯೂ ಇಲ್ಲ!



ಮೂಲ :
ಮಾರ್ಕ್ ಟ್ವೇನ್

ಅನುವಾದ :
ವಕ್ರತುಂಡ

# ಹತ್ತು ಲಕ್ಷ ಪೌಂಡ್ ನೋಟು

ಕಳೆದ ಶತಮಾನದಲ್ಲಿ ಜಾಗತಿಕ ಸಾಹಿತ್ಯಾಕಾಶದಲ್ಲಿ ಮಿಂಚಿ ಹೋದ ತಾರೆಗಳಲ್ಲಿ ಅಮೇರಿಕದ ಮಾರ್ಕ್ ಟ್ವೇನನೂ ಒಬ್ಬ. ೧೮೩೫ ರಲ್ಲಿ ಮಿಸೂರಿಯ ಫ್ಲೊರಿಡಾದಲ್ಲಿ ಒಬ್ಬ ಬಡ ಅಂಗಡಿಕಾರನ ಮಗನಾಗಿ ಜನಿಸಿದ ಅವನ ನಿಜ ನಾಮ-ಧೇಯ ಸ್ಯಾಮುಯೆಲ್ ಕ್ಲೆಮೆನ್ಸ್ ಎಂದು. ವಿದ್ಯಾಭ್ಯಾಸದಲ್ಲಿ ಅಷ್ಟು ಒಲವು ಇಲ್ಲದ್ದರಿಂದ ಬೇಗನೆ ಶಾಲೆ ಬಿಟ್ಟ. ಮುಂದೆ ಆ ಬಗ್ಗೆ ಒಲವು ಹುಟ್ಟಿಕೊಂಡಿತಾದರೂ ತಂದೆ ತೀರಿಹೋಗಿ ಸಂಸಾರ ನಿರ್ವಹಣೆಯ ಭಾರ ಮೈಮೇಲೆ ಬಿದ್ದಿದ್ದರಿಂದ ಶಾಲೆ ಸೇರಲು ಸಾಧ್ಯವಾಗಲಿಲ್ಲ. ಆಗ ಕೈಗೆ ಸಿಕ್ಕ ಪುಸ್ತಕಗಳನ್ನು ಓದಿ ಅರಗಿಸಿಕೊಂಡು ಜ್ಞಾನದಾಹವನ್ನು ತಣಿಸಿಕೊಂಡ. ಜೀವನದಲ್ಲಿ ಆತ ಪಡೆದ ಅನುಭವ ಅಪಾರ. ಈ ಅನುಭವಕ್ಕೆ ಅವನ ವ್ಯಕ್ತಿತ್ವದಲ್ಲಿ ಅಂತರ್ನಿಹಿತವಾದ ಹಾಸ್ಯ ಪ್ರವೃತ್ತಿಯ ಮೆರಗು ಲೇಪಿಸಿಕೊಂಡಿದ್ದ ಆತ ಪ್ರಸಿದ್ಧಿಗೇರಲು ಕಾರಣವಾಯಿತು. ತನ್ನ ಯುರೋಪ್ರ ಯಾತ್ರೆಯ ಅನುಭವಗಳನ್ನೆಲ್ಲಾ ಕೂಡಿ ಹಾಕಿ ೧೮೬೭ ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದಾಗ ಒಂದೂವರೆ ಲಕ್ಷ ಪ್ರತಿಗಳು ಬಿಸಿ ದೋಸೆಗಳಂತೆ ಮಾರಾಟವಾಗಿ ಹೋದವು. ಸಾಹಿತ್ಯದಲ್ಲಿ ಅವನ ವಿಜಯಯಾತ್ರೆ ಪ್ರಾರಂಭವಾದದ್ದು ಇಲ್ಲಿಂದಲೆ. ಮುಂದೆ ಆತ ಅನೇಕ ಸಾಹಸಗಳನ್ನು ಮಾಡಿ ಅವುಗಳೆಲ್ಲವನ್ನೂ ಕಾದಂಬರಿಗಳ ರೂಪದಲ್ಲಿ ಬರೆದು ಲಕ್ಷಾಂತರ ರೂಪಾಯಿಗಳನ್ನು ಗಳಿಸಿದ. ಗಳಿಸಿದ್ದೆಲ್ಲವನ್ನೂ ಅನೇಕ ಹುಚ್ಚು ಯೋಜನೆಗಳಲ್ಲಿ ತೊಡಗಿಸಿ ಮುಂದೆ ವಸ್ತುತಃ ನಿರ್ಗತಿಕನೇ ಆದ. ಅವನ ಆರೋಗ್ಯ ಕೆಟ್ಟುಹೋಯಿತು. ಸಾಲದ ಹೊರೆ ದಿನೇ ದಿನೇ ಏರುತ್ತಿತ್ತು. ದಿವಾಳಿಯ ಅರ್ಜಿ ಕೊಟ್ಟು ಇದರಿಂದ ಪಾರಾಗಬಹುದಿತ್ತು. ಆದರೆ ಆತನ ಸ್ವಾಭಿಮಾನ ಇದಕ್ಕೆ ಅಡ್ಡ ಬಂತು. ಲೇಖನ ವ್ಯವಸಾಯದಿಂದ ಮತ್ತೆ ಹಣ ಗಳಿಸಿ ಸಾಲವೆಲ್ಲವನ್ನೂ ತೀರಿಸಿದ.

ಅವನ ಕೊನೆಯ ದಿನಗಳು ಸುಖಪ್ರದವಾಗಿರಲಿಲ್ಲ, ಅವನ ಕುಟುಂಬದ ಸದಸ್ಯರೂ ಆಪ್ತೇಷ್ಟರೂ ಒಬ್ಬರಾದ ನಂತರ ಒಬ್ಬರಂತೆ ವಿಧಿವಶರಾದರು. ವೃದ್ಧಾಪ್ಯ-ವನ್ನು ಏಕಾಕಿಯಾಗಿ ಅಸಹಾಯ ಸ್ಥಿತಿಯಲ್ಲಿ ಕಳೆಯುವ ದುರ್ಧರ ಪ್ರಸಂಗ ಅವನಿಗೆ ಒದಗಿ ಬಂತು. ಸರಿಯಾಗಿ ನಾಲ್ಕು ವರ್ಷ ಸಹ ಶಾಲೆಗೆ ಹೋಗದ ಮಾರ್ಕ್ ಟ್ವೇನನಿಗೆ ಅವನ ಸಾಹಿತ್ಯ ಸಾಧನೆಯನ್ನು ಲಕ್ಷಿಸಿ ಅನೇಕ ವಿಶ್ವವಿದ್ಯಾಲಯಗಳು ಗೌರವ ಪದವಿಯನ್ನು ಕೊಡಲು ಮುಂದೆ ಬಂದುವು. ಆದರೆ ಜೀವನದಲ್ಲಿ ಒದಗಿ ಬಂದ ದುರಂತ ಘಟನಾವಳಿಗಳಿಂದ ಜರ್ಜರಿತನಾದ ಆತನಿಗೆ ಆಗ ಈ ಬಗ್ಗೆ ಯಾವ ಆಸಕ್ತಿಯೂ ಉಳಿದಿರಲಿಲ್ಲ. ೧೯೧೦ ರಲ್ಲಿ ತುಂಬಾ ಕಷ್ಟಕರವಾದ ಸ್ಥಿತಿಯಲ್ಲಿ ಆತ ಮರಣ ಹೊಂದಿದ.

ಅವನು ಬರೆದ ಕಾದಂಬರಿಗಳಂತೆಯೆ ನೀಳ್ಗತೆಗಳೂ ತುಂಬಾ ಜನಪ್ರಿಯವಾಗಿವೆ. ಅವುಗಳಲ್ಲೊಂದರ ಅನುವಾದವನ್ನು ನಾವಿಲ್ಲಿ ಕೊಡುತ್ತಿದ್ದೇವೆ.

ನನಗೆ ಇಪ್ಪತ್ತೇಳು ವರ್ಷವಾದಾಗ ಸ್ಯಾನ್-ಫ್ರಾನ್ಸಿಸ್ಕೋದಲ್ಲಿ ಗಣಿ ದಳ್ಳಾಳಿಯ ಗುಮಾಸ್ತನಾಗಿದ್ದೆ. ಸಗಟು ವ್ಯವಹಾರದ ಎಲ್ಲ ವಿವರಗಳಲ್ಲಿ ಪರಿಣತನಾಗಿದ್ದೆ. ಒಂಟಿಯಾಗಿದ್ದೆ. ನನ್ನ ಬುದ್ಧಿಕೌಶಲ ಮತ್ತು ಒಳ್ಳೆಯ ಹೆಸರು ಇವಷ್ಟೆ ನನ್ನ ಅಭ್ಯುದಯಕ್ಕೆ ಕಾರಣವಾಗಿದ್ದುವು. ಅದರಿಂದ ನನಗೆ ತೃಪ್ತಿ ಸಿಕ್ಕಿತ್ತು.

ಪ್ರತಿ ಶನಿವಾರ ಮಧ್ಯಾಹ್ನ ನಾನು ಸ್ವತಂತ್ರ. ಸಾಮಾನ್ಯವಾಗಿ ಆ ಕಾಲವನ್ನು ಒಂದು ಚಿಕ್ಕ ಹಾಯಿದೋಣಿಯಲ್ಲಿ ಕಳೆಯುತ್ತಿದ್ದೆ. ಅಂತಹ ಒಂದು ದಿನ ಸಮುದ್ರದಲ್ಲಿ ಎಂದಿಗಿಂತ ಹೆಚ್ಚು ದೂರ ಹೋಗುವ ಸಾಹಸ ಮಾಡಿದೆ. ಅದು ನನ್ನನ್ನು ಮತ್ತಷ್ಟು ದೂರ ಹೊತ್ತೊಯ್ದಿತು. ರಾತ್ರಿಯಾಯಿತು. ಹಿಂತಿರುಗುವ ಆಸೆಯೂ ನಂದಿತ್ತು. ಆಗ ಲಂಡನ್ನಿಗೆ ಹೊರಟಿದ್ದ ಚಿಕ್ಕ ಹಡಗೊಂದು ನನ್ನನ್ನು ಎತ್ತಿಕೊಂಡು ಉಳಿಸಿತು. ಪ್ರಯಾಣ ದೀರ್ಘವಾಗಿತ್ತು, ಬಿರುಗಾಳಿಯಿಂದ ಅಪಾಯಕಾರಿಯೂ ಆಗಿತ್ತು. ಹಡಗಿನಲ್ಲಿ ಪ್ರಯಾಣದ ಶುಲ್ಕ ತೆರಲು ನಾನು ಸಾಮಾನ್ಯ ನಾವಿಕನಂತೆ ದುಡಿಯಬೇಕಾಯಿತು. ಲಂಡನ್ನಿನ ದಡ ತಲುಪಿದಾಗ ನನ್ನ ಬಟ್ಟೆ ಕೊಳೆಯಾಗಿದ್ದುವು. ಚಿಂದಿಯಾಗಿದ್ದುವು. ಜೇಬಿನಲ್ಲಿ ಒಂದೇ ಒಂದು ಡಾಲರಿತ್ತು. ಅದು ಇಪ್ಪತ್ನಾಲ್ಕು ಗಂಟೆಯ ಅನ್ನ ವಸತಿಗಾಯಿತು. ಮುಂದಿನ ಇಪ್ಪತ್ನಾಲ್ಕು ಗಂಟೆ ಅನ್ನ ವಸತಿ ಇಲ್ಲದೆ ಅಲೆದೆ.

ಮರುದಿನ ಬೆಳಿಗ್ಗೆ ಸುಮಾರು ಹತ್ತು ಗಂಟೆಯ ಹೊತ್ತಿಗೆ ಹಸಿವು ಆಯಾಸಗಳಿಂದ ಕಾಲೆಳೆದುಕೊಂಡು ಪೋರ್ಟ್‌ಲಂಡ್ ಭಾಗದಲ್ಲಿ ಹೋಗುತ್ತಿದ್ದಾಗ ದಾದಿಯೊಡನೆ ಹೋಗುತ್ತಿದ್ದ ಮಗುವೊಂದು ರಸಭರಿತವಾದ ಪೇರಲ ಹಣ್ಣೊಂದನ್ನು ಒಮ್ಮೆ ಕಚ್ಚಿನೋಡಿ ಚರಂಡಿಗೆ ಬಿಸುಡಿತು. ನಾನು ನಿಂತೆ. ನನ್ನ ಆಸೆಗಣ್ಣು ಮಣ್ಣು ಮೆತ್ತಿದ ಆ ಹಣ್ಣಿನ ಮೇಲೆ ನಟ್ಟುವು. ಬಾಯಿ ನೀರೂರಿತು, ಹೊಟ್ಟೆ ಹಂಬಲಿಸಿತು. ಇಡೀ ದೇಹವೇ ಅದಕ್ಕಾಗಿ ಹಾತೊರೆಯಿತು. ಆದರೆ ಅದರ ಕಡೆ ನಾನು ಹೋಗಬೇಕೆಂದಾಗಲೆಲ್ಲ ಯಾರಾದರೊಬ್ಬರ ಕಣ್ಣು ನನ್ನ ಕಡೆ ತಿರುಗುತ್ತಿತ್ತು. ತಕ್ಷಣವೆ ಸೆಡೆತು ಉದಾಸೀನನಂತೆ ನಟಿಸಬೇಕಾಗುತ್ತಿತ್ತು. ಹೀಗೆ ಪದೆ ಪದೆ ನಡೆದು, ಇನ್ನೇನು ನಾಚಿಕೆ ಬಿಟ್ಟು ಆ ಹಣ್ಣನ್ನು ಎತ್ತಿಕೊಳ್ಳಬೇಕೆನ್ನುವಷ್ಟರಲ್ಲಿ ನನ್ನ ಹಿಂದೆ ಕಿಟಕಿಯೊಂದು ತೆರೆಯಿತು. ಯಾರೋ ಒಬ್ಬರು ಒಳಗಿನಿಂದ "ದಯವಿಟ್ಟು ಒಳಗೆ ಬಾ," ಎಂದರು.

ಭಾರಿ ಸಮವಸ್ತ್ರದ ಸೇವಕನೊಬ್ಬ ನನ್ನನ್ನು ಒಳಗೆ ಕರೆದೊಯ್ದ. ಸಮೃದ್ಧವಾದ ಕೋಣೆ. ಇಬ್ಬರು ಹಿರಿಯರು ಅಲ್ಲಿದ್ದರು. ಅವರು ಸೇವಕನನ್ನು ಹೊರಗೆ ಕಳಿಸಿ ನನ್ನನ್ನು ಕುಳ್ಳಿರುವಂತೆ ಹೇಳಿದರು. ಆಗ ತಾನೆ ಅವರ ಬೆಳಗಿನ ಉಪಾಹಾರ ಮುಗಿದಿತ್ತು. ಅವರು ತಿಂದು ಉಳಿದದ್ದೇ ನನ್ನನ್ನು ಬಲವಾಗಿ ಸೆಳೆಯುತ್ತಿತ್ತು. ಆ ತಿಂಡಿಯ ಎದುರಿನಲ್ಲಿ ನನ್ನ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಕಷ್ಟವಾಗಿತ್ತು. ಆದರೆ ಅವರು ಆ ತಿಂಡಿಯ ರುಚಿ ನೋಡಲು ಹೇಳಲಿಲ್ಲ. ಆದ್ದರಿಂದ ನನ್ನ ಹಸಿವನ್ನು ಹೇಗೋ ತಾಳಿಕೊಂಡೆ.

ಅಲ್ಲಿ, ನಾನು ಬರುವುದಕ್ಕೆ ಮುಂಚೆ ಏನೋ ವ್ಯವಹಾರ ನಡೆದಿತ್ತು. ಅನಂತರ ಅನೇಕ ದಿನಗಳ ವರೆಗೆ ಅದು ನನಗೆ ಗೊತ್ತಾಗಲಿಲ್ಲ. ಆದರೂ ಅದನ್ನೀಗಲೆ ಹೇಳಿಬಿಡುತ್ತೇನೆ. ಆ ಇಬ್ಬರು ಸಹೋದರರಲ್ಲಿ ನಾಲ್ಕಾರು ದಿನದಿಂದ ಬಿಸಿಬಿಸಿಯಾದ ವಾದವೇ ನಡೆದು, ಇಂಗ್ಲಿಷರ ಪದ್ಧತಿಯಂತೆ, ಅದು ಒಂದು ಪಣದ ಮೂಲಕವೇ ತೀರ್ಮಾನವಾಗಬೇಕೆಂಬ ಒಪ್ಪಂದಕ್ಕೆ ಅವರು ಬಂದಿದ್ದರು.

ಬ್ಯಾಂಕ್ ಆಫ್ ಇಂಗ್ಲಂಡು ಯಾವುದೋ ವಿದೇಶ ವ್ಯವಹಾರಕ್ಕೆ ಸಂಬಂಧಿಸಿದ ವಿಶೇಷ ಉದ್ದೇಶಕ್ಕಾಗಿ ಹತ್ತು ಲಕ್ಷ ಪೌಂಡಿನ ಎರಡು ನೋಟುಗಳನ್ನು ಅಚ್ಚು ಹಾಕಿದ್ದು ನಿಮಗೆ ನೆನಪಿರಬಹುದು. ಅದರಲ್ಲಿ ಒಂದು ನೋಟು ಉಪಯೋಗವಾಗಿ ರದ್ದಾಗಿತ್ತು. ಇನ್ನೊಂದು ಇನ್ನೂ ಬ್ಯಾಂಕಿನಲ್ಲೆ ಭದ್ರವಾಗಿತ್ತು. ಈ ಸಹೋದರರು ಅದೂ ಇದೂ ಹರಟುತ್ತಿದ್ದಾಗ, ಕೈಯಲ್ಲಿ ಬೇರೆ ಏನೂ ಹಣವಿಲ್ಲದೆ ಹತ್ತು ಲಕ್ಷ ಪೌಂಡ್ ನೋಟು ಮಾತ್ರ ಇದ್ದರೆ, ಅದು ತನ್ನಲ್ಲಿ ಹೇಗೆ ಬಂತೆಂದು ವಿವರಿಸಲೂ ಸಾಧ್ಯವಿಲ್ಲದಿದ್ದರೆ, ಲಂಡನ್ನಿನಲ್ಲಿ ಪರಿಚಿತರೇ ಇಲ್ಲದೆ

ಅಲೆಯುತ್ತಿರುವ ಪ್ರಾಮಾಣಿಕ, ಬುದ್ಧಿವಂತ ಹೊಸಬನ ಗತಿಯೇನು? ಎಂಬ ಪ್ರಶ್ನೆ ಹುಟ್ಟಿಕೊಂಡಿತು. ಆಗ ಆ ಸಹೋದರರಲ್ಲಿ ಒಬ್ಬ ಅವನು ಅನ್ನವಿಲ್ಲದೆ ಸಾಯುತ್ತಾನೆ ಎಂದ. ಹಾಗೇನಾಗುವುದಿಲ್ಲ ಎಂದ ಇನ್ನೊಬ್ಬ. ಆಗ ಮೊದಲನೆಯವನು, ಅವನು ಅದನ್ನು ಎಲ್ಲಿಯೂ ಮುರಿಸುವಂತಿಲ್ಲ; ಹಾಗೆ ಮಾಡ ಹೋದರೆ ತಕ್ಷಣವೆ ಅವನ ದಸ್ತಗಿರಿಯಾಗುತ್ತದೆ ಎಂದ. ಹೀಗೇ ವಾದ ನಡೆಯುತ್ತ ನಡೆಯುತ್ತ ತಮ್ಮ, ಹೇಗೂ ಮೂವತ್ತು ದಿನವಾದರೂ ಬದುಕಿರುತ್ತಾನೆ, ಜೈಲಿಗೆ ಹೋಗುವುದಿಲ್ಲ ಎಂದು ಇಪ್ಪತ್ತು ಸಾವಿರ ಪೌಂಡಿನ ಪಣ ಒಡ್ಡಿದ. ಅಣ್ಣ ಆ ಪಣ ಒಪ್ಪಿದ. ತಮ್ಮ ತಕ್ಷಣ ಬ್ಯಾಂಕಿಗೆ ಹೋಗಿ ಆ ನೋಟನ್ನು ತಂದ. ಇಂಗ್ಲಿಷರೇ ಹಾಗೆ–ಮೈತುಂಬ ಧೈರ್ಯ. ಅನಂತರ ತನ್ನ ಗುಮಾಸ್ತನಿಂದ ಅಂದವಾಗಿ ಒಂದು ಕಾಗದ ಬರೆಸಿದ. ಸೋದರರಿಬ್ಬರೂ ಆಗಿನಿಂದಲೂ ತಮಗೆ ಸರಿಹೋಗುವ ವ್ಯಕ್ತಿಗಾಗಿ ಕಾಯುತ್ತ ಕುಳಿತರು.

ಅನೇಕ ಪ್ರಾಮಾಣಿಕ ಮುಖಗಳು ಕಂಡವು. ಆದರೆ ಅವುಗಳಲ್ಲಿ ಬುದ್ಧಿಯ ಕಳೆ ಇರಲಿಲ್ಲ. ಬುದ್ಧಿವಂತ ಮುಖಗಳಲ್ಲಿ ಪ್ರಾಮಾಣಿಕತೆ ಕಾಣಲಿಲ್ಲ. ಎರಡೂ ಕಂಡಲ್ಲಿ ಒಡತನ ಕಾಣಲಿಲ್ಲ. ಅಥವಾ ಆ ಮುಖಗಳು ಅಪರಿಚಿತವಾಗಿರಲಿಲ್ಲ. ಏನಾದರೊಂದು ಕುಂದು ಇದ್ದೇ ಇರುತ್ತಿತ್ತು. ಆಗ ಆಕಡೆ ನಾನು ಬಂದೆ. ನಾನು ಎಲ್ಲ ರೀತಿಯಲ್ಲೂ ತಾವು ಕಾಯುತ್ತಿದ್ದ ವ್ಯಕ್ತಿ ಎಂದು ಅವರು ಒಪ್ಪಿದರು. ಹಾಗಾಗಿ ನಾನೀಗ ಅವರ ಮುಂದೆ ನಿಂತಿದ್ದೆ. ಅವರು ಪ್ರಶ್ನೆಗಳನ್ನು ಹಾಕಿ ನನ್ನ ಕತೆಯನ್ನೆಲ್ಲ ಹೊರಗೆಳೆದರು. ಕೊನೆಗೆ ನಾನು ಅವರ ಉದ್ದೇಶಕ್ಕೆ ಸರಿ ಹೊಂದುವ ವ್ಯಕ್ತಿ ಎಂದು ಹೇಳಿದರು. ನಾನು, "ಸಂತೋಷ. ಆ ಉದ್ದೇಶವೇನು...?" ಎಂದೆ. ಆಗ ಅವರಲ್ಲೊಬ್ಬ ನನ್ನ ಕೈಗೆ ಒಂದು ಲಕೋಟೆ ಕೊಟ್ಟು ಅದರಲ್ಲಿ ಎಲ್ಲ ವಿವರ ಇದೆ ಎಂದ. ನಾನು ಅದನ್ನು ತೆರೆಯುವುದರಲ್ಲಿದ್ದಾಗ ಅವನು, "ಕೂಡದು. ನಿನ್ನ ವಸತಿಗೆ ಹೋಗಿ ನಿಧಾನವಾಗಿ, ಎಚ್ಚರಿಕೆಯಿಂದ ನೋಡು, ದುಡುಕಬೇಡ" ಎಂದ. ನಾನು ಅವರಿಂದ ಬೀಳ್ಕೊಂಡೆ. ಅವರು ತಮ್ಮ ಯಾವುದೊ ಖುಷಿಗೊ, ತಮಾಷೆಗೊ, ನನ್ನನ್ನು ಬಳಸಿಕೊಳ್ಳುತ್ತಾರಲ್ಲ ಎಂದು ಮನಸ್ಸಿಗೆ ನೋವಾಯಿತು. ಶ್ರೀಮಂತರ, ಬಲವಂತರ ನಿಂದೆಗೆ ಪ್ರತಿಯಾಗಿ ನನ್ನ ಅಸಮಾಧಾನ ಸೂಚಿಸುವ ಸ್ಥಿತಿಯಲ್ಲಿ ನಾನಿಲ್ಲದ್ದರಿಂದ ಸಹಿಸಿಕೊಳ್ಳಬೇಕಾಯಿತು.

ಈಗ ಚರಂಡಿಗೆ ಬಿದ್ದ ಆ ಪೇರಲ ಹಣ್ಣನ್ನು ಯಾವ ಸಂಕೋಚವಾಗಲಿ ಬೆದರಿಕೆಯಾಗಲಿ ಇಲ್ಲದೆ ತಿನ್ನುವ ಸ್ಥಿತಿಯಲ್ಲಿದ್ದೆ. ಆದರೆ ಅದು ಅಲ್ಲಿರಲಿಲ್ಲ. ಈ ನತದೃಷ್ಟ ವ್ಯವಹಾರದಿಂದ ಅದನ್ನೂ ಕಳೆದುಕೊಂಡಿದ್ದೆ. ಇದರಿಂದ ಆ ಇಬ್ಬರ ಬಗೆಗೆ ಮನಸ್ಸು ಇನ್ನಷ್ಟು ರೋಷಗೊಂಡಿತು. ಅವರಿಂದ ಕಣ್ಮರೆಯಾದೊಡನೆ ಆ ಲಕೋಟೆಯನ್ನು ತೆರೆದೆ. ಅದರಲ್ಲಿ ಹಣವಿತ್ತು! ಒಂದು ಕ್ಷಣವನ್ನೂ ವ್ಯರ್ಥಮಾಡದೆ ಕಾಗದ ಮತ್ತು ಹಣವನ್ನು (ನೋಟು) ಜೇಬಿಗೆ ತುರುಕಿ ಹತ್ತಿರದ ಅಗ್ಗದ ಹೋಟಲಿಗೆ ಓಡಿದೆ. ಅಂತೂ ನಾನೂ ಉಂಡೆ! ಹೊಟ್ಟೆ ಇನ್ನೂ ಹಿಡಿಯಲಾರದಂತಾದಾಗ ನೋಟನ್ನು ಹೊರತೆಗೆದು ಅದು ಎಷ್ಟರದೆಂದು ನೋಡಿದೆ— ಮೂರ್ಛೆ ಬಂದಂತಾಯಿತು. ಹತ್ತು ಲಕ್ಷ ಪೌಂಡು! ತಲೆ ದಿಮ್ಮೆಂದಿತು.

ಹಾಗೇ ನಿಶ್ಚೇಷ್ಟಿತನಾಗಿ, ಸುಮಾರು ಒಂದು ನಿಮಿಷ ಕುಳಿತಿರಬಹುದು. ಅಷ್ಟರಲ್ಲಿ ಪ್ರಜ್ಞೆ ಮರಳಿತು. ನಾನು ಮೊಟ್ಟ ಮೊದಲು ಕಂಡದ್ದು ಹೋಟೆಲ್ ಮಾಲೀಕನನ್ನು. ಅವನ ಕಣ್ಣು ಆ ನೋಟಿನ ಮೇಲಿತ್ತು. ಅವನು ಕಲ್ಲಾಗಿ ಕೂತಿದ್ದ. ಅವನ ದೇಹ, ಆತ್ಮವೆಲ್ಲ ಅದನ್ನು ಪೂಜಿಸುವಂತಿತ್ತು. ಅವನ ಸ್ಥಿತಿ ನಾನೇನು ಮಾಡಬಹುದೆಂಬುದನ್ನು ಸೂಚಿಸಿತು. ಆ ಸಮಯದಲ್ಲಿ ವಿವೇಚನೆಯಿದ್ದವನು ಮಾಡಬಹುದಾದ ಒಂದೇ ಒಂದು ಕೆಲಸವನ್ನು ನಾನು ಮಾಡಿದೆ. ಆ ನೋಟನ್ನು ಅವನೆಡೆಗೆ ಚಾಚಿ, ಉದಾಸೀನನಂತೆ, "ದಯವಿಟ್ಟು ಚಿಲ್ಲರೆ ಕೊಡಿ," ಎಂದೆ.

ಆಗ ಅವನು ನಿದ್ದೆಯಿಂದ ಎಚ್ಚೆತ್ತವನಂತೆ

ಒಂದು ಸಲ ನನ್ನತ್ತ ನೋಡಿದ. ಆ ನೋಟನ್ನು ಮುರಿಸಲು ಆಗದ್ದಕ್ಕಾಗಿ ಸಾವಿರ ಕ್ಷಮೆ ಬೇಡಿದ; ಅದನ್ನು ಮುಟ್ಟಲಿಲ್ಲ. ಅದನ್ನು ನೋಡಿದಷ್ಟೂ ಅವನ ಕಣ್ಣು ತಣಿಯುವಂತೆ ಕಾಣಲಿಲ್ಲ. ಆದರೆ ಅದನ್ನು ಮುಟ್ಟಲಾರ–ಸಾಮಾನ್ಯ ಮಣ್ಣಿನ ಕೈ ಅದನ್ನು ಮುಟ್ಟಲಾರದಷ್ಟು ಅದು ಪವಿತ್ರವಾದುದು ಎಂಬಂತೆ.

''ನಿಮಗೆ ಅನನುಕೂಲವಾಗುತ್ತದೊ ಏನೊ-ಆದರೆ ನನ್ನ ಬಳಿ ಬೇರೆ ಹಣವಿಲ್ಲ. ದಯವಿಟ್ಟು ಚಿಲ್ಲರೆ ಕೊಡಿ," ಎಂದೆ.

ಆದರೆ, "ಅದರಿಂದೇನೂ ತೊಂದರೆಯಿಲ್ಲ" ಎಂದನವ. ಹಣಕ್ಕಾಗಿ ಸ್ವಲ್ಪ ಕಾಲ ತಡೆಯಲು ಸಿದ್ಧನಿದ್ದ. ನಾನು ಸದ್ಯ ಆ ಕಡೆ ಮತ್ತೆ ಸುಳಿಯದಿರಬಹುದು ಎಂದರೆ, "ಅದಕ್ಕೇನು, ಕಾಯುತ್ತೇನೆ. ಅಷ್ಟೇ ಅಲ್ಲ ತಮಗೆ ಬೇಕಾದಾಗ ಬಂದು, ಬೇಕಾದುದನ್ನು ತೆಗೆದುಕೊಳ್ಳಬಹುದು. ನಮ್ಮ ಲೆಕ್ಕ ನಮ್ಮಲ್ಲಿರಲಿ. ಏನೊ–ಋಷಿ ಸ್ವಭಾವದವರಾದ ಮಾತ್ರಕ್ಕೆ, ವೇಷ ಧರಿಸಿಕೊಂಡು ತಮಾಷೆ ಮಾಡಿದ ಮಾತ್ರಕ್ಕೆ ತಮ್ಮಂತಹ ಶ್ರೀಮಂತರನ್ನು ನಂಬಲು ಅನುಮಾನವೆ ?" ಎಂದ. ಇಷ್ಟು ಹೊತ್ತಿಗೆ ಇನ್ನೊಬ್ಬ ಗಿರಾಕಿ ಒಳ ಬರುತ್ತಿದ್ದುದನ್ನು ಕಂಡು ಮಾಲಿಕ ಆ ರಾಕ್ಷಸ ನೋಟನ್ನು ಮರೆಸಿಟ್ಟುಕೊಳ್ಳುವಂತೆ ಸೂಚಿಸಿ, ಬಾಗಿಲವರೆಗೂ ಬಾಗುತ್ತ ಬಂದು ನನ್ನನ್ನು ಬೀಳ್ಕೊಟ್ಟ.

ನಾನು ತಕ್ಷಣ 'ಆ' ಮನೆಗೆ ನೇರವಾಗಿ ಹೋದೆ. ಪೋಲೀಸರು ನನ್ನನ್ನು ಬೇಟೆಯಾಡುವ ಮುಂಚೆಯೆ, ಆದ ತಪ್ಪನ್ನು ಸರಿಪಡಿಸಿಕೊಳ್ಳಲು. ತಪ್ಪು ನನ್ನದಲ್ಲವಾದರೂ ನಾನು ಸಾಕಷ್ಟು ಬೆದರಿದ್ದೆ. ಯಾವನೊ ಭಿಕ್ಷುಕನಿಗೆ ಅಲೆಮಾರಿಗೆ, ಒಂದು ಪೌಂಡ್ ನೋಟೆಂದುಕೊಂಡು ಹತ್ತು ಲಕ್ಷ ಪೌಂಡ್ ನೋಟನ್ನು ಕೊಟ್ಟಿದ್ದೇವೆಂದು ಕಂಡಕೂಡಲೇ ಜನ ತಮ್ಮ ಅವಿವೇಕವನ್ನು ಅರಿತುಕೊಳ್ಳದೆ ಆ ಅಲೆಮಾರಿಯ ಮೇಲೆ ಸಿಟ್ಟಾಗುತ್ತಾರೆಂಬುದು ನನಗೆ ಗೊತ್ತು.

ಮನೆ ಸಮೀಪಿಸುತ್ತಿದ್ದಂತೆ ನನ್ನ ಉದ್ವೇಗ-ಸ್ವಲ್ಪ ಶಾಂತವಾಯಿತು. ಏಕೆಂದರೆ ಅಲ್ಲಿನ ವಾತಾವರಣ ಶಾಂತವಾಗಿತ್ತು. ತಪ್ಪು ಇನ್ನೂ ಗೋಚರಿಸಿಲ್ಲ ಎಂಬುದು ಖಚಿತವಾಯಿತು. ಗಂಟೆ ಬಾರಿಸಿದೆ. ಅದೇ ಸೇವಕ ಬಂದ. ಆ ಸೋದರರನ್ನು ಕಾಣಬೇಕೆಂದೆ. "ಅವರು ಹೊರಟು ಹೋದರು," ಎಂದ.

"ಹೋದರು? ಎಲ್ಲಿಗೆ?"

"ಪ್ರಯಾಣ ಹೋದರು."

"ಎಲ್ಲಿಗೆ?"

"ಯುರೋಪಿಗೆ."

"ಯುರೋಪಿಗೆ ?"

"ಹೌದು."

"ಯಾವ ಮಾರ್ಗವಾಗಿ?"

"ಗೊತ್ತಿಲ್ಲ."

"ಯಾವಾಗ ಬರುತ್ತಾರೆ ?"

"ಒಂದು ತಿಂಗಳಲ್ಲಿ ಎಂದಿದ್ದರು."

"ಒಂದು ತಿಂಗಳು! ಅನಾಹುತವೇ ಸರಿ! ಅವರೊಡನೆ ಹೇಗೆ ಸಂಪರ್ಕ ಪಡೆಯಬಹುದೆಂಬ ಬಗ್ಗೆ ಏನಾದರೂ ಸೂಚನೆಯಿದೆಯೆ? ಇದು ಬಹಳ ಮುಖ್ಯವಾದ ವಿಷಯ."

"ನಾನು ಕೊಡಲಾರೆ; ಅವರು ಎಲ್ಲಿಗೆ ಹೋದರು ಎಂಬುದು ನಿಜವಾಗಿಯೂ ನನಗೆ ತಿಳಿಯದು."

"ಹಾಗಾದರೆ ಅವರ ಕುಟುಂಬದವರನ್ನಾದರೂ ಕಾಣಬೇಕು."

"ಕುಟುಂಬದವರೂ ಹೋಗಿದ್ದಾರೆ. ತಿಂಗಳ ಹಿಂದೆಯೇ ಇಂಡಿಯಕ್ಕೊ ಈಜಿಪ್ಟಿಗೊ ಹೋಗಿರಬೇಕು."

"ಅಯ್ಯೊ, ಒಂದು ಭಾರಿ ತಪ್ಪು ಸಂಭವಿಸಿದೆ. ಈ ರಾತ್ರಿಯೊಳಗೆ ಅವರು ಹಿಂದಿರುಗಬಹುದು. ನಾನಿಲ್ಲಿಗೆ ಬಂದಿದ್ದೆ; ತಪ್ಪು ತಿದ್ದುವವರೆಗೆ ಬರುತ್ತಿರುತ್ತೇನೆ; ಅದಕ್ಕಾಗಿ ಅವರು ಹೆದರಬೇಕಾಗಿದ್ದಿಲ್ಲ– ಎಂದಿಷ್ಟು ಅವರಿಗೆ ಹೇಳುತ್ತೀಯಾ?"

"ಅವರು ಬಂದರೆ ಹೇಳುತ್ತೇನೆ. ಆದರೆ ಅವರು ಬರುವ ಸಂಭವವಿಲ್ಲ. ನೀವು ಇನ್ನೊಂದು ಗಂಟೆಯಲ್ಲಿ ಇಲ್ಲಿಗೆ ಬಂದು ವಿಚಾರಿಸಬಹುದು. ಎಲ್ಲ ಸರಿಯಾಗಿದೆ, ಬರಬೇಕಾದ ಸಮಯಕ್ಕೆ ಸರಿಯಾಗಿ ಬಂದು ನಿಮ್ಮನ್ನು ಪರೀಕ್ಷಿಸುತ್ತೇನೆ— ಎಂದು ನಿಮಗೆ ತಿಳಿಸಬೇಕು ಎಂದು ಅವರು ಹೇಳಿದ್ದಾರೆ."

ಅಂತೂ ಆ ಪ್ರಯತ್ನ ಬಿಟ್ಟು ನಾನು ಹೊರಡಬೇಕಾಯಿತು. ಎಂಥಾ ಒಗಟು! ಹುಚ್ಚು ಹಿಡಿಯುವಂತಾಗಿತ್ತು. ಸಮಯಕ್ಕೆ ಸರಿಯಾಗಿ ಹಿಂದಿರುಗುತ್ತಾರಂತೆ! ಏನರ್ಥ? ಬಹುಶಃ ಅವರ ಕಾಗದದಲ್ಲಿ ಅದರ ವಿವರಣೆ ಇರಬೇಕು. ಅದನ್ನು ಮರೆತೇ ಬಿಟ್ಟಿದ್ದೆ. ಈಗ ಅದನ್ನು ಹೊರತೆಗೆದು ಓದಿದೆ. ಅದರಲ್ಲಿದ್ದುದಿಷ್ಟು

"ನಿನ್ನ ಮುಖಲಕ್ಷಣದಿಂದ ಹೇಳಬಹುದಾದರೆ, ನೀನು ಬುದ್ಧಿವಂತ ಪ್ರಾಮಾಣಿಕ. ನೀನು ಬಡವ, ಅಪರಿಚಿತ ಎಂದು ಭಾವಿಸಿದ್ದೇವೆ. ಇದರೊಡನೆ ಒಂದಿಷ್ಟು ಹಣವಿದೆ. ಅದನ್ನು ನಿನಗೆ ಮೂವತ್ತು ದಿನಗಳ ಅವಧಿಗೆ ಸಾಲ ಕೊಟ್ಟಿದ್ದೇವೆ. ಬಡ್ಡಿಯಿಲ್ಲ. ಆ ಅವಧಿಯ ಕೊನೆಗೆ ಈ ಮನೆಗೆ ಬಾ. ನಿನ್ನ ಮೇಲೆ ಒಂದು ಪಣ ಕಟ್ಟಿದ್ದೇವೆ. ಅದರಲ್ಲಿ ನಾನು ಗೆದ್ದರೆ, ನನ್ನಲ್ಲಿ ಸಿಗಬಹುದಾದ, ನಿನಗೆ ಗೊತ್ತಿರುವ, ನಿನ್ನ ಸಾಮರ್ಥ್ಯಕ್ಕೆ ಒಗ್ಗುವ ಯಾವ ಹುದ್ದೆಯನ್ನಾದರೂ ನಿನಗೆ ಬಹುಮಾನವಾಗಿ ಕೊಡುತ್ತೇನೆ."

ಸಹಿಯಿಲ್ಲ, ವಿಳಾಸವಿಲ್ಲ, ತಾರೀಕಿಲ್ಲ.

ಅಂತೂ ಒಳ್ಳೇ ಬಿಕ್ಕಟ್ಟಿನಲ್ಲಿ ಸಿಕ್ಕೆ! ನಿಮಗೇನೊ ಹಿನ್ನೆಲೆಯನ್ನೆಲ್ಲ ತಿಳಿಸಿದ್ದೇನೆ. ಆದರೆ ನನಗೆ ಆಗ ಅದೇನೂ ಗೊತ್ತಿರಲಿಲ್ಲ. ಅಷ್ಟೆಲ್ಲಾ ಅಗಾಧವಾದ, ಹಿಂದು ಮುಂದೇನೂ ತಿಳಿಯದ ಒಗಟಾಗಿ ಬಿಟ್ಟಿತ್ತು ಅದು. ನನಗೆ ತೊಂದರೆ ಕೊಡಲು ಹೂಡಿದ ಆಟವೇ? ಅಥವಾ ನನ್ನ ಮೇಲಿನ ಕರುಣೆಯಿಂದ ಹೀಗೆ ಮಾಡಿದ್ದೆ?– ಏನೊಂದೂ ತಿಳಿಯದು. ಪಾರ್ಕಿಗೆ ಹೋಗಿ ಕುಳಿತು ಮುಂದೇನು ಮಾಡಬೇಕೆಂಬುದನ್ನು ಯೋಚಿಸಲು ಪ್ರಯತ್ನಿಸಿದೆ. ಸುಮಾರು ಒಂದು ಗಂಟೆಯ ಆಲೋಚನೆಯ ನಂತರ ಮನಸ್ಸಿನಲ್ಲಿ ರೂಪುಗೊಂಡದ್ದು ಇಷ್ಟು—

ಅವರ ಉದ್ದೇಶ ಒಳ್ಳೆಯದಿರಬಹುದು, ಕೆಟ್ಟದಿರಬಹುದು- ಅದಂತೂ ತಿಳಿಯುವಂತಿಲ್ಲ. ಹೋಗಲಿ, ಅವರದೇನು ಆಟವೊ, ಹೂಟವೊ, ಪ್ರಯೋಗವೊ ಇದೆ. ಅದೇನು ಎಂಬುದನ್ನು ತಿಳಿಯುವ ದಾರಿಯಿಲ್ಲ–ಹೋಗಲಿ, ಏನೊ ಹಣ ಇದೆ–ಅದೇನು ನಿರ್ಧರಿಸುವ ದಾರಿಯಿಲ್ಲ. ಅದೂ ಹೋಗಲಿ. ಅಲ್ಲಿಗೆ ಅನಿರ್ದಿಷ್ಟ ಅಂಶಗಳನ್ನೆಲ್ಲ ಕೈಬಿಟ್ಟಂತಾಯಿತು. ಇನ್ನುಳಿದದ್ದೆಲ್ಲ ನಿಷ್ಕೃಷ್ಟ, ಘನ, ನಿಶ್ಚಿತ ವರ್ಗಕ್ಕೆ ಸೇರಬಹುದಾದದ್ದು. ಈಗ ಬ್ಯಾಂಕ್ ಆಫ್ ಇಂಗ್ಲೆಂಡಿಗೆ ಹೋಗಿ ಈ ನೋಟು ಯಾರದ್ದೊ ಅವರ ಲೆಕ್ಕಕ್ಕೆ ಜಮಾ ಮಾಡಿಕೊಳ್ಳಿ ಎಂದರೆ ಮಾಡಿಕೊಳ್ಳುತ್ತಾರೆ: ನನಗೆ ಆತ ಗೊತ್ತಿಲ್ಲದಿದ್ದರೂ ಅವರಿಗೆ ಅವನು ಗೊತ್ತು. ಆದರೆ ಈ ನೋಟು ನಿನ್ನ ಬಳಿ ಹೇಗೆ ಬಂತೆಂದು ಅವರು ಕೇಳುತ್ತಾರೆ. ನಿಜ ಹೇಳಿದರೆ ನನ್ನನ್ನು ಹುಚ್ಚರ ಆಸ್ಪತ್ರೆಗೆ ಸೇರಿಸುತ್ತಾರೆ; ಸುಳ್ಳು ಹೇಳಿದರೆ ಜೈಲು ಸೇರುತ್ತೇನೆ. ಈ ನೋಟನ್ನು ಮತ್ತಾವುದಾದರೂ ಬ್ಯಾಂಕಿಗೆ ಒಯ್ದು ಇದರ ಮೇಲೆ ಸಾಲ ತೆಗೆಯಲು ಪ್ರಯತ್ನಿಸಿದರೂ ಜೈಲು ಕಟ್ಟಿಟ್ಟದ್ದೆ. ಆ ಸೋದರರು ಹಿಂತಿರುಗುವ ವರೆಗೆ ನನಗೆ ಇಷ್ಟವಿರಲಿ ಇಲ್ಲದಿರಲಿ ಈ ಹೊರೆಯನ್ನು ನಾನು ಹೊತ್ತು ತಿರುಗಲೇ ಬೇಕು. ಇದು ನನ್ನ ಪಾಲಿಗೆ ಒಂದು ಹಿಡಿ ಬೂದಿಯಷ್ಟೇ ನಿಷ್ಪ್ರಯೋಜಕವಾದರೂ ನನ್ನ ಹೊಟ್ಟೆಗಾಗಿ ಭಿಕ್ಷೆ ಬೇಡುತ್ತ, ಇದನ್ನು ಕಾಯಲೇಬೇಕು— ಇದನ್ನು ಯಾರಿಗಾದರೂ ಕೊಟ್ಟುಬಿಡುವಂತೆಯೂ ಇಲ್ಲ. ಪ್ರಾಮಾಣಿಕ ವ್ಯಕ್ತಿಯಾಗಿರಲಿ, ದರೋಡೆಕೋರನೂ ಇದನ್ನು ತೆಗೆದುಕೊಳ್ಳುವುದಿಲ್ಲ— ಇದನ್ನು ಮುರಿಸುವ ಸಾಹಸಕ್ಕೆ ಹೋಗುವುದೂ ಇಲ್ಲ. ಆ ಸೋದರರೇನೊ ಕ್ಷೇಮವಾಗಿದ್ದಾರೆ– ನಾನದನ್ನು ಕಳೆಯಲಿ, ಸುಡಲಿ, ಅವರು ಕ್ಷೇಮ. ಯಾವ ಕ್ಷಣದಲ್ಲಾದರೂ ಬ್ಯಾಂಕು ಈ ನೋಟಿಗೆ ಹಣ ಕೊಡದಂತೆ ಅವರು ತಡೆಯಬಹುದು. ಅವರ ಹಣ ಅವರಿಗೆ ಸಿಕ್ಕೇ ಸಿಗುತ್ತದೆ. ಆದರೆ ಈ ಮಧ್ಯೆ ನಾನು ಮಾತ್ರ ಯಾವ ಲಾಭವೂ ಇಲ್ಲದೆ ಒಂದು ತಿಂಗಳು ನರಳಬೇಕು. ಇನ್ನೇನು ಹಣ ಗೆಲ್ಲಲು ನನ್ನಿಂದ ಸಹಾಯವಾದರೆ ಮಾತ್ರ ನನಗೆ ಅವರು ಮಾತು ಕೊಟ್ಟಂತೆ ಕೆಲಸ ಸಿಗಬಹುದು. ಅದನ್ನು ಪಡೆಯಲೇ ಬೇಕು— ಅವರಂಥ ವ್ಯಕ್ತಿಯ ಬಳಿ ಪಡೆಯಲೇಬೇಕಾದ ಯಾವುದಾದರೂ ಹುದ್ದೆ ಇದ್ದೇ ಇರುತ್ತದೆ.

ಆ ಹುದ್ದೆಯ ಬಗ್ಗೆ ಬಹಳಷ್ಟು ಯೋಚಿಸಿದೆ; ನನ್ನ ಆಸೆಗಳು ಏರತೊಡಗಿದುವು. ಆ ಹುದ್ದೆಗೆ ಸಂಬಳ ಹೆಚ್ಚಾಗಿಯೇ ಇರುತ್ತದೆ. ಇನ್ನೊಂದು ತಿಂಗಳಲ್ಲಿ ಅದು ಆರಂಭವಾಗುತ್ತದೆ. ಅನಂತರ ಎಲ್ಲ ಸರಿಹೋಗುತ್ತದೆ. ಇಷ್ಟು ಯೋಚಿಸುತ್ತಿದ್ದಂತೆಯೇ ಉತ್ಸಾಹಿತನಾದೆ. ಮತ್ತೆ ಬೀದಿ ಬೀದಿ, ಅಲೆಯತೊಡಗಿದೆ. ಬಟ್ಟೆ ಅಂಗಡಿ ಕಣ್ಣಿಗೆ ಬಿದ್ದಾಗ ನನ್ನ ಚಿಂದಿಯನ್ನೆಲ್ಲಾ ಕಳಚಿ ಮತ್ತೊಮ್ಮೆ ಗೌರವಸ್ಥ ಉಡುಪನ್ನು ತೊಡುವ ಬಯಕೆ ತೀವ್ರವಾಯಿತು. ಆದರೆ ಕೊಳ್ಳಬಲ್ಲೆನೆ? ಇಲ್ಲ. ನನ್ನ ಬಳಿ ಈ ನೋಟಿನ ಹೊರತು ಮತ್ತೇನೂ ಇಲ್ಲ. ಅಂಗಡಿಯನ್ನು ದಾಟಿ ನಡೆದೆ. ಆದರೆ ಸ್ವಲ್ಪ ಹೊತ್ತಿನಲ್ಲೆ ಆ ಅಂಗಡಿಯ ಬಳಿಯೇ ಸುಳಿಯುತ್ತಿದ್ದೆ. ಆಮಿಷ ಬೆನ್ನಟ್ಟಿ ಕಾಡುತ್ತಿತ್ತು ಆ ಅಂಗಡಿಯ ಮುಂದೆ ಆರೇಳು ಬಾರಿಯಾದರೂ ಸುಳಿದಿರಬೇಕು. ಕೊನೆಗೆ ಸೋತೆ–ಸೋಲಲೇಬೇಕಾಯಿತು. ಅಂಗಡಿಯವನೊಬ್ಬನ ಬಳಿ ಹೋಗಿ ಅಳತೆ ಸರಿಬಾರದೆ ಬಿಟ್ಟ ಸೂಟು ಯಾವುದಾದರೂ ಇದೆಯೆ? ಎಂದು ಕೇಳಿದೆ. ಅವನು ತಲೆಯಾಡಿಸಿ ಇನ್ನೊಬ್ಬನನ್ನು ತೋರಿಸಿದ– ಮಾತಾಡಲಿಲ್ಲ. ಆ ಇನ್ನೊಬ್ಬನ

ಬಳಿ ಹೋದರೆ ಅವನು ಮತ್ತೊಬ್ಬನನ್ನು ತೋರಿಸಿದ- ಮಾತಿಲ್ಲದೆ. ಆ ಮತ್ತೊಬ್ಬ 'ಈಗ ಬಂದೆ' ಎಂದ. ಅವನ ಕೆಲಸ ಮುಗಿಯುವ ವರೆಗೆ ಕಾದೆ, ಅವನು ಹಿಂದುಗಡೆಯ ಒಂದು ರೂಮಿಗೆ ಕರೆದೊಯ್ದು ಬೇಡವೆಂದು ಬಿಟ್ಟ ಉಡುಪುಗಳ ರಾಶಿಯನ್ನೆಲ್ಲ ಕಿತ್ತಾಡಿ ಯಾವುದೊ ಒಂದು ಅತ್ಯಂತ ವಿಕಾರವಾದ ಸೂಟು ತೆಗೆದುಕೊಟ್ಟ. ಹಾಕಿ ನೋಡಿದೆ- ಹೋದ ಲಿಲ್ಲ. ನೋಡಲು ಚೆನ್ನಾಗಿಯೂ ಇರಲಿಲ್ಲ. ಆದರೆ ಹೊಸದು- ನನಗೂ ಅದನ್ನು ಪಡೆಯುವ ಕಾತರ. ಅದರಲ್ಲಿ ಕುಂದೇನೂ ಎಣಿಸದೆ ಒಪ್ಪಿ ಕೊಂಡೆ. ಸ್ವಲ್ಪ ಹಿಂಜರಿಯುತ್ತ, "ನೀವು ಹಣಕ್ಕಾಗಿ ಸ್ವಲ್ಪ ದಿನ ಅವಕಾಶ ಕೊಟ್ಟಿದ್ದರೆ ಉಪಕಾರವಾಗುತ್ತಿತ್ತು; ನನ್ನ ಬಳಿ ಚಿಲ್ಲರೆಯಿಲ್ಲ," ಎಂದೆ.

ಆ ಪ್ರಾಣಿ ವ್ಯಂಗ್ಯವಾಗಿ, "ಇಲ್ಲವೆ? ನಿಜ, ನಾನು ಇರುತ್ತದೆಂದು ನಿರೀಕ್ಷಿಸಿಯೂ ಇರಲಿಲ್ಲ. ತಮ್ಮಂತಹ ಮಹನೀಯರು ಯಾವಾಗಲೂ ಭಾರಿ ದೊಡ್ಡ ನೋಟನ್ನೇ ಹೊತ್ತು ತಿರುಗು ತ್ತೀರಿ ಎಂದೇ ನನ್ನ ನಿರೀಕ್ಷೆ," ಎಂದ.

ನನಗೆ ಅಸಮಾಧಾನವಾಯಿತು. "ಅಯ್ಯಾ, ಅಪರಿಚಿತರನ್ನು ಅವರ ಒಟ್ಟೆಯ ಮೇಲಿಂದ ಅಳೆಯಬಾರದು. ಈ ಸೂಟಿನ ಹಣ ತೆರಬಲ್ಲೆ. ಆದರೆ ದೊಡ್ಡ ನೋಟು ಕೊಟ್ಟು ನಿನ್ನನ್ನು ಇಕ್ಕಟ್ಟಿಗೆ ಸಿಕ್ಕಿಸಲು ಇಷ್ಟಪಡುವದಿಲ್ಲ," ಎಂದೆ.

ಅವನು ತಕ್ಷಣ ತನ್ನ ರೀತಿಯನ್ನು ಬದಲಿಸಿ ದರೂ ಸ್ವಲ್ಪ ಧೋರಣೆಯಿಂದಲೇ, "ನಿಮಗೆ

ಬೇಸರ ಉಂಟು ಮಾಡುವುದು ನನ್ನ ಉದ್ದೇಶ-ವಲ್ಲ, ಆದರೆ ನಿಮ್ಮ ನೋಟಿಗೆ ನಮ್ಮಲ್ಲಿ ಚಿಲ್ಲರೆ ಇರಲಾರದು ಎಂಬ ತೀರ್ಮಾನಕ್ಕೆ ನೀವು ಬರಬಾರದಿತ್ತು. ಎಂತಹ ನೋಟಿಗಾದರೂ ನಮ್ಮಲ್ಲಿ ಚಿಲ್ಲರೆ ಸಿಗುತ್ತದೆ," ಎಂದ.

"ಹಾಗೊ ? ಹಾಗಾದರೆ ಕ್ಷಮಿಸಿ," ಎನ್ನುತ್ತ ನೋಟನ್ನು ಅವನ ಕೈಗೆ ಕೊಟ್ಟೆ.

ಅವನು ಮುಗುಳು ನಗುತ್ತ ಸ್ವೀಕರಿಸಿದ. ಆ ಮುಗುಳುನಗು ಎಂದರೆ ಮುಖದ ತುಂಬ ಹರಡಿಕೊಳ್ಳುವಂತಹುದು. ಸಣ್ಣ ಸುಕ್ಕು, ಮಡಕೆ– ಸುಳಿ ಸುಳಿಯಾಗಿ ಹರಡುವಂತಹುದು. ಕೊಳದಲ್ಲಿ ಇಟ್ಟಿಗೆ ಎಸೆದಾಗ ಬಿದ್ದ ಸ್ಥಳವನ್ನು ನೆನಪಿಗೆ ತರುವಂತಹುದು. ಆ ನೋಟಿನ ಮೇಲೆ ಕಣ್ಣು ಹಾಯಿಸುತ್ತಿದ್ದಂತೆಯೆ ಆ ಮುಗುಳು ನಗು ಹಾಗೇ ಹೆಪ್ಪುಗಟ್ಟಿತು, ಹಳದಿಯಾಯಿತು. ವೆಸೂವಿಯಸ್ ಅಗ್ನಿಪರ್ವತದ ಅಚೆ ಈಚೆ ಹರಡಿದ ಶಿಲಾರಸ ಹರಿಯುತ್ತಿದ್ದರೀತಿಯೆ ಅದರ ಅಲೆಗಳು ಹೆಪ್ಪುಗಟ್ಟುತ್ತವಲ್ಲ ಹಾಗಾ-ಯಿತು. ಅಂತಹ ಮುಗುಳುನಗು ಹಾಗೆ ನೆಲೆ ನಿಂತುದನ್ನು ನಾನೆಂದೂ ಕಂಡಿರಲಿಲ್ಲ. ಆ ಮನುಷ್ಯ ಆ ನೋಟನ್ನು ಹಾಗೇ ಹಿಡಿದು, ಹಾಗೇ ನೋಡುತ್ತ, ಹಾಗೇ ನಿಂತುಬಿಟ್ಟ.

ಅಂಗಡಿಯ ಯಜಮಾನ ಏನು ನಡೆಯುತ್ತಿದೆ ಎಂದು ನೋಡಬಂದವನು ಚುರುಕಾಗಿ, "ಏನು? ಏನದು ? ತೊಂದರೆಯೇನು ? ಏನು ಬೇಕಾ-ಗಿದೆ ?" ಎಂದ.

"ತೊಂದರೆಯೇನಿಲ್ಲ; ಚಿಲ್ಲರೆಗಾಗಿ ಕಾಯು-ತ್ತಿದ್ದೇನೆ," ಎಂದೆ.

"ಚಿಲ್ಲರೆ ಕೊಟ್ಟು ಬಿಡು, ಟಾಡ್. ಚಿಲ್ಲರೆ ಕೊಟ್ಟು ಕಳಿಸು."

ಟಾಡ್ ಉತ್ತರಿಸಿದ: "ಚಿಲ್ಲರೆ ಕೊಡು ! ಹೇಳುವುದು ಸುಲಭ. ನೋಟು ಒಮ್ಮೆ ನೀವೇ ನೋಡಿ."

ಯಜಮಾನ ನೋಡಿದ, ಸಣ್ಣಗೆ, ಅರ್ಥ-ಪೂರ್ಣವಾಗಿ ಸಿಳ್ಳು ಹಾಕಿದ. ಕೈ ಬಿಟ್ಟ ಬಟ್ಟೆಗಳ ರಾಶಿಯೊಳಗೆ ನುಗ್ಗಿ, ಅವನ್ನೆಲ್ಲ ಕಿತ್ತಾಡುತ್ತ, ತನ್ನಷ್ಟಕ್ಕೆ ತಾನೆ ಎಂಬಂತೆ ಉದ್ವೇಗದಿಂದ ಮಾತಾಡತೊಡಗಿದ: "ವಿಕ್ಷಿಪ್ತ ಲಕ್ಷಾಧೀಶನಿಗೆ ಅಂತಹ ಯಃಕಶ್ಚಿತ್ ಸೂಟನ್ನೇ ಮಾರೋದು! ಟಾಡ್ ಬೆಪ್ಪ– ಹುಚ್ಚು ಬೆಪ್ಪ. ಯಾವಾಗಲೂ ಇಂಥದೇ ಕೆಲಸ ಇವನು ಮಾಡೋದು. ಬಂದ ಲಕ್ಷಾಧೀಶರನ್ನೆಲ್ಲ ಓಡಿಸುತ್ತಾನೆ. ಭಿಕ್ಷುಕನಿಗೂ ಲಕ್ಷಾಧೀಶನಿಗೂ ವ್ಯತ್ಯಾಸವೇ ಗೊತ್ತಾಗೋದಿಲ್ಲ. ಹ್ಞಾ, ನಾನು ಹುಡುಕುತ್ತಿದ್ದುದು ಇಲ್ಲಿದೆ. ಅದನ್ನು ಕಿತ್ತೆಸೆ-ಯಿರಿ ಸಾರ್, ಬೆಂಕಿಗೆ ಹಾಕಿ ಅದನ್ನ. ದಯ-ವಿಟ್ಟು, ಇದನ್ನು ಧರಿಸುವ ಕೃಪೆ ಮಾಡಿ. ಇದು ಸಾರ್ ತಮಗೆ ಹೇಳಿಮಾಡಿಸಿದ್ದು ! ಸರಳ, ಶ್ರೀಮಂತ, ಮಿತ. ಆದರೆ ಡ್ಯೂಕರ ಗಾಂಭೀರ್ಯ ಘನತೆ ಇರುವಂಥದ್ದು. ಒಬ್ಬ ವಿದೇಶಿ ರಾಜಕುಮಾರನಿಗಾಗಿ ಹೊಲೆಸಿದ್ದು. ತಮಗೆ ಆತನ ಪರಿಚಯ ಇರಬಹುದು. ಹ್ಯಾಲಿಫಾಕ್ಸಿನ ಹಾಸ್ಪೊಡಾರ್ ಪ್ರಭು. ಅವನ ತಾಯಿಯ ಮರಣ ಸನ್ನಿಹಿತವಾದದ್ದರಿಂದ ಇದನ್ನು ಬಿಟ್ಟು ಶೋಕಸೂಚಕ ಸೂಟನ್ನು ಕೊಂಡ. ತಾಯಿ ಸಾಯಲಿಲ್ಲ ಎನ್ನಿ. ಎಲ್ಲ ನಮ್ಮಿಚ್ಛೆ-ಯಂತೆಯೆ ಆಗಬೇಕೆಂದರೆ ಎಲ್ಲಿ ಆಗುತ್ತೆ? ಆಹ! ಟ್ರೌಜರ್ಸ್ ಎಲ್ಲ ಸರಿ. ಕೋಟು ಅಳತೆ ಕೊಟ್ಟು ಹೊಲಿಸಿದಂತಿದೆ. ಎಷ್ಟು ಚೆನ್ನಾಗಿ ಕೂರುತ್ತೆ ಸಾರ್ ನಿಮಗೆ! ಇಷ್ಟು ಚೆನ್ನಾಗಿ ಒಪ್ಪಿದ್ದು ನನ್ನ ಜೀವಮಾನದಲ್ಲೆ ಕಂಡಿಲ್ಲ ಸಾರ್ !"

ನನ್ನ ತೃಪ್ತಿಯನ್ನು ಸೂಚಿಸಿದೆ.

"ಸರಿ ಸಾರ್ ಸರಿ, ಸದ್ಯಕ್ಕೆ ಇದು ಸಾಕು ಸಾರ್. ನಿಮ್ಮ ಅಳತೆಗೇ ಸರಿಯಾಗಿ ನಾವು ಹೊಲಿದಾಗ ನೋಡುವಿರಂತೆ. ಟಾಡ್ ಇಲ್ಲಿ ಬಾ, ಪುಸ್ತಕ ಪೆನ್ನು ತಾ. ಹಚ್ಚಿಕೊ ಕಾಲು ಉದ್ದ ೩೨ ಇಂಚು..." ಇತ್ಯಾದಿ ಇತ್ಯಾದಿ. ನಾನು ಚಕಾರ ಹೊರಡಿಸುವಷ್ಟರಲ್ಲಿ ನನ್ನನ್ನೆಲ್ಲ ಅಳೆದು-ಬಿಟ್ಟಿದ್ದ. ಎಲ್ಲಾ ತರಹದ ಸೂಟುಗಳಿಗಾಗಿ ಆರ್ಡರ್ ಕೊಟ್ಟಿದ್ದ.

ಮಾತಾಡುವುದಕ್ಕೆ ಸ್ವಲ್ಪ ಅವಕಾಶ ಸಿಕ್ಕಾಗ ನಾನೆಂದೆ: "ಇಲ್ಲಿ ನೋಡಿ. ಒಂದೊ ಅನಿರ್ದಿಷ್ಟ ಕಾಲದವರೆಗೆ ಕಾಯಬೇಕು; ಇಲ್ಲವೆ ಈ ನೋಟನ್ನು ಮುರಿಸಬೇಕು. ಹಾಗಿಲ್ಲದೆ ನಾನು ಇವೆಲ್ಲ ಆರ್ಡರು ಕೊಡುವಂತಿಲ್ಲ."

"ಅನಿರ್ದಿಷ್ಟ ಕಾಲ ! ಬಹಳ ಸಣ್ಣ ಶಬ್ದ

ಸಾರ್–ಸಣ್ಣ ಶಬ್ದ. ಅನಂತಕಾಲ ಎನ್ನಿ! ಅದು ಸಾರ್, ಸರಿಯಾದ ಶಬ್ದ. ಟಾಡ್ ಎಲ್ಲ ತಕ್ಷಣ ಆಗಬೇಕು. ಅವನ್ನೆಲ್ಲ ತಡವಿಲ್ಲದೆ ಈ ಮಹ-ನೀಯರ ಮನೆಗೆ ತಲುಪಿಸಬೇಕು. ಚಿಲ್ಲರೆ ಗಿರಾಕಿ-ಗಳು ಬೇಕಾದರೆ ಕಾದಿರಲಿ. ನಿಮ್ಮ ವಿಳಾಸ ಬರೆದುಕೋ ಆಮೇಲೆ..."

"ನನ್ನ ವಸತಿ ಬದಲಾಯಿಸುವುದರಲ್ಲಿದ್ದೇನೆ, ಆಮೇಲೆ ಬಂದು ನನ್ನ ಹೊಸ ವಿಳಾಸ ಕೊಡು ತ್ತೇನೆ."

"ಅದಕ್ಕೇನು ಸಾರ್–ಆಗಲಿ. ತಾಳಿ ಸಾರ್, ನಾನೇ ಅಲ್ಲಿಯವರೆಗೆ ಬಂದು ತಮ್ಮನ್ನು ಬೀಳ್ಕೊಡುತ್ತೇನೆ. ನಮಸ್ಕಾರ ಸಾರ್."

ಮುಂದೇನು ನಡೆದೀತೆಂಬುದು ನಿಮಗೆ ತೋಚುವುದಿಲ್ಲವೆ ? ಸಹಜವಾಗಿಯೆ, ನನಗೆ ಬೇಕಾದುದನ್ನು ಕೊಂಡುಕೊಂಡು ಚಿಲ್ಲರೆ ಕೇಳುವ ಹವ್ಯಾಸಕ್ಕೆ ಇಳಿದೆ. ಒಂದು ವಾರದಲ್ಲಿ ಬೇಕಾದ ಎಲ್ಲ ಅನುಕೂಲ ವೈಭವಗಳನ್ನು ಪಡೆದೆ. ಹ್ಯಾನೋವರ್ ಚೌಕದ ಒಂದು ಭಾರಿ ಖಾಸಗಿ ಹೋಟೆಲಿನಲ್ಲಿ ವಸತಿ ಪಡೆದೆ. ಊಟ ಅಲ್ಲೇ ಮಾಡಿದರೂ ಬೆಳಗಿನ ಉಪಾಹಾರಕ್ಕೆ ಮಾತ್ರ ಹ್ಯಾರಿಸನ ಅಗ್ಗದ ಹೋಟಲಿಗೇ ಹೋಗುತ್ತಿದ್ದೆ. ನನ್ನ ಮೊದಲ ಊಟ ಉಂಡಿದ್ದು ಅಲ್ಲಿಯೇ. ಹ್ಯಾರಿಸನಿಗೆ ನನ್ನಿಂದ ಭಾಗ್ಯ ಒದಗಿ ಬಂತು. ಹತ್ತು ಲಕ್ಷ ಪೌಂಡಿನ ವಿದೇಶಿ ಹುಚ್ಚ ಈ ಹೋಟಲಿನ ಪೋಷಕ ಎಂಬ ಸುದ್ದಿ ಬಹು-ಬೇಗ ಹರಡಿತು. ಅಷ್ಟು ಸಾಕಾಯಿತು. ಅಲ್ಲಿಯ ವರೆಗೆ ಖರ್ಚನ್ನು ಸರಿದೂಗಿಸಲಾಗದೆ ಒದ್ದಾಡು ತ್ತಿದ್ದ ಹೋಟಲು ಗಿರಾಕಿಗಳಿಂದ ತುಂಬತೊಡ-ಗಿತು. ಹ್ಯಾರಿಸನು ತನ್ನ ಕೃತಜ್ಞತೆ ತೋರಿಸಲು ಒತ್ತಾಯಿಸಿ ಸಾಲ ಕೊಡತೊಡಗಿದ–ಬೇಡ ಎನ್ನುವಂತೆಯೇ ಇರಲಿಲ್ಲ. ಹೀಗೆ ಪಾಪರಾದ ನನಗೆ ಹಣ ಸಿಗತೊಡಗಿ ಭಾರಿ ಶ್ರೀಮಂತ-ನಂತೆಯೇ ಜೀವಿಸಲು ಆರಂಭಿಸಿದೆ. ಇಂದೋ ನಾಳೆಯೊ ಎಲ್ಲ ಕುಸಿಯುತ್ತದೆಂದು ತಿಳಿದಿದ್ದರೂ ಈಜಬೇಕು ಇಲ್ಲ ಮುಳುಗಬೇಕು ಎಂಬ ಸ್ಥಿತಿಗೆ ಬಂದಿದ್ದೆ. ಬರುವ ಅನಾಹುತದ ಅರಿವು ಈ ಹಾಸ್ಯಾಸ್ಪದ ಸಂಗತಿಗೆ ದುರಂತದ ಛಾಯೆಯೊಡ್ಡಿತ್ತು. ರಾತ್ರಿಯ ಕತ್ತಲಿನಲ್ಲಿ ದುರಂತದ ಭಾಗ ಮೇಲಾಗುತ್ತಿತ್ತು. ಬೆದರಿ ಸುತ್ತಿತ್ತು. ನಿದ್ದೆಯಿಲ್ಲದೆ ನರಳುತ್ತ ಹೊರ-ಳಾಡುತ್ತಿದ್ದೆ. ಬೆಳಗಿನೊಡನೆಯೆ ದುರಂತ ಕಣ್ಮರೆಯಾಗಿ ಗಾಳಿಯಲ್ಲಿ ತೇಲುತ್ತಿದ್ದೆ. ತಲೆ ತಿರುಗುವಷ್ಟು, ಮತ್ತೇರುವಷ್ಟು, ಸುಖಿ-ಯಾಗಿದ್ದೆ.

ಅದೆಲ್ಲ ಸಹಜವೆ, ಪ್ರಪಂಚದ ಪ್ರಥಮ ನಗರದಲ್ಲಿ ನಾನಾಗಲೆ ಪ್ರಸಿದ್ಧನಾಗಿದ್ದೆ. ಅದು ನನ್ನ ತಲೆ ತಿರುಗಿಸಿತ್ತು. ಯಾವ ಪೇಪರನ್ನೆ ತೆಗೆದುಕೊಳ್ಳಿ–ಇಂಗ್ಲಿಷ್, ಸ್ಕಾಚ್, ಐರಿಷ್-ಯಾವುದೇ ಆಗಲಿ, 'ವಾಸ್-ಕೋಟ್ ಜೇಬಿನ ಹತ್ತು ಲಕ್ಷ ಪೌಂಡಿ"ನವನ ಇತ್ತೀಚಿನ ಕಾರ್ಯದ ಮಾತುಗಳಿಲ್ಲದೆ ಇರುವಂತಿರಲಿಲ್ಲ ಮೊದ ಮೊದಲು "ವ್ಯಕ್ತಿ- ವಿಷಯ" ಕಾಲಂದಲ್ಲಿ ಎಲ್ಲಕ್ಕಿಂತ ಕೆಳಗೆ ನನ್ನ ವಿಷಯ ಇರುತ್ತಿತ್ತು.




PIN CODE
FOR
FAST MAIL

ಆಮೇಲೆ ನನ್ನ ಪ್ರಸಿದ್ಧಿ ಹರಡಿದಂತೆಲ್ಲ ಮೇಲು ಮೇಲಕ್ಕೆ ಹೋಗುತ್ತ ಕೊನೆಗೊಮ್ಮೆ ಕಾಲವಿನ ತುತ್ತತುದಿಯನ್ನು ತಲುಪಿದೆ.

ರಾಜಮನೆತನದವರನ್ನು ಬಿಟ್ಟರೆ, ಇಂಗ್ಲೆಂಡಿನ ಮುಖ್ಯ ಮಠಾಧಿಪತಿಯನ್ನು ಬಿಟ್ಟರೆ ನಾನೆ ಎಲ್ಲರಿಗಿಂತ ಮೇಲಿನವನಾದೆ. ಆದರೆ ಇದು ಸುಪ್ರಸಿದ್ಧಿಯಲ್ಲ ಕುಪ್ರಸಿದ್ಧಿ. ಕೊನೆಗೊಮ್ಮೆ ಒಂದೇ ಒಂದು ಕ್ಷಣದಲ್ಲಿ ಸುಪ್ರಸಿದ್ಧಿಯ ತುತ್ತ ತುದಿಯನ್ನೂ ತಲುಪಿದೆ. ಮುಚ್ಚಿ ಕಿಟ್ಟವಾಗಿದ್ದ ನನ್ನ ದುಷ್ಕೀರ್ತಿ ಪರುಷ ತಾಗಿ ಎಂದೆಂದೂ ನಿಲ್ಲುವ ಅಪ್ಪಟ ಬಂಗಾರದಂಥ ಸತ್ಕೀರ್ತಿ ಯಾಯಿತು! 'ಪಂಚ್' ನನ್ನ ವ್ಯಂಗ್ಯಚಿತ್ರ-ಪ್ರಕಟಿಸಿತು. ಈಗ ನಾನು 'ಮನುಷ್ಯ'ನಾದೆ. ನನ್ನ ಸ್ಥಾನ ಶಾಶ್ವತವಾಯಿತು. ನನ್ನನ್ನು ತಮಾಷೆ ಮಾಡಬಹುದು, ಕಂಡು ನಗಬಹುದು— ಆದರೆ ಗೌರವಪೂರ್ವಕವಾಗಿ ಮಾತ್ರ. ನನ್ನನ್ನು ಕಂಡು ಮುಗುಳು ನಗಬಹುದು— ಒರಟಾಗಿ-ಗಹಗಹಿಸಿ ಅಲ್ಲ. ಆ ಕಾಲ ಹೋಯಿತು. 'ಪಂಚ್' ನನ್ನನ್ನು ಹಾರಾಡುತ್ತಿರುವ ಚಿಂದಿ-ಯುವನೊಬ್ಬ ಲಂಡನ್ ಗೋಪುರವನ್ನು ಕೊಳ್ಳಲು ಅದರ ಕಾವಲಿನವನೊಡನೆ ಚೌಕಶಿ-ಮಾಡುತ್ತಿರುವಂತೆ ಚಿತ್ರಿಸಿತ್ತು. ಒಂದೆಂದೂ ಯಾರೂ ಗಮನಿಸದ ಯುವಕ ಇದ್ದಕ್ಕಿದ್ದಂತೆ ಪ್ರಸಿದ್ಧನಾದರೆ ಏನಾಗಬಹುದು— ಊಹಿಸಿ. ಚಕಾರ ನನ್ನ ಬಾಯಿಂದ ಹೊರ ಬೀಳುತ್ತಿದ್ದಂತೆಯೇ ಅದು ಎಲ್ಲ ಕಡೆ ಅನುರಣಿಸುತ್ತದೆ. ಹೊರ ಹೊರಟೊಡನೆ "ಅದೇ ಅವನೇ— ಅಲ್ಲಿ ಹೋಗುತ್ತಿದ್ದಾನಲ್ಲ" ಎಂಬ ಮಾತು! ತಿಂಡಿಗೆ ಕುಳಿತರೆ ಸುತ್ತ ಪ್ರೇಕ್ಷಕರ ತಂಡ! ನಾಟಕ ಮಂದಿರಕ್ಕೆ ಹೋದರೆ ಕಣ್ಣೆಲ್ಲವೂ ನನ್ನ ಮೇಲೆಯೇ! ದಿನವೆಲ್ಲ ವೈಭವ, ಕೀರ್ತಿಯಲ್ಲಿ ಈಜಾಡುತ್ತಿದ್ದೆ.

ನಾನು ಹಳೆಯ ಚಿಂದಿಯನ್ನು ಕಳೆಯದೆ ಇಟ್ಟುಕೊಂಡಿದ್ದೆ. ಆಗೀಗ ಅದನ್ನು ಧರಿಸಿ, ಚಿಕ್ಕಪುಟ್ಟ ಸಾಮಾನು ಖರೀದಿ ಮಾಡಿ ನೋಟು ತೋರಿಸಿ ಬೆದರಿಸಿ ಖುಷಿಪಡುತ್ತಿದ್ದೆ. ಆದರೆ ಇದೂ ಹೆಚ್ಚು ದಿನ ನಡೆಯಲಿಲ್ಲ. ಪತ್ರಿಕೆಗಳಿಂದ ಈ ವಿಷಯವೂ ಎಷ್ಟು ಪ್ರಸಿದ್ಧವಾಯಿತೆಂದರೆ, ನಾನು ಆ ವೇಷದಲ್ಲಿ ಹೊರಟೊಡನೆ ನನ್ನ ಹಿಂದೊಂದು ಸಂತೆಯೇ ನೆರೆಯುತ್ತಿತ್ತು. ಏನಾದರೂ ಕೊಳ್ಳಲು ಹೋದರೆ, ನೋಟು ತೆಗೆಯುವ ಮೊದಲೇ ಅಂಗಡಿಯವನು ತನ್ನ ಅಂಗಡಿಯನ್ನೇ ಕೊಡಲು ಸಿದ್ಧನಿರುತ್ತಿದ್ದ.

ನನ್ನ ಕೀರ್ತಿಯ ಹತ್ತನೆಯ ದಿನ ಅಮೇರಿಕದ ರಾಯಭಾರಿಗೆ ನನ್ನ ಗೌರವ ಸಲ್ಲಿಸಿ ತಾಯ್ನಾಡಿನ ಋಣ ತೀರಿಸಿಕೊಳ್ಳಲು ಹೋದೆ, ಸಂದರ್ಭೋಚಿತವಾದ ಉತ್ಸಾಹ, ಆಸಕ್ತಿಗಳಿಂದ ನನ್ನನ್ನು ಸ್ವಾಗತಿಸಿ, ಆತ— ನನ್ನ ಕರ್ತವ್ಯ ನಿರ್ವಹಣೆಯಲ್ಲಿ ನಾನು ತೋರಿಸಿದ ಆಲಸ್ಯಕ್ಕಾಗಿ ಆಕ್ಷೇಪಿಸಿದ; ಕ್ಷಮೆ ಬೇಕೆಂದರೆ— ಪಡೆಯಲು ಒಂದೇ ದಾರಿ— ಅದು ಅಂದಿನ ಔತಣದಲ್ಲಿ ಭಾಗವಹಿಸುವುದು— ಎಂದ– (ಅವನ ಅತಿಥಿಗಳಲ್ಲೊಬ್ಬ ಅನಾರೋಗ್ಯದಿಂದ ಬರುವಂತಿರಲಿಲ್ಲ)

ನಾನು ಒಪ್ಪಿದೆ. ಮಾತಾಡುತ್ತ ಆಡುತ್ತ, ನನ್ನ ತಂದೆ ಮತ್ತು ಆತ ಶಾಲೆಯಲ್ಲೂ ಯೇಲ್ ವಿಶ್ವವಿದ್ಯಾಲಯದಲ್ಲೂ ಸಹಪಾಠಿಗಳಾಗಿದ್ದ-ರೆಂದೂ, ನನ್ನ ತಂದೆಯ ಮರಣದವರೆಗೂ ಅವರಿಬ್ಬರೂ ಸ್ನೇಹಿತರಾಗಿದ್ದರೆಂದೂ ಗೊತ್ತಾ-ಯಿತು. ನನಗೆ ಸಮಯ ಸಿಕ್ಕಾಗಲೆಲ್ಲ ತಮ್ಮ ಮನೆಗೆ ಬರುತ್ತಿರಬೇಕೆಂದು ಆತ ಹೇಳಿದ. ನಾನೂ ಒಪ್ಪಿದೆ.

ಒಪ್ಪುವುದಷ್ಟೆ ಅಲ್ಲ— ಸಂತೋಷಗೊಂಡೆ. ಎಲ್ಲ ಕುಸಿಯುವ ಸಮಯ ಬಂದರೆ ಪ್ರಾರಂಭ-ದಲ್ಲೇ ಆಗಿದ್ದರೆ ಹೇಳಬಹುದಿತ್ತು. ಈಗ ಕಾಲ ಮೀರಿತ್ತು. ಆಗಲೇ ಸಾಕಷ್ಟು ಆಳಕ್ಕೆ ಮುಳುಗಿದ್ದೆ.

ಆದರೆ ಇನ್ನೂ ನನ್ನ ಮಿತಿಯಲ್ಲಿ ಇದ್ದೇ-ನೆಂದು ನನ್ನ ನಂಬಿಕೆ. ಏಕೆಂದರೆ ಇಷ್ಟೆಲ್ಲ ಸಾಲ ಮಾಡುತ್ತಿದ್ದರೂ ನನಗೆ ಸಿಗಬಹುದಾದ ಸಂಬಳದ ಮಿತಿಯೊಳಗೇ ಇದ್ದೆ. ಸಂಬಳ ಎಷ್ಟು ಸಿಗಬಹುದು ಎಂಬುದು ಗೊತ್ತಿರಲಿಲ್ಲ. ಆದರೆ ನನ್ನ ಅಂದಾಜಿಗೊಂದು ಆಧಾರ ಇತ್ತು ಎನ್ನಿ; ಪಣ ಗೆದ್ದರೆ ನನ್ನ ಸಾಮರ್ಥ್ಯಕ್ಕೊಪ್ಪುವ, ನಾನು ಕೇಳಿದ ಹುದ್ದೆ ತನ್ನಲ್ಲಿದ್ದುದರಲ್ಲಿ— ಕೊಡುತ್ತೇನೆಂದಲ್ಲವೆ ಮಾತು? ನನ್ನ ಸಾಮರ್ಥ್ಯದ ವಿಚಾರದಲ್ಲಿ ಅನುಮಾನವೇ ಇಲ್ಲ. ಪಣ ಗೆಲ್ಲುವ





# ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಅದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ—ಆಮೇಲೆ ಇವು ನೋಯುವ ದಂತಕ್ಷಯವನ್ನು ಉಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೂಡಲೇ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:



ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.



ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.



ಫಲಿತಾಂಶ: ಆಕರ್ಷಕವಾದ ಬಿಳುಪಾದ ಹಲ್ಲುಗಳು, ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು, ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

ಅಧಿಕ ಶುಚಿಯಾದ, ದುರ್ವಾಸನೆ ರಹಿತವಾದ ಉಸಿರಿಗಾಗಿ ಮತ್ತು ಅಧಿಕ ಬಿಳುಪಾದ ಹಲ್ಲುಗಳಿಗಾಗಿ ಹೆಚ್ಚು ಜನರು ಜಗತ್ತಿನಲ್ಲಿ ಬೇರೆ ಯಾವುದೇ ಟೂತ್‌ಪೇಸ್ಟ್‌ಗಿಂತ ಅಧಿಕವಾಗಿ ಕೋಲ್ಗೇಟನ್ನು ಕೊಳ್ಳುತ್ತಾರೆ.




## ದಂತವೈದ್ಯರು ಮಾತ್ರ ನಿಮಗೆ ಉತ್ತಮೋತ್ತಮ ದಂತರಕ್ಷಣೆಯನ್ನು ನೀಡಬಲ್ಲರು

ವಿಚಾರದಲ್ಲಿ ಸಂಶಯವೇ ಇಲ್ಲ— ನಾನು ಯಾವಾಗಲೂ ಅದೃಷ್ಟವಂತ. ಆದ್ದರಿಂದ ನನ್ನ ಸಂಬಳ ವರ್ಷಕ್ಕೆ ೬೦೦ರಿಂದ ೧೦೦೦ ಪೌಂಡ್‌ವರೆಗೆ ಎಂದು ಅಂದಾಜು ಮಾಡಬಹುದು. ಮೊದಲ ವರ್ಷ ೬೦೦ ಎನ್ನಿ; ಅನಂತರ ವರ್ಷವರ್ಷವೂ ಹೆಚ್ಚುತ್ತ ತುದಿ ಮುಟ್ಟುತ್ತದೆ. ಈಗ ನನ್ನ ಸಾಲ ಮೊದಲ ವರ್ಷದ ಸಂಬಳದಷ್ಟು ಮಾತ್ರ ಇದೆ. ಎಲ್ಲರೂ ನನಗೆ ಸಾಲ ಕೊಡಲು ಪ್ರಯತ್ನ ಪಡುತ್ತಿದ್ದರೂ ನಾನು ಒಂದಲ್ಲ ಒಂದು ನೆಪ ಒಡ್ಡಿ ಅವರಲ್ಲಿ ಬಹಳ ಜನರಿಂದ ತಪ್ಪಿಸಿಕೊಂಡಿದ್ದೆ. ಹಾಗಾಗಿ ಈಗ ನನ್ನ ಸಾಲ, ಕೈಗಡದ ಹಣ ೩೦೦ ಪೌಂಡ್, ಸಾಮಾನು, ಆಹಾರ ಇತ್ಯಾದಿ ಕೊಂಡದ್ದು ೩೦೦ ಪೌಂಡು. ಎರಡನೇ ವರ್ಷದ ಸಂಬಳ ತಿಂಗಳ ಉಳಿದ ದಿನಗಳಿಗೆ ಸಾಕಾಗುತ್ತದೆಂದು ನನ್ನ ನಂಬಿಕೆ. ನಾನು ಇಷ್ಟೇ ಎಚ್ಚರಿಕೆಯಿಂದ ಮಿತವ್ಯಯ ಮಾಡಿದರೆ— (ಆ ವಿಚಾರ ಆಗಲೇ ನಿರ್ಧರಿಸಿಬಿಟ್ಟಿದ್ದೇನೆ.) -ತಿಂಗಳು ಮುಗಿದು ಯಜಮಾನ ಹಿಂತಿರುಗಿದ ಎಂದರೆ ಎಲ್ಲ ಸರಿ ಹೋಗುತ್ತದೆ. ಎರಡನೇ ವರ್ಷದ ಸಂಬಳವನ್ನು ನನ್ನ ಸಾಲಿಗರಲ್ಲಿ ಅಷ್ಟಷ್ಟು ಸರದಿಯಂತೆ ಹಂಚಿ ಹಾಕಿ ನನ್ನ ಕೆಲಸದಲ್ಲಿ ತೊಡಗಬಹುದು.

ಔತಣ ಕೂಟ ಹದಿನಾಲ್ಕೇ ಜನರದ್ದು— ಬಹಳ ಚೆನ್ನಾಗಿತ್ತು. ಷೋರ್‌ಡಿಚ್ಚಿನ ಡ್ಯೂಕ್ ಮತ್ತು ಡಚೆಸ್, ಅವರ ಮಗಳು— ಲೇಡಿ ಆನ್-ಗ್ರೇಸ್- ಎಲಿನರ್ ಸೆಲೆಸ್ಟೆ- ಇತ್ಯಾದಿ-ಇತ್ಯಾದಿ— ದ ಬೋಹುನ್, ನ್ಯೂಗೇಟಿನ ಅರ್ಲ್ ಮತ್ತು ಕೌಂಟೆಸ್, ವೈಕೌಂಟ್ ಚೀಪ್‌ಸೈಡ್, ಲಾರ್ಡ್ ಮತ್ತು ಲೇಡಿ ಬ್ಲಾದರ್‌ಸ್ಕೈಟ್,

ಬಿರುದು-ಬಾವಲಿ ಇಲ್ಲದ ಕೆಲ ಜನ ಮಹನೀಯರು— ಮಹಿಳೆಯರು, ರಾಯಭಾರಿ. ಅವನ ಹೆಂಡತಿ ಮತ್ತು ಮಗಳು, ಮಗಳ ಗೆಳತಿ-ಮನೆಗೆ ಬಂದಿದ್ದವಳು— ಇಪ್ಪತ್ತೆರಡರ ಹರೆಯದ ಇಂಗ್ಲಿಷ್ ಹುಡುಗಿ— ಹೆಸರು ಪೋರ್ಷಿಯಾ ಲ್ಯಾಂಗಮ್. ಎರಡು ನಿಮಿಷದಲ್ಲಿಯೇ ನಾನವಳ ಪ್ರೇಮದಲ್ಲಿ ಸಿಕ್ಕುಬಿದ್ದೆ. ಅಷ್ಟೇ ಅಲ್ಲ— ಅವಳೂ ನನ್ನ ಪ್ರೇಮದಲ್ಲಿ ಸಿಕ್ಕಳು ಎಂಬುದನ್ನೂ ಕನ್ನಡಕ ಇಲ್ಲದೆಯೇ ಕಾಣಬಹುದಿತ್ತು. ಇನ್ನೊಬ್ಬ ಅತಿಥಿ ಅಮೇರಿಕನ್.

ಬಂದವರೆಲ್ಲ ಊಟಕ್ಕೆ ಅಣಿಯಾಗುತ್ತ, ತಡವಾಗಿ ಬಂದವರನ್ನು ಅಸಮಾಧಾನದಿಂದ ವೀಕ್ಷಿಸುತ್ತ ಇನ್ನೂ ಹಜಾರದಲ್ಲಿರುವಾಗಲೇ ಸೇವಕ ಮತ್ತೊಬ್ಬ ಅತಿಥಿ ಬಂದದ್ದನ್ನು ಘೋಷಿಸಿದ:

"ಶ್ರೀಮಾನ್ ಲಾಯ್ಡ್ ಹೇಸ್ಟಿಂಗ್ಸ್‌ರವರು."

ಸಾಂಪ್ರದಾಯಿಕ ಸ್ವಾಗತ ಮುಗಿಯುತ್ತಿದ್ದಂತೆಯೆ ಹೇಸ್ಟಿಂಗ್ಸ್, ನನ್ನನ್ನು ಕಂಡವನು, ಕೈ ಚಾಚಿಕೊಂಡೆ ನನ್ನ ಕಡೆ ಬಂದ. ಆದರೆ ಕೈ ಕುಲುಕದೆ ಅಷ್ಟಕ್ಕೇ ನಿಂತು— ನಾಚಿ ಮುಜುಗರ ಪಡುತ್ತ, "ಕ್ಷಮಿಸಿ, ನೀವು ನನ್ನ ಪರಿಚಿತರು ಎಂದುಕೊಂಡಿದ್ದೆ" ಎಂದ.

"ಹೌದು ಕಣೊ, ನಿನ್ನ ಪರಿಚಿತನೆ."

"ಛೇ ಅಲ್ಲ. ನೀವು... ನೀವೂ..."

"ವೇಸ್‌ಕೋಟ್ ಜೇಬಿನ ರಾಕ್ಷಸ? ಹೌದು-ಸತ್ಯವಾಗಿ. ನನ್ನ ಅಡ್ಡ ಹೆಸರನ್ನು ಕರೆಯಲು ಹೆದರಬೇಕಾದ್ದಿಲ್ಲ. ಅದು ನನಗೆ ರೂಢಿಯಾಗಿದೆ."

"ಛೆ ಛೆ ಛೆ— ಇದೊಳ್ಳೆ ಆಶ್ಚರ್ಯ. ನಿನ್ನ ಅಡ್ಡ ಹೆಸರು, ನಿಜವಾದ ಹೆಸರು ಜೊತೆಯಾಗಿದ್ದದ್ದನ್ನು ಎಲ್ಲೊ ಒಂದೆರಡು ಸಾರಿ ಕಂಡಿದ್ದೆ. ಆದರೆ ಆ ಹೆನ್ರಿ ಆಡಮ್ಸ್ ನೀನೇ ಎಂಬುದು ಹೊಳೆದೇ ಇರಲಿಲ್ಲ. ನೀನು ಫ್ರಿಸ್ಕೋನಲ್ಲಿ ಬ್ಲೇಕ್ ಹಾಪ್‌ಕಿನ್ಸರ ಗುಮಾಸ್ತಗಿರಿ ಮಾಡುತ್ತಿದ್ದುದು ಇನ್ನೂ ಆರು ತಿಂಗಳ ಹಿಂದೆಯೂ ಅಲ್ಲ. ಅಲ್ಪ ಸ್ವಲ್ಪ ಭತ್ಯೆಗಾಗಿ ರಾತ್ರಿಯೆಲ್ಲ ಕೂತು ಗೋಲ್ಡ್ ಮತ್ತು ಕರಿ ಬಡಾವಣೆಗೆ ಸಂಬಂಧಿಸಿದ ಕಾಗದ ಪತ್ರ, ಅಂಕಿ ಅಂಶಗಳನ್ನು ಸಿದ್ಧಪಡಿಸಲು ನನಗೆ ಸಹಾಯಮಾಡುತ್ತಿದ್ದಿಲ್ಲವೆ? ನೀನು ಲಂಡನ್ನಿಗೆ ಬರುವುದು, ಮಹಾ ವ್ಯಕ್ತಿಯೆಂದು ಪ್ರಸಿದ್ಧಿಹೊಂದುವುದು-ಏನಿದೆಲ್ಲ? ಅರೇಬಿಯನ್ ನೈಟ್ಸ್ ಕತೆ ಎದ್ದು ಬಂದಂತಿದೆ. ಇದೆಲ್ಲ ಅರ್ಥವೇ ಆಗುವುದಿಲ್ಲವಲ್ಲಯ್ಯ. ತಲೆ ತಿರುಗುತ್ತಿದೆ, ಸ್ವಲ್ಪ ತಾಳು."

"ಸಂಗತಿ ಇಷ್ಟು. ನಾನು ನಿನಗಿಂತ ಉತ್ತಮ ಸ್ಥಿತಿಯಲ್ಲೇನಿಲ್ಲ. ಇದೆಲ್ಲ ನನಗೂ ಅರ್ಥವಾಗಿಲ್ಲ."

"ಇದು ನಿಜವಾಗಿಯೂ ದಿಗ್ಭ್ರಮೆಗೊಳಿಸುತ್ತದಲ್ಲಾ. ನಾವಿಬ್ಬರೂ ಆ ಮೈನರ್ಸ್ ಹೋಟಲಿಗೆ ಹೋಗಿ ಇನ್ನೂ ಮೂರು ತಿಂಗಳೂ ಆಗಿಲ್ಲ..."

"ಮೈನರ್ಸ್ ಅಲ್ಲ—ವಾಟ್ ಚೀಯರ್."

"ಸರಿ ವಾಟ್ ಚೀಯರೇ ಹೌದು. ಬೆಳಗಿನ ಜಾವ ಎರಡು ಗಂಟೆಗೆ ಹೋಗಿ ಅದೂ ಬಡಾವಣೆಗೆ ಸಂಬಂಧಿಸಿದ ಪತ್ರಗಳನ್ನಿಟ್ಟುಕೊಂಡು ಹೆಣಗಿದ ನಂತರ ಹೋಗಿದ್ದು—ಲಂಡನ್ನಿಗೆ ನನ್ನ ಜೊತೆ ಬಾರಯ್ಯ, ರಜ ಕೊಡಿಸುತ್ತೇನೆ, ಖರ್ಚೆಲ್ಲ ಕೊಡುತ್ತೇನೆ, ಚೆನ್ನಾಗಿ ಮಾರಾಟವಾದರೆ ಅದರ ಮೇಲೂ ಮತ್ತಷ್ಟು ಕೊಡುತ್ತೇನೆ ಎಂದರೆ ನೀನು ಕೇಳಲಿಲ್ಲ. ಮಾರಾಟವಾಗುವುದಿಲ್ಲ; ಇದ್ದ ಕೆಲಸ ಬಿಟ್ಟು ಅಲೆದಾಡಿದರೆ, ಹಿಂದಿರುಗಿದಾಗ ನೆಲೆ ಸಿಗದೆ ಮತ್ತಷ್ಟು ಕಾಲ ಹೆಣಗಬೇಕು ಎಂದಿದ್ದೆ. ಆದರೂ ಇಲ್ಲಿದೀಯ, ಎಷ್ಟು ವಿಚಿತ್ರ! ಇಂಥ ನಂಬಲಾಗದ ಭಾಗ್ಯದ ಆರಂಭ ಆದದ್ದು ಹೇಗೆ?"

"ಓ ಅದೊಂದು ಆಕಸ್ಮಿಕ. ಬಹಳ ದೀರ್ಘವಾದ ಕತೆ. ಅದ್ಭುತ ರಮ್ಯ ಎನ್ನಬಹುದು. ಅದೆಲ್ಲ ಹೇಳುತ್ತೇನಂತೆ— ಈಗ ಬೇಡ."

"ಮತ್ತೆ ಯಾವಾಗ?"

"ಈ ತಿಂಗಳ ಕೊನೆಗೆ."

"ಇನ್ನೂ ಹದಿನೈದು ದಿನಕ್ಕೂ ಹೆಚ್ಚೇ ಇದೆ. ನನ್ನ ಕುತೂಹಲ ಅಷ್ಟು ದಿನ ತಡೆಯಲಾರದು. ಒಂದು ವಾರದಲ್ಲಿ ಹೇಳುತ್ತೀಯಾ?"

"ಸಾಧ್ಯವಿಲ್ಲ. ಯಾಕೆ ಅಂತ ನಿನಗೇ ಗೊತ್ತಾಗುತ್ತೆ ಕ್ರಮೇಣ. ನಿನ್ನ ವ್ಯವಹಾರ ಹೇಗೆ ನಡೆದಿದೆ?"

# ಇದೊಂದು ಸಾಮಾನ್ಯ ಉಪ್ಪಿನಕಾಯಿಯ ಭರಣಿ ಮಾತ್ರವಲ್ಲ ಇದು ಬೇಡೇಕರವರ ಪ್ರಸಿದ್ಧ ಉತ್ಪಾದನೆಗಳಲ್ಲೊಂದು



**65 ವರುಷಗಳಿಂದ ಭಾರತದ ಮನೆ ಮನೆಗಳಲ್ಲಿ ಸುಗಂಧ ಮತ್ತು ಸುರುಚಿಗಾಗಿ ಪ್ರಸಿದ್ಧವಾಗಿದೆ**

ಒಳ್ಳೆಯ ಅಭಿರುಚಿಯ
ಮಹಿಳೆಯರು
ಬೇಡೇಕರರವರ ಉಪ್ಪಿ
ನಕಾಯಿ, ಮಸಾಲೆ,
ಹಪ್ಪಳ ಮತ್ತು ಚಟ್ನಿ
ಮುಂತಾದವುಗಳನ್ನು
ವಿಶುದ್ಧತೆ ಮತ್ತು
ಗುಣವತ್ತತೆ
ಹೊಗಳುತ್ತಾರೆ.
ಬೇಡೇಕರವರ ಎಲ್ಲ
ಉತ್ಪಾದನೆಗಳು




ಅಂತರರಾಷ್ಟ್ರೀಯ
ತರಗತಿಯ "ಲೀಕ-
ಪ್ರೂಫ ಪ್ಯಾಕೇಜಿಂಗ"
ದಲ್ಲಿ ಸಿಗುತ್ತವೆ.
ಬೇಡೇಕರವರ ಉತ್ಕೃಷ್ಟ
ಉತ್ಪಾದನೆಗಳೇ ನಿಮ್ಮ
ಮೊದಲ ಆಯ್ಕೆ

ವ್ಯಾಪಾರದ ವಿಚಾರಣೆಗಾಗಿ:

**ವ್ಹಿ.ಪಿ.ಬೇಡೇಕರ ಆ್ಯಂಡ ಸನ್ಸ ಪ್ರೈ.ಲಿ.**
**ಮುಂಬಯಿ 4**

# ಬೇಡೇಕರ

ಬೇಡೇಕರ ಉಪ್ಪಿನಕಾಯಿ • ಮಸಾಲೆ • ಹಪ್ಪಳ • ಚಟ್ನಿಗಳು



ಅವನ ಸಂತೋಷವೆಲ್ಲ ಮಾಯವಾಯಿತು. ನಿಟ್ಟುಸಿರುಬಿಟ್ಟ.

"ನಿನ್ನ ಭವಿಷ್ಯ ಸತ್ಯವಾಯಿತಯ್ಯ– ನೀನು ಒಳ್ಳೇ ಭವಿಷ್ಯವಾದಿ. ನಾನು ಬರಬಾರದಿತ್ತು. ಆ ವಿಷಯ ಮಾತಾಡುವುದಕ್ಕೆ ನನಗಿಷ್ಟವಿಲ್ಲ."

"ನೀನು ಹೇಳಲೇಬೇಕು. ಇಲ್ಲಿಂದ ಹೊರಟ ಮೇಲೆ ಈ ರಾತ್ರಿ ನನ್ನ ವಸತಿಗೆ ಬಂದು ಅಲ್ಲೇ ಉಳಿ. ಆಗ ಎಲ್ಲ ಹೇಳು."

"ಹೇಳಬಹುದಾ? ಪ್ರಾಮಾಣಿಕವಾಗಿ ಹೇಳುತ್ತಿದ್ದೀಯೇನಯ್ಯ?" ಅವನ ಕಣ್ಣಲ್ಲಿ ನೀರಾಡಿತು."

"ಹೌದು, ನಿನ್ನ ಕತೆಯನ್ನು ಒಂದು ಶಬ್ದವೂ ಬಿಡದೆ ಕೇಳುತ್ತೇನೆ."

"ಎಂಥ ಉಪಕಾರವಯ್ಯ! ಒಂದೇ ಒಂದು ಧ್ವನಿಯಲ್ಲಿ, ಕಣ್ಣಲ್ಲಿ ಅಷ್ಟಿಷ್ಟು ಮಾನವೀಯ ಆಸಕ್ತಿ, ನನ್ನಲ್ಲಿ, ನನ್ನ ವ್ಯವಹಾರದ ವಿಷಯದಲ್ಲಿ ಕಾಣಿಸುತ್ತೆ ಎಂದರೆ– ಅದೂ ನಾನು ಇಷ್ಟೊಂದು ಸಂಕಟಪಟ್ಟಿರುವಾಗ– ಮೊಳಕಾಲೂರಿ ನಮಸ್ಕಾರ ಮಾಡಬೇಕು ಎನ್ನಿಸುತ್ತೆ!"

ಅವನು ನನ್ನ ಕೈಯನ್ನು ಭದ್ರವಾಗಿ ಹಿಡಿದ. ಧೈರ್ಯ ತಂದುಕೊಂಡ. ಆ ಔತಣದುದ್ದಕ್ಕೂ ಉತ್ಸಾಹಿತನಾಗಿದ್ದ. ಆದರೆ ಆ ಔತಣ ನಡೆಯಲಿಲ್ಲ ಎನ್ನಿ. ಉಹ್ಲು, ಆ ದುಷ್ಟ ಇಂಗ್ಲಿಷ್ ವ್ಯವಸ್ಥೆಯಲ್ಲಿ ಯಾವಾಗಲೂ ಆಗುವಂತೆಯೇ ಆಯಿತು. ಪಂಕ್ತಿಯಲ್ಲಿ ಪ್ರಥಮ ಸ್ಥಾನ ಯಾರದ್ದು ಎಂಬುದು ನಿಶ್ಚಯವಾಗದೆ ಔತಣ ನಡೆಯಲಿಲ್ಲ. ಇಂಗ್ಲಿಷರು ಔತಣಕ್ಕೆ ಹೊರಡುವುದಕ್ಕೆ ಮುಂಚೆಯೆ ಊಟ ಮಾಡಿರುತ್ತಾರೆ. ಔತಣಗಳ ಅಪಾಯ ಅವರಿಗೆ ಗೊತ್ತು. ಹೊಸಬರಿಗೆ ಯಾರೂ ಎಚ್ಚರಿಕೆ ಕೊಟ್ಟಿರುವುದಿಲ್ಲ. ಅವರು ಬಲಿಗೆ ಬೀಳುತ್ತಾರೆ. ಈ ಬಾರಿಯೇನೋ ನಾವಾರೂ- ಹೇಸ್ಟಿಂಗ್ಸ್ ಹೊರತು— ಹೊಸಬರಲ್ಲದ್ದರಿಂದ ನಮಗೇನೂ ತೊಂದರೆಯಾಗಲಿಲ್ಲ. ಹೇಸ್ಟಿಂಗ್ಸನಿಗೂ ಆಮಂತ್ರಣ ಕೊಟ್ಟಾಗಲೇ ರಾಯಭಾರಿಯು– ಇಂಗ್ಲಿಷ್ ಪದ್ಧತಿಯಂತೆ— ಔತಣ ನಡೆಯಲಾರದು ಎಂಬ ಸೂಚನೆ ಕೊಟ್ಟಿದ್ದರಿಂದ ಅವನಿಗೂ ತೊಂದರೆಯಾಗಲಿಲ್ಲ.

ಪ್ರತಿಯೊಬ್ಬರೂ, ಒಬ್ಬೊಬ್ಬ ಮಹಿಳೆಯೊಡನೆ ಊಟದ ಮನೆಗೆ ಮೆರವಣಿಗೆಯಲ್ಲಿ ಹೋದೆವು– ಆಕಾರ ಕೆಡಬಾರದು– ನೋಡಿ, ಅಲ್ಲಿ ವಾದ ಆರಂಭವಾಯಿತು. ಪ್ರಥಮ ಸ್ಥಾನ ತನ್ನದೆಂದು ಡ್ಯೂಕನ ವಾದ. ಏಕೆಂದರೆ ರಾಯಭಾರಿ ಕೇವಲ ರಾಷ್ಟ್ರದ ಪ್ರತಿನಿಧಿ, ರಾಜನ ಪ್ರತಿನಿಧಿಯಲ್ಲ. ಆದರೆ ನಾನು ನನ್ನ ಹಕ್ಕನ್ನು ಬಿಡಲಿಲ್ಲ. ಪತ್ರಿಕೆಗಳಲ್ಲಿ ಡ್ಯೂಕ್‌ಗೀಕರೆಲ್ಲರಿಗಿಂತ ನನಗೇ ಹೆಚ್ಚಿನ ಸ್ಥಾನ ಎಂಬುದನ್ನು ಸ್ಪಷ್ಟಪಡಿಸಿದೆ. ಈ ವಾದ ಇತ್ಯರ್ಥವಾಗುವಂತೆ ಕಾಣದಾದಾಗ ಡ್ಯೂಕ್ ತನ್ನ ಮನೆತನದ ವಂಶಾವಳಿಯನ್ನು ಪ್ರಸ್ತಾಪಿಸಿದ. ನಾನು ನನ್ನ ಹೆಸರೇ ಸೂಚಿಸುವಂತೆ ಆದಮನಿಂದಲೇ ನೇರವಾಗಿ ಬಂದವನು, ಅವನು ಯಾವುದೊ ನಾರ್ಮನ್ ಅಡ್ಡ ಶಾಖೆಯಿಂದ ಬಂದವನು ಎಂದೆ. ಔತಣ ನಡೆಯದೆ ಎಲ್ಲರೂ ಬಂದ ಮೆರವಣಿಗೆಯಲ್ಲೇ ಹಜಾರಕ್ಕೆ ಮರಳಿದೆವು. ಅಲ್ಲಿ ನಿಂತೇ ಸಾರ್ಡಿನ್ ಮತ್ತು ಸ್ಟ್ರಾಬೆರಿಯ ಊಟ ಉಂಡೆವು– ನಾವು ನಾವೇ ಗುಂಪಾಗಿ ನಿಂತು ಉಂಡೆವು. ಇಲ್ಲಿ ಪಂಕ್ತಿ, ಪ್ರಾಮುಖ್ಯದ ಪ್ರಶ್ನೆಯಿಲ್ಲ. ಇಬ್ಬಿಬ್ಬರು ಒಂದಾಗುವುದು, ಒಂದು ಶಿಲಿಂಗು ನಾಣ್ಯ ಹಾರಿಸುವುದು– ಗೆದ್ದವನಿಗೆ ಮೊದಲು ಊಟ, ಸೋತವನಿಗೆ ಶಿಲಿಂಗು. ಊಟವಾದ ಮೇಲೆ ಮೇಜುಗಳನ್ನು ತರಲಾಯಿತು. ಕ್ರಿಬಿಜ್ ಆಟ ಆಡಿದೆವು. ಆಟಕ್ಕೆ ಆರು ಪೆನಿ, ಇಂಗ್ಲಿಷರು ಎಂದಿಗೂ ಕೇವಲ ಸಂತೋಷಕ್ಕಾಗಿ ಆಟ ಆಡುವುದಿಲ್ಲ. ಏನಾದರೂ ಸಿಗಬೇಕು ಇಲ್ಲ ಕಳೆಯಬೇಕು. ಏನಾದರೂ ಸರಿ. ಇಲ್ಲವಾದರೆ ಅವರು ಆಡುವುದೇ ಇಲ್ಲ.

ಕಾಲ ಬಹಳ ಚೆನ್ನಾಗಿ ಕಳೆಯಿತು– ಅದರಲ್ಲೂ ನಮ್ಮಿಬ್ಬರಿಗೆ– ಮಿಸ್ ಲ್ಯಾಂಗಮ್ ಮತ್ತು ನನಗೆ. ನಾನು ಅವಳಿಂದ ಎಷ್ಟು ಮಂತ್ರಮುಗ್ಧನಾಗಿದ್ದೆನೆಂದರೆ ನನ್ನ ಆಟ, ನನ್ನ ಎಣಿಕೆ ಒಂದೂ ನನಗೆ ತಿಳಿಯದೆ ಎಲ್ಲ ಕಳೆದುಕೊಳ್ಳುತ್ತಿದ್ದೆನೇನೊ. ಆದರೆ ಅವಳೂ ಅದೇ ಸ್ಥಿತಿಯಲ್ಲಿದ್ದುದರಿಂದ ಆ ಸಂಭವವಿರಲಿಲ್ಲ. ನಮ್ಮಿಬ್ಬರಲ್ಲಿ ಯಾರೂ ಗೆಲ್ಲಲಿಲ್ಲ, ಯಾರೂ ಸೋಲಲಿಲ್ಲ. ನಾವಿಬ್ಬರೂ ಆನಂದದಲ್ಲಿದ್ದೆವು ಎಂಬುದೊಂದೇ ನಮಗೆ ಗೊತ್ತು. ಮತ್ತೇನೂ ತಿಳಿಯಬೇಕಾಗಿಯೂ ಇರಲಿಲ್ಲ. ಯಾವ ತಡೆಯೂ ಬೇಕಿರಲಿಲ್ಲ. ನಾನು ಹೇಳಿದೆ– ನಿಜವಾಗಿಯೂ ಹೇಳಿಯೇಬಿಟ್ಟೆ– ಅವಳನ್ನು ಪ್ರೀತಿಸಿದ್ದೇನೆಂದು. ಅವಳ ಮುಖ, ಕೂದಲೆಲ್ಲ ಕೆಂಪಾಗುವಷ್ಟು ನಾಚಿದಳು. ನಾನು ಹೇಳಿದ್ದು ಅವಳಿಗೆ ಹಿಡಿಸಿತೆಂದಳು– ನಿಜವಾಗಿಯೂ ಹಾಗೆಂದಳು– ಓಹೋ. ಅಂತಹ ಇನ್ನೊಂದು ಸಂಜೆಯನ್ನೇ ನಾನು ಕಂಡಿಲ್ಲ.

ನಾನೇನೂ ಪ್ರಾಮಾಣಿಕವಾಗಿ ನನ್ನ ವಿಷಯವನ್ನೆಲ್ಲ– ಇದ್ದದ್ದೆಲ್ಲ– ಅವಳಿಗೆ ಹೇಳಿದೆ. ಆ ನೋಟು ಬಿಟ್ಟರೆ ನನ್ನಲ್ಲಿ ಕಾಸೂ ಇಲ್ಲ; ಆ ನೋಟು ನನ್ನದಲ್ಲ ಎಂದೆ. ಅವಳ ಕುತೂಹಲ ಕೆರಳಿತು. ತಗ್ಗು ದನಿಯಲ್ಲಿ ಕತೆಯನ್ನೆಲ್ಲ ಮೊದಲಿನಿಂದ ಹೇಳಿದೆ. ಅವಳು ನಕ್ಕು ನಕ್ಕು ಪ್ರಾಣ ಬಿಡುವಂತಾದಳು. ನಗುವಂತಹುದೇನಿತ್ತೊ ನನಗೆ ಕಾಣಲಿಲ್ಲ. ಪ್ರತಿ ಅರ್ಧ ನಿಮಿಷಕ್ಕೊಮ್ಮೆ ಯಾವುದೋ ವಿವರ ಅವಳನ್ನು ನಗಿಸುತ್ತಿತ್ತು. ನಗು ನಿಲ್ಲಲು ಒಂದು ಒಂದೂವರೆ ನಿಮಿಷವಷ್ಟಾದರೂ ನಾನು ಕಾಯಬೇಕಿತ್ತು. ಅಂಥ ನಗುವನ್ನೇ ನಾನು ಕಂಡಿರಲಿಲ್ಲ. ಸಂಕಟದ ಕತೆಯೂ ಇಂತಹ ಪರಿಣಾಮ ಮಾಡಬಹುದೆನಿಸಿರಲಿಲ್ಲ. ಆದರೆ ಅವಳಲ್ಲಿ ನನ್ನ ಪ್ರೀತಿ ಹೆಚ್ಚಾಯಿತು. ಸಂತೋಷಕ್ಕೆ ಅವಕಾಶವಿಲ್ಲದಲ್ಲೂ ಸಂತೋಷದಿಂದ ಇರಬಲ್ಲ ಸ್ವಭಾವದವಳು– ಅಂಥ ಹೆಂಡತಿಯೇ ನನಗೆ ಬೇಕಾಗಿದ್ದುದು– ಎನಿಸಿತು. ಆದರೆ ನಾವು ಒಂದೆರಡು ವರ್ಷ ಕಾಯಬೇಕಾಗಬಹುದು, ನನ್ನ ಸಂಬಳ ಕೈಗೆ ಸಿಗುವಂತಾಗುವವರೆಗೆ– ಎಂಬುದನ್ನು ಅವಳಿಗೆ ಹೇಳಿದೆ. ಅದಕ್ಕೆ ಅವಳ ಅಭ್ಯಂತರವಿರಲಿಲ್ಲ. ಬದಲಾಗಿ, ಖರ್ಚಿನ ವಿಚಾರದಲ್ಲಿ ಬಹಳ ಎಚ್ಚರದಿಂದಿರಬೇಕು; ಮೂರು ವರ್ಷದ ಸಂಬಳಕ್ಕೂ ಅದು ಕಾಲು ಚಾಚದಿರಲಿ ಎಂದಳು. ಅನಂತರ, ಅವಳ ಮನಸ್ಸಿಗೆ ಸ್ವಲ್ಪ ಆತಂಕ ಉಂಟಾದಂತಾಯಿತು. ನಮಗೆ ಸಿಗಬಹುದಾದಕ್ಕಿಂತ ಹೆಚ್ಚಿನ ಸಂಬಳದ ಮೇಲೆ ಲೆಕ್ಕ ಹಾಕುತ್ತಿಲ್ಲವೆ?– ಎಂದು ಅನುಮಾನ ವ್ಯಕ್ತಪಡಿಸಿದಳು. ಇದೇನೊ ವಿವೇಕವೆ. ನನ್ನ ಆತ್ಮವಿಶ್ವಾಸ ಇದರಿಂದ ಸ್ವಲ್ಪ

ಕುಗ್ಗಿದರೂ ವ್ಯವಹಾರ ಚಾತುರ್ಯದ ಒಂದು ಆಲೋಚನೆ ಹೊಳೆಯಿತು. ಅದನ್ನು ನೇರವಾಗಿ ಅವಳ ಮುಂದೆ ಇಟ್ಟೂ ಬಿಟ್ಟೆ.

"ಪೋರ್ಷಿಯಾ, ಆ ಮುದುಕರನ್ನು ಕಾಣಲು ಹೋಗುವಾಗ ನನ್ನೊಡನೆ ಬರಲು ನಿನ್ನದೇನಾದರೂ ಅಡ್ಡಿಯಿದೆಯೆ ?"

ಅವಳು ಹಿಂಜರಿದಂತೆ ಕಂಡಿತು. ಆದರೂ "ಇಲ್ಲ...ನಾನು ಬರುವುದರಿಂದ ನಿನ್ನ ಧೈರ್ಯ ಹೆಚ್ಚು ವಂತಾಗುವುದಾದರೆ. ಆದರೆ......ಅದು ಯೋಗ್ಯವಾದುದು ಎನ್ನುತ್ತೀಯಾ ?" ಎಂದಳು.

"ಅದೇನೊ ನನಗೆ ಗೊತ್ತಿಲ್ಲ. ಯೋಗ್ಯವಲ್ಲ ಎಂದೇ ಎನಿಸುತ್ತದೆ. ಆದರೆ, ನೋಡು–ಅವರ ಮೇಲೇ ಮುಂದಿನದೆಲ್ಲ..."

"ಯೋಗ್ಯವೊ, ಅಯೋಗ್ಯವೊ ಬರುತ್ತೇನೆ ಬಿಡು, ನಿನಗೆ ನೆರವಾಗುತ್ತೇನೆ ಎಂಬುದೇ ಎಷ್ಟೊ ಸಂತೋಷ," ಎಂದಳು ಉತ್ಸಾಹದಿಂದ.

"ನೆರವು ! ಅಲ್ಲ, ಈ ಕೆಲಸವೆಲ್ಲಾ ನಿನ್ನಿಂದಲೇ ಆದಂತೆ. ಈ ಸೌಂದರ್ಯ, ಈ ಆಕರ್ಷಣೆ ಇವಲ್ಲ ನನ್ನೊಟ್ಟಿಗಿದ್ದಾಗ ಅವರು ಕೊಡಲಾರದಷ್ಟು ಸಂಬಳವನ್ನಾದರೂ ಕೇಳೇನು. ಅವರಿಗೆ ಇಲ್ಲ ಎನ್ನಲು ಮನಸ್ಸೇ ಬಾರದು."

"ಓಹೊಹೊ–ಆ ಮುಖದ ಕೆಂಪು, ಆ ಕಣ್ಣುಗಳ ಹೊಳಪು–ನೀವು ನೋಡಬೇಕಿತ್ತು! "ಥೂ ಭಟ್ಟಂಗಿ ! ನೀನು ಹೇಳುವುದರಲ್ಲಿ ಒಂದಕ್ಷರವೂ ನಿಜವಿಲ್ಲ. ಆದರೂ ನಿನ್ನ ಜೊತೆಗೆ ಬರುತ್ತೇನೆ–ನೀನೆಂದುಕೊಂಡಂತೆ ಎಲ್ಲ ಇಲ್ಲ ಎಂಬುದನ್ನು ಕಲಿಸುವುದಕ್ಕಾದರೂ ಬರುತ್ತೇನೆ."

ನನ್ನ ಅನುಮಾನಗಳೆಲ್ಲ ಕರಗಿದುವೆ ? ನನ್ನ ಆತ್ಮವಿಶ್ವಾಸ ಮರಳಿತೆ? ನೀವೇ ಇದನ್ನು ತೀರ್ಮಾನಿಸಿ. ಅಲ್ಲೇ ಆ ಕ್ಷಣದಲ್ಲೇ ಮನಸ್ಸಿನಲ್ಲಿ ನನ್ನ ಮೊದಲ ವರ್ಷದ ಸಂಬಳ ೧೨೦೦ ಪೌಂಡಿಗೇರಿಸಿಕೊಂಡೆ ! ಅವಳಿಗೆ ಅದನ್ನು ಆಗ ಹೇಳಲಿಲ್ಲ. ಅವಳನ್ನು ಚಕಿತಗೊಳಿಸೋಣ ಎಂದು ಹಾಗೇ ಉಳಿಸಿದೆ.

ಮನೆಯ ದಾರಿಯಲ್ಲಿ ಮೋಡದ ಮೇಲೆ ತೇಲುತ್ತ ಹೋದೆ. ಹೇಸ್ಟಿಂಗ್ಸ್ ಮಾತಾಡುತ್ತಲೇ ಇದ್ದ. ನನಗೊಂದು ಶಬ್ದವೂ ಕೇಳಿಸಲಿಲ್ಲ. ನಮ್ಮ ಹಜಾರವನ್ನು ಪ್ರವೇಶಿಸಿದಾಗ, ಅವನು ನನ್ನ ವೈಭವವನ್ನು ಮೆಚ್ಚಿ ಹೊಗಳತೊಡಗಿದಾಗ ಈ ಲೋಕಕ್ಕಿಳಿದೆ.

"ಇಲ್ಲಿ ಸ್ವಲ್ಪ ನಿಂತು ಎಲ್ಲ ಕಣ್ತುಂಬ ನೋಡುತ್ತೇನೆ. ಅರಮನೆ ಕಣಯ್ಯ, ಥೇಟ್ ಅರಮನೆಯೆ ! ಬಯಸಬಹುದಾದದ್ದೆಲ್ಲ ಇಲ್ಲಿದೆ–ಇದ್ದಿಲು, ಬೆಂಕಿ, ಊಟ, ಎಲ್ಲ ಸಿದ್ಧವಾಗಿ ನಿಂತಿವೆ. ಹೆನ್ರಿ, ನೀನು ಎಷ್ಟು ಶ್ರೀಮಂತ ಎಂಬುದಷ್ಟೆ ಅಲ್ಲ, ನಾನೆಷ್ಟು ಬಡವ ಎಂಬುದೂ ನನ್ನ ಮೂಳೆಯಲ್ಲೆಲ್ಲ ಹೊಳಗುತ್ತಿದೆ—ನಾನೆಷ್ಟು ಬಡವ, ಸೋತವ, ಹಾಳಾದವ

# ಪ್ಯೂರಿಟಸ್
# ಸಾಮಾನ್ಯ ನಳದ ನೀರಿನ ಕಲ್ಮಷಗಳನ್ನು ಸೋಸಿ, ಕುಡಿಯಲು 100% ನಿರಪಾಯಕರವಾಗುವಂತೆ ಹೇಗೆ ಮಾಡುತ್ತದೆಂದು ನೋಡಿರಿ

ನೀರಿನ ಮೂಲಕ ಹರಡುವ ವಾಂತಿಭೇದಿ, ಟೈಫಾಯ್ಡ್, ಆಮಶಂಕೆ, ಜಠರದ ಮತ್ತು ಕರುಳಿನ ಊತ ಇತ್ಯಾದಿ ವ್ಯಾಧಿಗಳು ಬರದಂತೆ ತಡೆಯಲು ಇದಕ್ಕಿಂತ ಉತ್ತಮ ಉಪಾಯ ಇನ್ನೊಂದಿಲ್ಲ.







ನಿಮ್ಮವರ ಕ್ಷೇಮಕ್ಕಾಗಿ ಮುಂಜಾಗ್ರತೆ ವಹಿಸಿ. ಇಂದೇ ಪ್ಯೂರಿಟಸ್ ಕೊಳ್ಳಿರಿ.

ಎಚ್ಚರಿಕೆ

ನಿಜವಾದ ಪ್ಯೂರಿಟಸ್ ಫಿಲ್ಟರು ನಿಮಗೆ ಸಿಗುತ್ತದೆಂದು ಖಾತ್ರಿ ಮಾಡಿಕೊಳ್ಳಿ. ಮುಂದಿನ ಅರಿವೆ ಪ್ಯೂರಿಟಸ್ ಲೇಬಲನ್ನು ಗಮನಿಸಿ. ಕ್ಯಾಂಡಲ್‌ನ ಮೇಲ್ಭಾಗದ ಮೇಲೆ ಪ್ಯೂರಿಟಸ್ ಹೆಸರು ಮತ್ತು ರಿಜಿಸ್ಟ್ರೇಶನ್ ನಂಬರ್ 196501 ಇರುವುದನ್ನು ನೋಡಿಕೊಳ್ಳಿ.

ಬಲ್ಸಾರಾ
BALSARA
ಸುಖಮಯ ಜೀವನಕ್ಕೆ ಆಧುನಿಕ ಸಾಧನಗಳು

ಎಂಬುದೆಲ್ಲ !"

ಥೂ ಪ್ಲೇಗು ಹಿಡಿಯ ! ಈ ಭಾಷೆ ನನ್ನ ಜೀವವನ್ನೆ ನಡುಗಿಸಿತು. ಈಗ ಪೂರ್ಣ ಎಚ್ಚರಾದೆ. ದೊಡ್ಡ ಕಂದಕದ ಮೇಲೆ ಕೇವಲ ಅರ್ಧ ಅಂಗುಲದ ಚಿಪ್ಪಿನ ಮೇಲೆ ನಿಂತಿದ್ದೇನೆ ಎನಿಸಿತು. ನಾನು ಕನಸಿನಲ್ಲಿದ್ದೆ ಎಂಬುದು ನನಗೇ ಗೊತ್ತಿರಲಿಲ್ಲ. ಅದನ್ನು ತಿಳಿಯುವ ಮನಸ್ಸೂ ಇರಲಿಲ್ಲ. ಆದರೆ ಈಗ ಕಾಸಿಲ್ಲದವ, ಸಾಲದಲ್ಲಿ ಮುಳುಗಿದವ. ಒಬ್ಬ ಮುದ್ದು ಹುಡುಗಿಯ ಸುಖದುಃಖ ನನ್ನ ಕೈಯಲ್ಲಿದೆ. ಎಂದೆಂದೂ ಸಿಗದಿರಬಹುದಾದ ಸಂಬಳದ ಹೊರತಾಗಿ ಇನ್ನೇನೂ ನನ್ನ ಮುಂದಿಲ್ಲ. ಥೂ, ಉದ್ಧಾರದ ಅವಕಾಶವೆ ಇಲ್ಲದಷ್ಟು ಹಾಳಾಗಿದ್ದೇನೆ!

"ಹೆನ್ರಿ, ನಿನ್ನ ದಿನದ ಆದಾಯದಲ್ಲಿ ಎಣಿಸದೆ ಉದುರಿದಷ್ಟೆ ನನ್ನ..."

"ಅಯ್ಯೋ ನನ್ನ ದಿನದ ಆದಾಯವೆ? ಇಲ್ಲಿ ನೋಡು, ಈ ಸ್ಕಾಚ್ ಕುಡಿ, ಖುಷಿಪಡು. ಇದೊ- ನಿನ್ನ ಆರೋಗ್ಯಕ್ಕೆ...ಇಲ್ಲ, ನೀನು ಹಸಿದಿದ್ದೀ ಕೂತುಕೊ."

"ಊಹ್ಞು, ಒಂದು ತುತ್ತೂ ಬೇಡ; ಆ ಸ್ಥಿತಿಯನ್ನು ದಾಟಿಬಿಟ್ಟಿದ್ದೇನೆ. ಈ ದಿನಗಳಲ್ಲಿ ನನಗೆ ತಿನ್ನುವುದೇ ಸಾಧ್ಯವಿಲ್ಲದಾಗಿದೆ. ಬೇಕಾದರೆ ನಿನ್ನ ಜೊತೆಗೆ ಇನ್ನೂ ಕುಡಿಯುತ್ತೇನೆ, ಕುಸಿದು ಬೀಳುವತನಕ ಕುಡಿಯುತ್ತೇನೆ ಬಾ."

"ಪೀಪಾಯಿಗೆ ಪೀಪಾಯಿ—ನಿನ್ನ ಜೊತೆಗಿದ್ದೇನೆ, ರೆಡಿಯಾ? ಆರಂಭಿಸೋಣ. ಈಗ ನಿನ್ನ ಕತೆ ಬಿಚ್ಚು."

"ಕತೆ ಬಿಚ್ಚುವುದು ? ಮತ್ತೆ ?"

"ಮತ್ತೆ ? ಏನು ಹಾಗೆಂದರೆ ?"

"ಎಂದರೆ—ಅದನ್ನೆಲ್ಲ ಮತ್ತೊಮ್ಮೆ ಕೇಳಬೇಕು ಎನ್ನುತ್ತೀಯಾ ?"

"ಮತ್ತೊಮ್ಮೆ ಕೇಳಬೇಕು ಎಂದೆನೆ? ಇದೇನೊ ಒಗಟಾಯಿತೆ? ತಾಳು— ಕುಡಿತ ಸಾಕು. ನಿನಗೆ ಮತ್ತೆ ಅದರ ಅವಶ್ಯಕತೆಯಿಲ್ಲ."

"ಇಲ್ಲಿ ನೋಡು ಹೆನ್ರಿ, ನನಗೆ ಹೆದರಿಕೆಯಾಗುತ್ತಿದೆ. ಅಲ್ಲಪ್ಪ—ದಾರಿಯಲ್ಲಿ ನನ್ನ ಕತೆಯನ್ನೆಲ್ಲ ಹೇಳಲಿಲ್ಲವೇನಯ್ಯ?"

"ನೀನೆ ?"

"ಹೌದು ನಾನೇ."

"ಅದರಲ್ಲಿ ಒಂದು ಶಬ್ದವಾದರೂ ನನ್ನ ಕಿವಿಗೆ ಬಿದ್ದಿದ್ದರೆ ನನ್ನನ್ನು ಗಲ್ಲಿಗೇರಿಸು."

"ಹೆನ್ರಿ, ಇದು ಗಂಭೀರವಾದ ವಿಷಯ. ಆ ರಾಯಭಾರಿಯ ಮನೆಯಲ್ಲಿ ಏನು ತೆಗೆದುಕೊಂಡಿ ?"

ಆಹಾ—ಎಲ್ಲ ಒಂದು ಕ್ಷಣದಲ್ಲಿ ಹೊಳೆದು ಹೋಯಿತು. ತಕ್ಷಣ ಎಲ್ಲಾ ಒಪ್ಪಿಕೊಂಡೆ—ಸರಿಯಾದ ಮನುಷ್ಯನಂತೆ.

"ಅಲ್ಲ—ಈ ಲೋಕದಲ್ಲೆ ಅತ್ಯಂತ ಮುದ್ದಾದ ಒಬ್ಬ ಹುಡುಗಿಯನ್ನು ಸೆರೆಹಿಡಿದೆ!" ಅವನು ನುಗ್ಗಿ ಬಂದವನೆ ಕೈ ಕುಲುಕಿದ, ಕುಲುಕಿದ—ಕೈ ಕಳಚುವಂತೆ ಕುಲುಕಿದ. ನನಗೆ ಮೂರು ಮೈಲಿ ಉದ್ದಕ್ಕೂ ಅವನು ಹೇಳಿದ ಒಂದು ಶಬ್ದವೂ ಕೇಳಿರಲಿಲ್ಲ ಎಂಬುವಕ್ಕೆ ಅವನೇನೂ ಆಕ್ಷೇಪವೆತ್ತಲಿಲ್ಲ. ಕೂತು ತಾಳ್ಮೆಯಿಂದ ತನ್ನ ಕತೆಯನ್ನೆಲ್ಲ ಮತ್ತೊಮ್ಮೆ ಹೇಳಿದ. ಸಾರಾಂಶ ಇಷ್ಟು

ಅವನು ಏನೊ ಬಲು ಭಾರಿ ಅವಕಾಶ ಸಿಕ್ಕಿದೆ ಎಂದುಕೊಂಡು ಇಂಗ್ಲಂಡಿಗೆ ಬಂದ. ಗೋಲ್ಡ್ ಮತ್ತು ಕರಿ ಬಡಾವಣೆಯನ್ನು ಮಾರಿ ಹತ್ತು ಲಕ್ಷ ಡಾಲರಿನ ಮೇಲೆ ಬಂದದ್ದನ್ನೆಲ್ಲ ಅವನೇ ಇಟ್ಟುಕೊಳ್ಳಬಹುದಾಗಿತ್ತು, ಕಷ್ಟಪಟ್ಟು ಕೆಲಸ ಮಾಡಿದ; ಎಳೆಯಬೇಕಾದ ಸೂತ್ರಗಳನ್ನೆಲ್ಲ ಎಳೆದು ನೋಡಿದ. ಪ್ರಾಮಾಣಿಕವಾದ ಯಾವ ದಾರಿಯನ್ನೂ ಪರೀಕ್ಷಿಸದೆ ಬಿಡಲಿಲ್ಲ. ತನ್ನಲ್ಲಿದ್ದದ್ದನ್ನೆಲ್ಲ ಕಳೆದುಕೊಂಡ. ಆದರೆ ಯಾವನೊಬ್ಬ ಹಣವಂತನೂ ಅವನಿಗೆ ಕಿವಿಗೊಡಲಿಲ್ಲ. ಅವನಿಗೆ ಕೊಟ್ಟ ಅವಧಿ ಈ ತಿಂಗಳ ಕೊನೆಗೆ ಮುಗಿಯುತ್ತದೆ. ಒಂದು ಮಾತಿನಲ್ಲಿ ಹೇಳುವುದಾದರೆ ಅವನು ಮುಳುಗಿದ್ದ.

ಅವನು ನೆಗೆದು ನಿಂತು ಕೂಗಿಕೊಂಡ: "ಹೆನ್ರಿ, ನೀನು ನನ್ನನ್ನುಳಿಸಬಲ್ಲೆ! ಈ ಪ್ರಪಂಚದಲ್ಲಿ ನನ್ನನ್ನುಳಿಸಬಲ್ಲನೆಂದಾದರೆ ನೀನೊಬ್ಬನೇ. ಉಳಿಸುತ್ತೀಯಾ ಹೇಳು. ಉಳಿಸೊಲ್ಲವೆ?"

"ಅದು ಹ್ಯಾಗೆ, ಹೇಳಯ್ಯ."

"ನನಗೊಂದು ಹತ್ತುಲಕ್ಷ ಡಾಲರು ಕೊಡು– ಮೇಲೆ ದಾರಿಯ ಖರ್ಚು ಕೊಡು... ಇಲ್ಲ ಎನ್ನಬೇಡ."

ನನಗೆ ಸಂಕಟವಾಯಿತು. ಇನ್ನೇನು— "ಹೆನ್ರಿ ನಾನೂ ಪಾಪರ್ ಕಣಯ್ಯ ಕಾಸೂ ನನ್ನಲ್ಲಿಲ್ಲ: ಮೇಲೆ ಸಾಲ ಬೇರೆ!" ಎನ್ನುವುದರಲ್ಲಿದ್ದೆ. ಆದರೆ ಏನೋ ಒಂದು ಬಿಸಿ ಬಿಸಿ ಆಲೋಚನೆ ಉರಿಯುತ್ತ ಬಂತು. ಬಾಯಿಗೆ ಬಂದ ಮಾತನ್ನು ತಡೆ ಹಿಡಿದೆ. ವಸ್ತುತಃ ಮನಸ್ಸಿನ ಮೇಲೆ ಸಂಪೂರ್ಣ ಹತೋಟಿ ಇಟ್ಟುಕೊಂಡು ಹೇಳಿದೆ: "ಲಾಯರ್, ನಿನ್ನನ್ನು-ಳಿಸುತ್ತೇನೆ."

"ಬದುಕಿದೆ– ಬದುಕೇಬಿಟ್ಟೆ. ದೇವರ ಕೃಪೆ ಯಾವಾಗಲೂ ನಿನ್ನ ಮೇಲಿರಲಯ್ಯ! ನಾನೆಂದಾದರೂ..."

"ನಾನು ಹೇಳಬೇಕಾದುದನ್ನು ಹೇಳಿ ಮುಗಿಸುತ್ತೇನೆ, ಸ್ವಲ್ಪ ತಾಳು. ಆದರೆ ನೀನೆಂದುಕೊಂಡಂತಲ್ಲ. ನೀನಿಷ್ಟು ಕಷ್ಟಪಟ್ಟಿರುವಾಗ, ನೀನೆಂದಂತೆ ಮಾಡಿದರೆ ನಿನಗೆ ಅನ್ಯಾಯವಾಗುತ್ತದೆ. ನನಗೇನೂ ಗಣಿ ಕೊಳ್ಳುವ ಅವಶ್ಯಕತೆಯಿಲ್ಲ. ಲಂಡನ್ನಿನಂಥ ವ್ಯಾಪಾರ ಕೇಂದ್ರದಲ್ಲಿ ನನ್ನ ಬಂಡವಾಳ ಹೂಡಲು ಬೇಕಾದಷ್ಟು ಅವಕಾಶ ಇದೆ. ನಾನಿಲ್ಲಿ ಮಾಡುತ್ತಿರುವುದೇ ಅದು. ನಿನಗಾಗಿ ನಾನು ಮಾಡುವುದಿಷ್ಟು. ಆ ಗಣಿ ವಿಷಯವೆಲ್ಲ ನನಗೆ ಗೊತ್ತು. ಅದರ ಭಾರಿ ಬೆಲೆಯೂ ಗೊತ್ತು. ಯಾರು ಕೇಳಿದರೂ ಆಣೆ ಮಾಡಿ ಹೇಳಬಲ್ಲೆ. ನನ್ನ ಹೆಸರನ್ನು ಬಳಸಿ ಈ ಹದಿನೈದು ದಿನದಲ್ಲಿ ನಗದು ೩೦ ಲಕ್ಷ ಡಾಲರಿಗೆ ಅದನ್ನು ನೀನು ಮಾರಬಲ್ಲೆ. ಲಾಭ ನನಗರ್ಧ, ನಿನಗರ್ಧ."

ನೀವು ನಂಬುತ್ತೀರೋ ಇಲ್ಲವೋ ನಾನು ಅವನನ್ನು ಕೆಡವಿ ಕಟ್ಟಿ ಹಾಕದಿದ್ದರೆ, ನನ್ನ ಕುರ್ಚಿ ಮೇಜೆಲ್ಲ ಹೊತ್ತಿ ಉರಿಯುವಷ್ಟರ ಮಟ್ಟಿಗೆ ಕುಣಿದಾಡಿಬಿಡುತ್ತಿದ್ದ; ಇದ್ದದ್ದನ್ನೆಲ್ಲ ಪುಡಿಗುಟ್ಟುತ್ತಿದ್ದ. ಅಷ್ಟು ಹುಚ್ಚನಾಗಿದ್ದ ನಾತ-ಸಂತೋಷದಿಂದ. ಅಲ್ಲೇ ಎದ್ದುಕೊಂಡು ಹಿಡಿಸಲಾರದ ಸಂತೋಷದಿಂದ ಬಡಬಡಿಸಿದ.

"ನಿನ್ನ ಹೆಸರು ಬಳಸಬಹುದಲ್ಲವೆ? ನಿನ್ನ ಹೆಸರು! ಹಿಂಡು ಹಿಂಡಾಗಿ ಬರುತ್ತಾರಯ್ಯ ಈ ಲಂಡನ್ನಿನ ಶ್ರೀಮಂತರು!– ಷೇರಿಗಾಗಿ ಹೊಡೆದಾಡಿಬಿಡುತ್ತಾರೆ! ಉದ್ಧಾರವಾದೆ ಕಣಯ್ಯ, ಎಂದೆಂದಿಗೂ ಉದ್ಧಾರವಾಗಿಬಿಟ್ಟೆ! ನಾನು ಬದುಕಿರುವಷ್ಟು ದಿನವೂ ನಿನ್ನನ್ನು ಮರೆಯುವುದಿಲ್ಲ."

ಇಪ್ಪತ್ನಾಲ್ಕು ಗಂಟೆಗಳಲ್ಲಿ ಲಂಡನ್ನೆಲ್ಲ ಗುಜುಗುಟ್ಟತೊಡಗಿತ್ತು. ನಾನು ಮಾಡಬೇಕಾದದ್ದು ಮತ್ತೇನೂ ಇರಲಿಲ್ಲ– ದಿನದಿನವೂ ಮನೆಯಲ್ಲಿ ಕೂತು, ಬಂದವರಿಗೆಲ್ಲ, "ಹೌದು, ನನ್ನ ಹೆಸರು ಹೇಳುವಂತೆ ನಾನೇ ಅವನಿಗೆ ಹೇಳಿದೆ. ಅವನನ್ನು ಬಲ್ಲೆ, ಆ ಗಣಿಯನ್ನೂ ಬಲ್ಲೆ. ಅವನ ಚಾರಿತ್ರ್ಯ ಕುಂದಿಲ್ಲದ್ದು. ಆ ಗಣಿ ಅವನು ಕೇಳುವುದಕ್ಕಿಂತ ಹೆಚ್ಚು ಬೆಲೆ ಬಾಳುತ್ತದೆ," ಎಂದು ಹೇಳುವುದಷ್ಟೆ.

ಈ ಮಧ್ಯೆ ನನ್ನ ಸಂಜೆಗಳನ್ನೆಲ್ಲ ರಾಯಭಾರಿಯ ಮನೆಯಲ್ಲಿ ಪೋರ್ಟಿಯಾಳೊಡನೆ ಕಳೆಯುತ್ತಿದ್ದೆ. ಅವಳಿಗೆ ಈ ಗಣಿ ವ್ಯವಹಾರದ ವಿಷಯ ಚಕಾರವೂ ಹೇಳಲಿಲ್ಲ. ಅವಳನ್ನು ಆಶ್ಚರ್ಯಗೊಳಿಸಲು ಅದನ್ನೂ ಕಾದಿಟ್ಟೆ. ಸಂಬಳದ ವಿಷಯ ಮಾತಾಡುತ್ತಿದ್ದೆವು. ಸಂಬಳ, ಪ್ರೇಮ ಇಷ್ಟೆ ಮಾತನಾಡುತ್ತಿದ್ದುದು, ಕೆಲವೇಳೆ ಎರಡೂ ಒಟ್ಟಿಗೆ. ರಾಯಭಾರಿಯ ಹೆಂಡತಿ ಮತ್ತು ಮಗಳು ನಮ್ಮ ವ್ಯವಹಾರದಲ್ಲಿ ಎಷ್ಟು ಆಸಕ್ತಿ ವಹಿಸಿದರು, ಏನು ಕತೆ! ಎಷ್ಟೆಲ್ಲ ಬಗೆಯಿಂದ ನಮ್ಮ ಏಕಾಂತಕ್ಕೆ ಅವಕಾಶ ಮಾಡಿಕೊಡುತ್ತಿದ್ದರು!– ರಾಯಭಾರಿಗೆ ಸ್ವಲ್ಪವೂ ಸುಳಿವು ಕೊಡದಂತೆ! ಛೆ ಅದರ ನೆನಪೇ ಸೊಗಸು!

ಅಂತೂ ತಿಂಗಳು ಮುಗಿಯಿತು. ಲಂಡನ್ ಮತ್ತು ಜಿಲ್ಲೆಯ ಬ್ಯಾಂಕುಗಳಲ್ಲಿ ನನ್ನ ಲೆಕ್ಕದಲ್ಲಿ ಆಗಲೆ ಹತ್ತು ಲಕ್ಷ ಡಾಲರ್ ಸಂಗ್ರಹವಾಗಿತ್ತು. ಸಾಧ್ಯವಿದ್ದಷ್ಟು ಉತ್ತಮ ವೇಷ ಧರಿಸಿ ಪೋರ್ಟ್‌ಲಂಡ್ ಮನೆಯ ಎದುರು ಹಾದು ಹೋದೆ. ನನ್ನ ಹಕ್ಕಿಗಳು ಗೂಡಿಗೆ ಬಂದಂತಿತ್ತು. ಹಾಗೇ ಮುಂದೆ ರಾಯಭಾರಿಯ ಮನೆಗೆ ಹೋಗಿ ನನ್ನ ಪ್ರಿಯೆಯನ್ನು ಕರೆದುಕೊಂಡು ಸಂಬಳದ ವಿಷಯ ಮಾತಾಡುತ್ತ ಆ ಮನೆಗೆ ಹಿಂದಿರುಗಿದೆ.

# ಬಿಸ್ಕಟ್ ತಿನ್ನುವ ಸಮಯ ಎಂದರೆ
# ವಿಂಡ್ಸರ್ ಸಮಯ

## ಶಾಲೆ ಮುಗಿದ ಮೇಲೆ ಯಾವುದೇ ಸಮಯ–
## ಅದು ವಿಂಡ್ಸರ್ ಗ್ಲೂಕೋಸ್ ಬಿಸ್ಕಟ್ ತಿನ್ನುವ ಸಮಯ

ವಿಂಡ್ಸರ್ ಗ್ಲೂಕೋಸ್ ಬಿಸ್ಕಿಟ್ ತಿನ್ನಿರಿ. ಗರಿಮುರಿ. ಬಲು ಮೃದು. ರುಚಿಕರ.
ವಿದ್ಯುಚ್ಛಕ್ತಿಯಿಂದ ನಿಯಂತ್ರಿತ ಯಂತ್ರದಿಂದ—




ಈಗ ತಾನೇ ತಯಾರಿಸಲ್ಪಟ್ಟದೆಯೋ ಅನ್ನುವಷ್ಟು ತಾಜಾ!
ಬಿಸ್ಕಿಟ್‌ಗಳಲ್ಲಿ ಏನಾದರೂ ಹೊಸತಾದುದನ್ನು ಸವಿಯಲು
ಇದುವೇ ಸಮಯವಲ್ಲವೇ?

**ಯಾವುದೇ ಸಮಯ ವಿಂಡ್ಸರ್ ತಿನ್ನುವ ಸಮಯ**

**ವಿಂಡ್ಸರ್ ಫುಡ್ಸ್ ಲಿಮಿಟೆಡ್,**
ಮಕರ್‌ಪುರ್, ಬರೋಡಾ

Axis-Wf-8 KAN

ಅವಳ ಉದ್ವೇಗ, ಆತಂಕ ಅವಳ ಸೌಂದರ್ಯವನ್ನು ಹೆಚ್ಚಿಸಿದ್ದುವು.

"ಚಿನ್ನಾ, ಈಗ ನೀನು ಕಾಣುವ ರೀತಿಯಲ್ಲಿ ವರ್ಷಕ್ಕೆ ಮೂರು ಸಾವಿರಕ್ಕಿಂತ ಕಡಿಮೆ ಸಂಬಳ ಕೇಳುವುದು ಅಪರಾಧವೇ ಸರಿ."

"ಹೆನ್ರಿ, ಹೆನ್ರಿ, ನೀನು ಎಲ್ಲ ಹಾಳು ಮಾಡಿಬಿಡುತ್ತೀ!"

"ಹೆದರಬೇಡ, ನೀನು ಇಷ್ಟೇ ಸುಂದರವಾಗಿ ಕಾಣುತ್ತಿರು. ನನ್ನನ್ನು ನಂಬು. ಎಲ್ಲ ಸರಿ ಹೋಗುತ್ತದೆ."

ಅದು ಆದದ್ದೂ ಹಾಗೆಯೆ. ದಾರಿಯುದ್ದಕ್ಕೂ ಅವಳ ಧೈರ್ಯ ಕುಗ್ಗದಂತೆ ನಾನು ನೋಡಿಕೊಳ್ಳಬೇಕಾಯಿತು. ಅವಳು ಉದ್ದಕ್ಕೂ ಹೇಳುತ್ತ ಬಂದಳು, "ನೆನಪಿಟ್ಟುಕೋ, ತೀರ ಹೆಚ್ಚಿನ ಸಂಬಳ ಕೇಳಿದರೆ ಏನೂ ಸಿಗದಂತಾದೀತು. ಆಮೇಲೆ ನಮ್ಮ ಗತಿಯೇನು? ಸಂಪಾದನೆಯ ದಾರಿಯೇನು?" ಎಂದು.

ಅದೇ ಸೇವಕನೇ ನಮ್ಮನ್ನು ಒಳಕ್ಕೆ ಕರೆದೊಯ್ದ. ಆ ಇಬ್ಬರೂ ವೃದ್ಧರೂ ಅಲ್ಲಿದ್ದರು. ನನ್ನ ಜೊತೆಗಿದ್ದ ಅದ್ಭುತ ಪ್ರಾಣಿಯನ್ನು ಕಂಡು ಅವರು ಚಕಿತರಾದರು. ಆದರೆ "ಎಲ್ಲ ಸರಿಯಾಗಿದೆ. ಅವಳು ನನ್ನ ಭಾವೀ ಆಧಾರ, ಸಂಗಾತಿ" ಎಂದೆ. ಅವಳನ್ನು ಅವರಿಗೆ ಪರಿಚಯಿಸಿ, ಅವರ ಹೆಸರು ಹಿಡಿದು ಕರೆದೆ. ಅವರಿಗೇನೂ ಆಶ್ಚರ್ಯವಾಗಲಿಲ್ಲ. ನಾನು ಯಾವುದಾದರೂ ಡೈರೆಕ್ಟರಿಯಿಂದ ಅವರ ಹೆಸರು ತಿಳಿದಿರುತ್ತೇನೆಂದು ಅವರಿಗೆ ಗೊತ್ತು. ಅವರು ನಮ್ಮನ್ನು ಕೂರಿಸಿ, ಬಹಳ ನಯವಾಗಿ ನಡೆದುಕೊಂಡು ಅವಳಿಗೆ ಸಂಕೋಚವೆನಿಸದಂತೆ ನೋಡಿಕೊಂಡರು.

ಆಗ ನಾನೆಂದೆ: "ಸ್ವಾಮಿ, ವರದಿಕೊಡಲು ಸಿದ್ಧನಿದ್ದೇನೆ."

"ಬಹಳ ಸಂತೋಷ," ಎಂದ ನನಗೆ ನೋಟು ಕೊಟ್ಟವನು. "ಈಗ ನಮ್ಮ ಪಣದ ಇತ್ಯರ್ಥ ಮಾಡಬಹುದು. ನೀನು ಪಣ ಗೆದ್ದಿದ್ದರೆ ನನ್ನಲ್ಲಿರುವ ಯಾವ ಹುದ್ದೆಯನ್ನಾದರೂ ಪಡೆಯಬಹುದು. ಆ ನೋಟಿದೆಯಾ?"

"ಇಲ್ಲಿದೆ ನೋಡಿ"–ಅವನ ಕೈಗೆ ಅದನ್ನು ಕೊಟ್ಟೆ.

"ನಾನು ಗೆದ್ದೆ!" ಎಂದವನು ಕೂಗಿ ತನ್ನ ಸೋದರ ಏಬೆಲನ ಬೆನ್ನು ಕುಟ್ಟಿ, "ಏನೆನ್ನುತ್ತೀಯಾ?" ಎಂದವನನ್ನು ಕೇಳಿದ.

"ಅವನು ಬದುಕಿಬಿಟ್ಟನಲ್ಲಯ್ಯ! ನಾನು ಇಪ್ಪತ್ತು ಸಾವಿರ ಪೌಂಡ್ ಕಳೆದುಕೊಂಡೆ. ಆದರೆ ಇದು ಸಾಧ್ಯವೆಂದು ನಾನೆಂದೂ ನಂಬುತ್ತಿರಲಿಲ್ಲ," ಎಂದ ಏಬೆಲ್.

"ನಾನು ಹೇಳುವುದು ಇನ್ನೂ ಇದೆ, ಇನ್ನೆಂದಾದರೂ ಬಂದು ಈ ಒಂದು ತಿಂಗಳ ಕತೆಯನ್ನೆಲ್ಲ ವಿವರವಾಗಿ ಹೇಳಲು ಅವಕಾಶ ಕೊಡಿ. ಅದು ಕೇಳುವಂಥದು. ಈಗ ಇದನ್ನು ಒಮ್ಮೆ ನೋಡಿ," ನಾನೆಂದೆ.

"ಏನು! ಎರಡು ಲಕ್ಷ ಪೌಂಡ್ ಡಿಪಾಜಿಟ್ಟಿನ ಸರ್ಟಿಫಿಕೇಟು ! ಅದು ನಿನ್ನದೇ ?"

"ನನ್ನದೇ, ಮೂವತ್ತು ದಿನ ನೀವು ಕೊಟ್ಟ ಸಾಲವನ್ನು ಬಹಳ ವಿವೇಚನೆಯಿಂದ ಬಳಸಿಕೊಂಡು ಗಳಿಸಿದೆ. ಆ ನೋಟನ್ನು ನಾನು ಬಳಸಿದ್ದೆಲ್ಲ ಚಿಕ್ಕಪುಟ್ಟ ಸಾಮಾನು ಖರೀದಿ ಮಾಡಿ, ಅದನ್ನು ಚಾಚಿ ಚಿಲ್ಲರೆ ಕೇಳುವುದಕ್ಕೆ."

"ಇದು ಆಶ್ಚರ್ಯವಯ್ಯ! ನಂಬುವುದಕ್ಕೆ ಆಗೋಲ್ಲ."

"ಪರವಾಯಿಲ್ಲ. ಇದನ್ನು ಸಾಬೀತುಪಡಿಸಬಲ್ಲೆ. ನನ್ನ ಮಾತನ್ನು ನೀವು ಆಧಾರವಿಲ್ಲದೆ ನಂಬಬೇಕಾಗಿಲ್ಲ."

"ಈಗ ಆಶ್ಚರ್ಯಪಡುವುದು ಪೋರ್ಷಿಯಾಳ ಸರದಿ. ಕಣ್ಣನ್ನು ಇಷ್ಟಗಲ ಅರಳಿಸಿ, "ಹೆನ್ರಿ, ಅದು ನಿಜವಾಗಿಯೂ ನಿನ್ನ ಹಣವೇ ? ನನಗೆ ಸುಳ್ಳು ಹೇಳಿ ತಮಾಷೆ ನೋಡುತ್ತಿದ್ದೆಯಾ ?"

"ಹೌದು ಚಿನ್ನಾ, ನೀನು ಕ್ಷಮಿಸುತ್ತಿ ಅಂತ ಗೊತ್ತು."

"ಅಷ್ಟೊಂದು ಖಾತ್ರಿಯಾಗಿರಬೇಡ. ನೀನು ಮಹಾ ಘಾಟಿ. ನನ್ನನ್ನು ನೀನು ಹೀಗೆ ಮೋಸಪಡಿಸುವುದೇ ?"

"ಅದನ್ನೆಲ್ಲ ನೀನು ಮರೆತುಬಿಡುತ್ತೀ ಕಣೆ, ಎಲ್ಲ ತಮಾಷೆ ಅಷ್ಟೆ. ಬಾ ಹೋಗೋಣ." ಎಂದೆ. ಆದರೆ ಆ ನನ್ನ ವ್ಯಕ್ತಿ, "ತಾಳು ತಾಳು. ಕೆಲಸ, ಹುದ್ದೆ ?" ಎಂದ.

"ಸರಿ, ನಿಮಗೆ ನಾನು ಕೃತಜ್ಞ. ಆದರೆ ಅದು ನನಗೆ ಬೇಕಾಗಿಲ್ಲ," ಎಂದೆ.

"ನನ್ನಲ್ಲಿರೋದರಲ್ಲೆಲ್ಲ ಅತ್ಯುತ್ತಮವಾದ ಹುದ್ದೆ–ನೀನು ಕೇಳಿದ್ದು," ಎಂದ.

"ಥ್ಯಾಂಕ್ಸ್, ಅದು ನನಗೆ ಬೇಕಾಗಿಲ್ಲ–" ಎಂದೆ.

"ಹೆನ್ರಿ, ಏನು ನಾಚಿಕೆಗೇಡು! ಆತನಿಗೆ ಸರಿಯಾಗಿ ನಿನ್ನ ಕೃತಜ್ಞತೆ ತೋರಿಸುತ್ತಿಲ್ಲ. ನಿನ್ನ ಪರವಾಗಿ ನಾನು ಕೃತಜ್ಞತೆ ಅರ್ಪಿಸಲಾ?" ಎಂದಳು ನನ್ನವಳು.

"ನಾನು ತೋರಿಸಿದ್ದಕ್ಕಿಂತ ಉತ್ತಮವಾಗಿ ತೋರಿಸುವಂತಿದ್ದರೆ ಅಗತ್ಯವಾಗಿ ಆಗಲಿ." ಎಂದೆ. ಅವಳು ಆ ವ್ಯಕ್ತಿಯನ್ನು ಸಮೀಪಿಸಿ, ಅವನ ತೊಡೆಯೇರಿ, ಅಪ್ಪಿ ಮುದ್ದಿಟ್ಟಳು.

ಆ ಇಬ್ಬರು ಸೋದರರರೂ ಗಹಗಹಿಸಿ ನಗತೊಡಗಿದರು. ನಾನು ಮೂಕನಾಗಿ, ಕಲ್ಲಾಗಿ ಕೂತೆ. ಪೋರ್ಷಿಯಾ, "ಅಪ್ಪ, ತನಗೆ ಬೇಕಾದ ಸ್ಥಾನ ನಿನ್ನಲ್ಲಿಲ್ಲ ಎಂದ ಅವನು. ನನಗೆ ಅವಮಾನವಾದಂತಾಯಿತು..."

"ಏನು? ಆತ ನಿನ್ನ ಅಪ್ಪನೆ?"

"ಹೌದು. ಅವನು ನನ್ನ ಮಲತಂದೆ. ಅತ್ಯಂತ ಪ್ರೀತಿಯ ತಂದೆ. ನೀನು ಕತೆ ಹೇಳಿದಾಗ, ನನ್ನ ಅಪ್ಪ ಚಿಕ್ಕಪ್ಪಂದಿರ ಹೂಟ ನಿನಗೆ ಏನೆಲ್ಲ ಸಂಕಟ ತಂದಿತು ಎಂಬುದನ್ನು ಕೇಳಿದಾಗ, ನಾನು ಏಕೆ ಹಾಗೆ ನಕ್ಕೆ ಎನ್ನುವುದು ಅರ್ಥವಾಯಿತೆ?"

ಹೌದು—ಈಗ ಬೆಪ್ಪನಾಗದೆ ನೇರವಾಗಿ ವಿಷಯಕ್ಕೆ ಬಂದು ಮಾತಾಡಿದೆ: "ನೋಡಿಸಾರ್, ನಾನು ಹೇಳಿದ್ದನ್ನೆಲ್ಲ ಹಿಂತೆಗೆದುಕೊಳ್ಳುತ್ತೇನೆ. ನನಗೆ ಬೇಕಾದ ಹುದ್ದೆ ನಿಮ್ಮಲ್ಲಿದೆ."

"ಅದೇನು ಹೇಳು."

"ಅಳಿಯನ ಹುದ್ದೆ."

"ಆಗಬಹುದು. ಆದರೆ ಈ ಹಿಂದೆ ಆ ಹುದ್ದೆಯಲ್ಲಿ ಕೆಲಸ ಮಾಡಿದ ಅನುಭವ ಇಲ್ಲದಿದ್ದರೆ–ಕರಾರಿನಂತೆ–ನೀನು ಪ್ರಮಾಣ ಪತ್ರವನ್ನು ತೋರಿಸಲಾರೆ..."

"ಪರೀಕ್ಷೆ ಮಾಡಿ ನೋಡಿ ಸಾರ್–ನಿಮ್ಮನ್ನು ಕೇಳಿಕೊಳ್ಳುತ್ತೇನೆ, ಒಂದು ಮೂವತ್ತು–ನಲವತ್ತು ವರ್ಷ ಅವಕಾಶ ಕೊಟ್ಟು ನೋಡಿ ಸಾರ್. ಅಷ್ಟರ ಮೇಲೂ..."

"ಆಗಲಯ್ಯ, ನೀನು ನೀನು ಕೇಳುವುದು ಬಹಳ ಅಲ್ಪವಾದದ್ದು. ಅವಳನ್ನು ಕರೆದುಕೊಂಡು ಹೋಗು."

ನಾವು ಸುಖಿಗಳು ಎಂದು ಹೇಳಬೇಕೆ? ವಿಸ್ತೃತ ಶಬ್ದಕೋಶದಲ್ಲಿಯೂ ಅದನ್ನು ಹೇಳುವುದಕ್ಕೆ ಶಬ್ದಗಳಿಲ್ಲ. ಒಂದೆರಡು ದಿನದಲ್ಲಿ ಈ ಕತೆಯೆಲ್ಲ ಹೊರಬಿದ್ದಾಗ ಲಂಡನ್ನಿನಲ್ಲೆಲ್ಲ ಇದರ ಮಾತೇ ಮಾತು!

ನನ್ನ ಪೋರ್ಷಿಯಾಳ ಅಪ್ಪ ಆ ಅದೃಷ್ಟದ ನೋಟನ್ನು ಬ್ಯಾಂಕ್ ಆಫ್ ಲಂಡನ್ನಿಗೆ ಒಯ್ದು ಅದನ್ನು ರದ್ದುಪಡಿಸಿದ. ಬ್ಯಾಂಕು ಅದನ್ನು ಅವನಿಗೆ ಉಡುಗೊರೆಯಾಗಿ ಕೊಟ್ಟಿತು. ಅದನ್ನು ಅವನು ನಮಗೆ ಮದುವೆಯ ಬಳುವಳಿಯಾಗಿ ಕೊಟ್ಟ. ಅದಕ್ಕೆ ಕಟ್ಟು ಹಾಕಿಸಿ, ನಮ್ಮ ಮನೆಯ ಅತ್ಯಂತ ಪವಿತ್ರವಾದ ಸ್ಥಳದಲ್ಲಿ ತೂಗು ಹಾಕಿದ್ದೇವೆ. ಅದೇ ನನಗೆ ನನ್ನ ಪೋರ್ಷಿಯಾಳನ್ನು ಕೊಟ್ಟದ್ದು. ಅದಿಲ್ಲದಿದ್ದರೆ ಅವಳೆಲ್ಲಿ? ನಾನೆಲ್ಲಿ? ನಾನು ಯಾವಾಗಲೂ ಹೇಳುವುದಿಷ್ಟೆ:

"ಅದು ನಿಜವಾಗಿಯೂ ಹತ್ತು ಲಕ್ಷ ಪೌಂಡಿನದೆ, ಅದು ತನ್ನ ಚಲಾವಣೆಯಲ್ಲಿದ್ದಾಗ ಮಾಡಿದ್ದು ಒಂದೇ ಖರೀದಿ; ಅದು ಕೂಡ ಆ ವಸ್ತುವಿನ ಹತ್ತರದಲ್ಲೊಂದು ಪಾಲು ಬೆಲೆಗೆ!" ✡

---

Printed & published by Shri K. Janardana for the Karnataka Patrika Private Ltd. at the Samyukta Karnatak Press, Koppikar Road, Hubli. Rep : Bombay: V. Satyamurthy Tel. No. 522412; Calcutta : H. Muzamdar, Phone: 46-4238 : Madras: K. A. Subramaniam 611326; New Delhi : P. R. Chopra Phone : 224130.